# ನವಕರ್ನಾಟಕ ಪ್ರಕಟಿಸಿರುವ
# ಶ್ರೀಮತಿ ನೇಮಿಚಂದ್ರ ಅವರ ಕೃತಿಗಳು




₹ 140 14ನೇ ಮುದ್ರಣ




₹ 200 3ನೇ ಮುದ್ರಣ




₹ 200 3ನೇ ಮುದ್ರಣ




₹ 165 8ನೇ ಮುದ್ರಣ




₹ 70 3ನೇ ಮುದ್ರಣ




₹ 200 4ನೇ ಮುದ್ರಣ




₹ 25




₹ 25




₹ 25




₹ 25




₹ 75 2ನೇ ಮುದ್ರಣ




₹ 45 3ನೇ ಮುದ್ರಣ




₹ 60 4ನೇ ಮುದ್ರಣ

ಮೂರು ವರ್ಷದ 'ಹೊಸತು' ಚಂದಾದಾರರಿಗೆ 20% ಸೋಡಿ. ಇತರರಿಗೆ 10% ಸೋಡಿ. ನಿವ್ವಳ ₹250ಕ್ಕಿಂತ ಕಡಿಮೆ ಮೊತ್ತದ ಬೇಡಿಕೆಗಳಿಗೆ ಅಂಚೆ/ಕೊರಿಯರ್ ವೆಚ್ಚ ₹25 ಪ್ರತ್ಯೇಕ.

ಆನ್‌ಲೈನ್ ಮೂಲಕವೂ ಲಭ್ಯ  www.navakarnataka.com


ಹಣವನ್ನು ಡಿ.ಡಿ., ಎಂ.ಒ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು - 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@gmail.com http://navakarnataka.blogspot.in

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಕಲಬುರಗಿ ✆ 224302

# ಹೊಸತು




ನೆಮ್ಮದಿಯ ನಾಳೆ ನಮ್ಮದು


**ಜೆ. ಎನ್. ಯು. ವಿದ್ಯಾರ್ಥಿಗಳ ಹೋರಾಟ – ಸರ್ಕಾರದಿಂದ**
**ಐ. ಪಿ. ಸಿ. ಕಲಂ ೧೨೪–ಎ ದುರ್ಬಳಕೆ** *ಮುರಳೀಧರ ಚಿಕ್ಕಮಗಳೂರು* ... ೧೩

**ಸಂಸ್ಕೃತಿ – ಕಲೆಯ ಅಭಿವೃದ್ಧಿಯೇ?** *ಎಂ. ಎಚ್. ಕೃಷ್ಣಯ್ಯ* ... ೩೧

**ಕರ್ನಾಟಕದಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳ ಮುಂದಿರುವ ಇಂದಿನ**
**ಸವಾಲುಗಳು ಮತ್ತು ಸಮಸ್ಯೆಗಳು** *ಡಾ॥ ಟಿ. ಆರ್. ಚಂದ್ರಶೇಖರ* ... ೩೯

**ಶೈಕ್ಷಣಿಕ ಕ್ರಿಯಾಶೀಲತೆಯ ಇನ್ನೊಂದು ಹೆಸರು ಉಮಾ ಚಕ್ರವರ್ತಿ**
*ಸಂದರ್ಶಕರು : ಡಾ॥ ಎನ್. ಗಾಯತ್ರಿ* ... ೨೬

**ಎಸ್. ಎಲ್. ಭೈರಪ್ಪ ಮತ್ತು ರಾಮಾಯಣ ಮಹಾಭಾರತಗಳ ಓದು**
*ಕೆ. ಸುಂದರ ರಾಜ್* ... ೪೬

**ಬೆಳಕು** *ಶ್ರೀಸುಮಿತ್ರಾಸುತ ಅಗಸಬಾಳ* ... ೧೬
**ಜೀನಿಯಸ್ ಹೆಂಡತಿ** *ಡಾ॥ ಪಾರ್ವತಿ ಜಿ. ಐತಾಳ್* ... ೨೫

**ಕಾವ್ಯಲೋಕ** ೨೩, ೨೬, ೨೯, ೪೧, ೫೨, ೫೮

**ಯಾವುದು ರಾಷ್ಟ್ರಪ್ರೇಮ ? ಯಾವುದು ರಾಷ್ಟ್ರದ್ರೋಹ ?**
*ಸಿ. ಆರ್. ಕೃಷ್ಣರಾವ್* ... ೧೬

**ಪತ್ತೆಯಾಗಿವೆ ಗುರುತ್ವಾಕರ್ಷಣ ತರಂಗಗಳು ! ನಿಜವಾಯಿತು**
**ಐನ್‌ಸ್ಟೈನ್‌ನ ೧೦೦ ವರ್ಷಗಳ ಹಿಂದಿನ ಭವಿಷ್ಯವಾಣಿ**
*ಇಂಗ್ಲಿಷ್ ಮೂಲ : ಪ್ರೊ॥ ಬಿ. ಎಸ್. ಸತ್ಯಪ್ರಕಾಶ್*
*ಅನು : ಡಾ॥ ಉಮಾವೆಂಕಟೇಶ್* ... ೧೯

**ಮಕ್ಕಳ ಸಾಹಿತ್ಯ ಒಂದು ಚಿಂತನೆ** *ಕೆ. ಶಿವಲಿಂಗಪ್ಪ ಹಂದಿಹಾಳು* ... ೫೧

**ರಾಷ್ಟ್ರೀಯ ಹೆದ್ದಾರಿಯಲ್ಲಿ ಸಫಾರಿ** *ಚಿತ್ರಲೇಖನ : ಪರಂಜ್ಯೋತಿ* ... ೫೯

**ಬರಲಿರುವ ಸಂದರ್ಶನಗಳ ಒಂದು ಝಲಕ್** *ಎಸ್. ಸುರೇಂದ್ರ* ... ೩೫

**ಬಂಜಾರನ್ ಜನಾಂಗದವರ ಬದುಕು** *ರೇಖಾ ಪಾಟೀಲ್* ... ೨೧

**ಕನ್ನಡದ ಕಾಯಕಯೋಗಿ ಡಾ॥ ಸಾ. ಶಿ. ಮರುಳಯ್ಯ**
*ಕೊಟ್ರೇಶ್ ಎಸ್. ಉಪ್ಪಾರ್* ... ೪೯

**ನಾನು ಓದಿದ ಪುಸ್ತಕ : ಶಿವಾಜಿ ಹಾಗೂ ಕೆಲವು ತಪ್ಪು ತಿಳಿವಳಿಕೆಗಳು**
*ಪ್ರಕಾಶ ಪವರ್ತೀಕರ* ... ೫೫
**ವಿಶ್ವ ವೀಕ್ಷಣೆ : ಬ್ರಿಟನ್ ಮತ್ತು ಯೂರೋಪಿಯನ್ ಯೂನಿಯನ್**
*ಸೀಯಾರ್ಕೆ* ... ೬೨
**ನಭಾವಲೋಕನ : ಚಂದ್ರ – ಶುಕ್ರರ ಸಮಾಗಮ** *ಡಾ॥ ಬಿ. ಎಸ್. ಶೈಲಜಾ* ... ೩೪
**ಹೊಸ ಓದು** *ಇಂದಿರಾಕುಮಾರಿ* ... ೨೪
**ಸಾದರ ಸ್ವೀಕಾರ** ... ೩೨
**ಕ್ಷ–ಕಿರಣ** *ಸಾನ್ವಿ ಪಿ.* ... ೧೨



**ಚಿತ್ರಗಳು :** ಕಮಲಂ ಅರಸು, ರೂಪಶ್ರೀ ಕಲ್ಲಿಗನೂರ್, ಜಿ.ಎಂ. ಬೊಮ್ಮಳ್ಳಿ, ಗೋಪಿ
**ಮುಖಪುಟ :** 'ನೀರ ಹನಿಗಾಗಿ ಹೋರಾಟ'
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಭಾರತದೊಡನೆ ವ್ಯಾಪಾರ–ವ್ಯವಹಾರ ಕುದುರಿಸಲು ಮತ್ತು ಅವುಗಳ ಮೇಲೆ ನಿಗಾ ಇಡಲು ಬ್ರಿಟನ್ನಿನಲ್ಲಿ ಒಂದು ಪರಿಷತ್ತಿದೆ. ಅದರ ಅಧ್ಯಕ್ಷೆ ಪೆಟ್ರೀಸಿಯಾ ಹ್ಯೂಯಿಟ್. ಆಕೆಯದು ಒಂದು ದೊಡ್ಡ ತಕರಾರಿದೆ; ಅದೇನೆಂದರೆ, ನಮ್ಮ ದೇಶದಲ್ಲಿ ವಹಿವಾಟು ನಡೆಸುತ್ತಿರುವ ಬ್ರಿಟನ್ನಿನ ಕಂಪನಿಗಳನ್ನು ನಿಗದಿತ ತೆರಿಗೆ ನೀಡಲು ಒತ್ತಾಯಿಸಬಾರದು, ಎಂದು. ಇಲ್ಲಿ ಹಣ ಹೂಡಿ ವ್ಯಾಪಾರ ಆರಂಭಿಸಿದಾಗ ಇಲ್ಲದಿದ್ದ ಷರತ್ತುಗಳನ್ನು ನಂತರ ಹೇರಬಾರದೆಂಬುದನ್ನು ಅರ್ಥಮಾಡಿಕೊಳ್ಳಬಹುದು, ಆದರೆ ಯಾವ ಷರತ್ತುಗಳ ಆಧಾರದ ಮೇಲೆ ವಹಿವಾಟು ನಡೆಸಲು ಬ್ರಿಟನ್ನಿನ ಕಂಪನಿಗಳು ಇಲ್ಲಿಗೆ ಬಂದವೋ ಆ ಷರತ್ತುಗಳನ್ನು ಉಲ್ಲಂಘಿಸಿದರೂ ಭಾರತ ಸರ್ಕಾರವು ಅವಕ್ಕೇನೂ ನಿರ್ಬಂಧ ವಿಧಿಸಬಾರದೆಂಬುದು ಯಾವ ಅಂತರರಾಷ್ಟ್ರೀಯ ಕಾನೂನೋ ಈ ಪೆಟ್ರೀಸಿಯಾ ಒಬ್ಬಳೇ ಬಲ್ಲಳು. ಸದ್ಯದಲ್ಲಿ ಆಕೆ ಮಧ್ಯಪ್ರವೇಶ ಮಾಡಿ ಆಗ್ರಹಿಸುತ್ತಿರುವುದು ವೋಡಫೋನ್ ಮತ್ತು ಕೇರ್ನ್ ಕಂಪನಿಗಳ ಪರವಾಗಿ. ಈ ವೋಡಫೋನ್ ಆರಂಭದಿಂದಲೂ ತರಲೆ ಎಬ್ಬಿಸುತ್ತಲೇ ಬಂದಿದೆ. ಹಿಂದೆ ಆದಾಯ ತೆರಿಗೆ ಇಲಾಖೆಯು ಈ ಕಂಪನಿಯು ೧೧೦೦೦ ಕೋಟಿ ರೂಪಾಯಿಗಳಷ್ಟು ತೆರಿಗೆ ನೀಡಿರಲಿಲ್ಲವೆಂದು ನ್ಯಾಯಾಲಯದ ಬಾಗಿಲು ಬಡಿದಿತ್ತು. ಕರುಣಾಳು ನ್ಯಾಯಾಲಯವು ಕಂಪನಿಗೆ ಅಭಯಹಸ್ತ ತೋರಿಸಿದ್ದರಿಂದ ನಮ್ಮ ೧೧೦೦೦ ಕೋಟಿ ಆದಾಯ ಹೊಳೆಯಲ್ಲಿ ಹರಿದು ಹೋಗುವಂತಾಯಿತು. ಅಷ್ಟಕ್ಕೂ ನಾವು ಕೇಳುತ್ತಿರುವುದು ಆ ಕಂಪನಿಯು ಮಾಡಿಕೊಂಡಿರುವ ಲಾಭದ ಮೇಲಿನ ತೆರಿಗೆಯೇ ವಿನಾ ಯಾವುದೋ ಅನಿರ್ದಿಷ್ಟ ಜುಲ್ಮಾನೆಯನ್ನಲ್ಲ. ಲಾಭ ಬಂದಿದ್ದು ನಮ್ಮ ದೇಶದ ಜನ ಆ ಕಂಪನಿಯ ವ್ಯಾಪಾರದಲ್ಲಿ ಭಾಗಿಗಳಾಗಿ ಹಣ ಸುರಿದಿದ್ದರಿಂದ. ನಮ್ಮ ದೇಶದ ಕಂಪನಿಗಳನ್ನು ಬೆಳೆಸುವ ಬದಲಾಗಿ ಯಾವ ಅನನ್ಯ ತಾಂತ್ರಿಕತೆಯನ್ನೂ ಹೊಂದದ ವೋಡಫೋನ್ ನಂತಹ ಕಂಪನಿಗಳಿಗೆ ರತ್ನಗಂಬಳಿ ಹಾಸಿದ್ದು ನಮ್ಮ ದೇಶದ ಮೂರ್ಖತನ. ಮನಮೋಹನ ಸಿಂಗ್, ಜಸ್ವಂತ್ ಸಿಂಗ್, ಚಿದಂಬರಂ, ಅರುಣ್ ಜೇಟ್ಲಿ ಇಂಥವರೆಲ್ಲಾ ಇದಕ್ಕೆ ಅಡಿಪಾಯ ತೋಡಿದವರು. ಹಾಳಾಗಲಿ, ಈ ವೋಡಫೋನ್ ಮತ್ತು ಕೇರ್ನ್ ಕಂಪನಿಗಳು ತೆರಬೇಕಾದ ತೆರಿಗೆಯನ್ನು ವಸೂಲು ಮಾಡಬಾರದೆಂದು ಹೇಳಲು ಬಂದಿರುವ ಪೆಟ್ರೀಸಿಯಾ ಆ ಕಂಪನಿಗಳ ದಲ್ಲಾಳಿಯೇ ? ಆಕೆಯ ಬೆದರಿಕೆಯ ಶೈಲಿ ನೋಡಿ ಹೇಗಿದೆ : "ಅಗಾಧ ಮೊತ್ತದ ತೆರಿಗೆ ಕೊಡಬೇಕಾಗಿಲ್ಲವೆಂದು ಕಾನೂನು ತಜ್ಞರು (ಕಪಿಲ್ ಸಿಬಲ್‌ನಂಥವರೆ ?) ನನಗೆ ಹೇಳಿದ್ದಾರೆ. ಹೀಗಿರುವಾಗ ಬಾಕಿ ಇರುವ ತೆರಿಗೆ ಪಾವತಿಸಿದರೆ ಈವರೆಗೆ ಪಾವತಿಸದಿದ್ದುದಕ್ಕೆ ದಂಡ ವಿಧಿಸುವುದಿಲ್ಲವೆಂಬ ಆಶ್ವಾಸನೆಗೆ ಅರ್ಥವಿಲ್ಲ. ಬಾಕಿ ತೆರಿಗೆಯ ಮೇಲೆ ಬಡ್ಡಿ ಮನ್ನಾ ಮಾಡಲಾಗುತ್ತದೆಂಬುದಕ್ಕೂ ಅರ್ಥವಿಲ್ಲ." ಈ ಆಶ್ವಾಸನೆಗಳನ್ನು ಕೊಟ್ಟ ಮಹಾನುಭಾವ ಅರುಣ ಜೇಟ್ಲಿ. ಈ ವರ್ಷದ ಮುಂಗಡ ಪತ್ರದಲ್ಲಿ ಅದು ಅಡಕಗೊಂಡಿದೆ. ವಸೂಲು ಮಾಡಬೇಕಾದ ತೆರಿಗೆಯನ್ನು ಮನ್ನಾ ಮಾಡಲು ಇವರು ಸಚಿವರಾಗಿ ನೇಮಕಗೊಂಡಿದ್ದಾರೆಯೇ ? ರೈತರ ಸಾಲ ಮನ್ನಾ ಮಾಡಿದರೆ ನಮ್ಮ ಆರ್ಥಿಕತೆಗೆ ಪೆಟ್ಟು ಬೀಳುತ್ತದೆಂದು ಹೇಳುವ ಈ ಶ್ರೀಕೃಷ್ಣಮುಖಿ ಜೇಟ್ಲಿಗೆ ವಿದೇಶಿ ಕಂಪನಿಗಳೆಂದರೆ ಎಲ್ಲಿಲ್ಲದ ಅನುಕಂಪ ಮೂಡುತ್ತದೆ. ಸಚಿವರು ಮನ್ನಾ ಮಾಡಹೊರಟಿರುವುದು ಅವರ ಸ್ವಂತದ ಅಥವಾ ಅವರ ತಂದೆಯ ಆಸ್ತಿಯಿಂದ ಗಳಿಸಬಹುದಾಗಿದ್ದ ಬಡ್ಡಿಯಲ್ಲ, ಅದು ದೇಶದ ಜನತೆಯು ವ್ಯಾಪಾರದಲ್ಲಿ ಮಾಡಿಕೊಟ್ಟಿರುವ ಲಾಭದ ಮೇಲಿನ ತೆರಿಗೆ ಪಾವತಿಸದಿದ್ದುದಕ್ಕೆ ಬಡ್ಡಿ, ಅಷ್ಟೆ. ಕಂಪನಿಯು ದ್ರೌಪದಿ ಮತ್ತು ಜೇಟ್ಲಿ ಒಬ್ಬ ದುಶ್ಶಾಸನ ಎಂಬಂತೆ ಕಂಪನಿಯ ರಕ್ಷಣೆಗೆ ಧಾವಿಸಿ ಬಂದಿರುವ ಪೆಟ್ರೀಸಿಯಾಗೆ ಈ ವ್ಯವಹಾರದಲ್ಲಿ ಮೂಗು ತೂರಿಸಲು ಹಕ್ಕಿಲ್ಲ. ಆದರೆ ಜೇಟ್ಲಿ ಅದನ್ನು ಹೇಳುವುದಿಲ್ಲ; ಬದಲಾಗಿ ಪ್ರಾವಿಡೆಂಟ್ ಫಂಡ್ ಹಣದ ಮೇಲೆ ತೆರಿಗೆ ವಿಧಿಸುತ್ತಾರೆ. ಆ ಹಣಕ್ಕೆ ನೌಕರರು ವೇತನ ಪಡೆದಾಗಲೆ ತೆರಿಗೆ ಕೊಟ್ಟಿರುತ್ತಾರೆ. ಹಣವನ್ನು ದುರ್ವ್ಯಯ ಮಾಡಿ ಸಂಕಷ್ಟಕ್ಕೆ ಸಿಲುಕುತ್ತಾರೆಂಬ ಕಾಳಜಿ, ಪಾಪ ಜೇಟ್ಲಿ ಅವರಿಗೆ. ಆದ್ದರಿಂದ ಎರಡನೆ ಬಾರಿ ತೆರಿಗೆ ಹೇರುತ್ತಾರೆ. ವೋಡಫೋನ್–ಕೇರ್ನ್ ಕಂಪನಿಗಳಿಗಾದರೆ ಬಡ್ಡಿ ಮನ್ನಾ ಮಾಡುತ್ತಾರೆ, ಆಮೇಲೆ ತೆರಿಗೆಯನ್ನೂ ಮನ್ನಾ ಮಾಡುತ್ತಾರೆ ! ನಮ್ಮ ದೇಶ ಉದ್ಧಾರ ಮಾಡಲು ಬಂದಿರುವ ವಿದೇಶಿ ಕಂಪನಿಗಳಿಗೆ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ–೧೭ ಸಂಚಿಕೆ–೯ ಏಪ್ರಿಲ್ ೨೦೧೬

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಕೆ. ಎಲ್. ಗೋಪಾಲಕೃಷ್ಣಯ್ಯ

ರಾಮಲಿಂಗಪ್ಪ ಟಿ. ಬೇಗೂರು

ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್

ವ್ಯವಸ್ಥಾಪಕ ನಿರ್ದೇಶಕ

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**

೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ

೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ

ಬೆಂಗಳೂರು – ೫೬೦ ೦೫೮

ದೂರವಾಣಿ: ೨೮೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧

ದೂರವಾಣಿ: ೩೦೫೭೮೦೨೯, ೨೨೨೦೩೫೮೦

ಫ್ಯಾಕ್ಸ್: ೩೦೫೭೮೦೨೩

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http ://navakarnataka.blogspot.in**

**http ://hosathumonthly.blogspot.in**




# ಸಂಪಾದಕೀಯ

## ಆಯವ್ಯಯವೆಂಬ ಪ್ರಹಸನ

ಪ್ರತಿ ಹೊಸವರ್ಷ ಆರಂಭಕ್ಕೆ ಆಯವ್ಯಯವೆಂಬ ಬಜೆಟ್ ಪ್ರಹಸನದ ರಿಹರ್ಸಲ್ ಆರಂಭವಾಗುತ್ತದೆ. ಮಾರ್ಚ್ ಅಂತ್ಯಕ್ಕೆ ಈ ಪ್ರಹಸನದ ಮುಕ್ತಾಯವಾಗುತ್ತದೆ. ಮಾರ್ಚ್ ತಿಂಗಳನ್ನು 'ಕ್ರಾಂತಿಕಾರಿ' ಮಾಸವೆಂದು ಕರೆಯಬಹುದು. ಕಾರಣ ಕಳೆದ ವರ್ಷ ಮಂಡಿಸಿದ ಆಯ–ವ್ಯಯದಲ್ಲಿ ಘೋಷಿಸಿದ ಯೋಜನೆ, ದಾನ ಅನುದಾನಗಳನ್ನು ಪೂರ್ಣಗೊಳಿಸುವ ಮಾಸವದು. ನಮ್ಮ ಕೇಂದ್ರ ಸರ್ಕಾರವೇ ಆಗಲಿ ರಾಜ್ಯ ಸರ್ಕಾರವೇ ಆಗಲಿ ಬಜೆಟ್ ಮಂಡನೆಯ ಸಮಯದಲ್ಲಿ ಎರಡು ತಿಂಗಳ ಹಿಂದಿನ ಅಂದರೆ, ಜನವರಿವರೆಗಿನ ತಮ್ಮ ಯೋಜನೆಗಳ ಅನುಷ್ಠಾನದ ಅಂಕಿಸಂಖ್ಯೆಗಳನ್ನೇ ಕೊಡುತ್ತವೆ. ಅದು ಪ್ರತಿಬಾರಿ ಪ್ರತಿಶತ ೬೦ರಿಂದ ೭೦ರಷ್ಟು ಅನುಷ್ಠಾನವಾಗಿರುತ್ತದೆ. ಅಲ್ಲಿಂದ ಎರಡು ತಿಂಗಳ ಅವಧಿಯಲ್ಲಿ ಅಂದರೆ ಮಾರ್ಚ್ ತಿಂಗಳ ಹೊತ್ತಿಗೆ ಉಳಿದ ಪ್ರತಿಶತ ೪೦ರಿಂದ ೩೦ರಷ್ಟು ಜಾರಿಯಾಗಿ ಏಪ್ರಿಲ್ ೧ರ ಹೊತ್ತಿಗೆ ಹೊಸ ಯೋಜನೆಗಳ ಜಾರಿಗೆ ಸರಕಾರಗಳು ಸಿದ್ಧವಾಗುತ್ತವೆ. ನಮ್ಮ ಅಧಿಕಾರಶಾಹಿ ಎಷ್ಟು ಪ್ರಬಲವಾಗಿದೆಯೆಂದರೆ ಕೇವಲ ಎರಡು ತಿಂಗಳ ಅವಧಿಯಲ್ಲಿ ಇಡೀ ವರ್ಷ ಮಾಡಲಾಗದ ಕೆಲಸವನ್ನು ಮಾಡಿ ಮುಗಿಸುತ್ತದೆ. ಇದು ಸಮರೋಪಾದಿಯಲ್ಲಿ ನಡೆಯುತ್ತದೆ. ಬಿಲ್‌ವಿದ್ಯೆಯಲ್ಲಿ ಪರಿಣತರಾದ ಅಧಿಕಾರಿಗಳು ಈ ಸಮರದಲ್ಲಿ ಕ್ರಿಯಾಶೀಲರಾಗಿ ಅಂಕಿಸಂಖ್ಯೆಗಳನ್ನು ಸಿದ್ಧಗೊಳಿಸುತ್ತಾರೆ. ಅದನ್ನು ನಮ್ಮ ಮಂತ್ರಿಮಹೋದಯರು ಸಾದರಪಡಿಸುತ್ತಾರೆ. ಇದರ ಮಧ್ಯೆ ಬಿಲ್‌ವಿದ್ಯೆಯನ್ನೂ ಕರಗತಮಾಡಿಕೊಳ್ಳಲಾಗದ ಕೆಲ ಸೋಮಾರಿಗಳು ಸಿಕ್ಕ ಅನುದಾನ ಬಳಕೆಯಾಗದೆ ಹಿಂತಿರುಗಿ ಹೋಗಲೂ ಕಾರಣರಾಗುತ್ತಾರೆ. ಅತೀ ಕಡಿಮೆ ಸಂಖ್ಯೆಯಲ್ಲಿರುವ ಪ್ರಾಮಾಣಿಕ ಅಧಿಕಾರಿಗಳು ಸರಕಾರಕ್ಕೆ ದುಡ್ಡು ಹಿಂತಿರುಗಿ ಹೋದರೂ ಸರಿ ಸುಳ್ಳು ಲೆಕ್ಕ ತೋರಿಸುವುದು ಬೇಡವೆಂದು ವಾರ್ಷಿಕ ಲೆಕ್ಕಪೂರ್ತಿ ಮಾಡುತ್ತಾರೆ. ಇಂಥವರ ಸಂಖ್ಯೆ ಕೈ ಬೆರಳೆಣಿಕೆಯಷ್ಟಿರುತ್ತದೆ.

ಅಂಕಿಸಂಖ್ಯೆಗೂ ವಾಸ್ತವಕ್ಕೂ ಅಜಗಜ ಅಂತರವಿರುತ್ತದೆ. ಬಜೆಟ್ ಮಂಡನೆಯ ಸಂದರ್ಭದ ಯೋಜನೆಗಳಿಗೆ ಕೊಡುವ ಹೆಸರುಗಳು ಅತ್ಯಾಕರ್ಷಕವಾಗಿರುತ್ತವೆ. ಈ ಸಲದ ಕೇಂದ್ರ ಸರಕಾರ ಮಂಡಿಸಿದ ಅರುಣ ಜೇಟ್ಲಿಯವರ 'ಗಾಂವ್, ಗರೀಬ್, ಕಿಸಾನ್' ಪರ ಬಜೆಟ್‌ನ್ನೇ ಗಮನಿಸಿದರೆ ಅದು ಹಳ್ಳಿಗರ, ಬಡವರ ರೈತರ ಪರವಾಗಿರದೆ ಮುಂಬರುವ ಐದು ರಾಜ್ಯಗಳ ಚುನಾವಣೆಯನ್ನು ಗಮನದಲ್ಲಿಟ್ಟುಕೊಂಡ ಬಜೆಟ್. ಐದು ವರ್ಷದಲ್ಲಿ ರೈತರ ಆದಾಯ ದುಪ್ಪಟ್ಟಾಗುತ್ತದೆ ಎಂದು ಹೇಳುವ ವಿತ್ತ ಸಚಿವರು ಅದು ಹೇಗೆ ಎಂದು ಹೇಳುವುದಿಲ್ಲ. ಭಾರತದಂಥ ದೊಡ್ಡ ದೇಶದಲ್ಲಿ ಇವರು ಘೋಷಿಸುವ ಲಕ್ಷ ಕೋಟಿಯ ಲೆಕ್ಕದಲ್ಲಿನ ಸೊನ್ನೆಗಳ ಸಂಖ್ಯೆ ಹೆಚ್ಚಿರುತ್ತದೆಯೇ ಹೊರತು ಫಲಾನುಭವಿಗಳ ಸಂಖ್ಯೆಗೆ ಹೋಲಿಸಿದಾಗ ಈ ಲಕ್ಷ ಕೋಟಿಗಳು ಅರ್ಥ ಕಳೆದುಕೊಳ್ಳುತ್ತವೆ. ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಗೆ ೩೮,೫೦೦ ಕೋಟಿ, ಆರೋಗ್ಯಕ್ಕೆ ೩೩,೧೫೨ ಕೋಟಿ ಹೀಗೆ ಪ್ರತಿ ಇಲಾಖೆಗೆ, ವಲಯಕ್ಕೆ ಘೋಷಣೆ ಮಾಡಿ ತಾವೆಷ್ಟು ಬಡವರ ಪರವೆಂದು ಹೇಳಿ ಬೆನ್ನು ತಟ್ಟಿಕೊಳ್ಳುತ್ತಾರೆ. ವಾಸ್ತವದಲ್ಲಿ ೨೦೦೫ರಿಂದ (ಕಾನೂನು ಆಗಿ) ಆರಂಭವಾದ ಉದ್ಯೋಗ ಖಾತ್ರಿ ಯೋಜನೆಯನ್ನು ಟೀಕಿಸುತ್ತ, ವಿರೋಧಿಸುತ್ತ ಬಂದ ಬಿ.ಜೆ.ಪಿ. ಇಂದು ತಾನು ಅದರ ಪರವಾಗಿದ್ದೇನೆಂದು ಹೇಳಿಕೊಳ್ಳುತ್ತಿದೆ. ಕಾರಣ ಇದು ಚುನಾವಣೆಯ ಸಂದರ್ಭ. ದೇಶದ ಹೆಚ್ಚಿನ ರಾಜ್ಯಗಳಲ್ಲಿ ಬರಗಾಲ ತಾಂಡವವಾಡುತ್ತಿರುವಾಗ ಉದ್ಯೋಗ ಖಾತ್ರಿ ಯೋಜನೆಗೆ ಒದಗಿಸಿದ ಹಣವನ್ನು ತಲಾವಾರು ವಿಂಗಡಿಸಿದಾಗ ಇವರ ಸಾವಿರ ಕೋಟಿ ರೂಪಾಯಿಗಳು ಬಿಡಿಗಾಸಿನ ರೂಪದಲ್ಲಿ ಗೋಚರವಾಗುತ್ತವೆ. ಆರೋಗ್ಯಕ್ಕೆ ಕೊಟ್ಟ ಹಣ ಸಹಿತ ಒಂದು ಬಡಕುಟುಂಬದ ವರ್ಷಪೂರ್ತಿ ಆರೋಗ್ಯ ರಕ್ಷಣೆಗೆ ಸಾಕಾಗುವುದಿಲ್ಲ. ಆ ಹಣ ಪರೋಕ್ಷವಾಗಿ ಖಾಸಗಿ ಆಸ್ಪತ್ರೆ, ಹಾಗೂ ವಿಮಾ ಕಂಪನಿಗಳ ಪಾಲಾಗುವಂತೆ ಯೋಜನೆ ರೂಪಿಸಲಾಗಿದೆ. ಕೃಷಿಕರಿಗೆ ಕೊಡುವ ಸಹಾಯ ಧನ ಬೀಜ, ರಸಗೊಬ್ಬರ, ರಸಾಯನಿಕ ಕಂಪನಿಗಳ ಪಾಲಾಗುತ್ತದೆ. ಪರೋಕ್ಷವಾಗಿ ಕಾರ್ಪೊರೇಟ್ ಕಂಪನಿಗಳಿಗೆ ಲಾಭವಾಗುವ ರೀತಿಯಲ್ಲಿ ಈ ವ್ಯಾಪಾರಿಗರ ಪಕ್ಷವಾದ ಬಿ.ಜೆ.ಪಿ.ಯ ಸರಕಾರ ತನ್ನ ಬಜೆಟ್‌ನ್ನು ರೂಪಿಸುವುದನ್ನು ನೋಡಿ ಅಚ್ಚರಿ ಪಡಬೇಕಾದದ್ದೇನೂ ಇಲ್ಲ. ಕಾರ್ಪೊರೇಟ್ ಕಂಪನಿಗಳ ತೆರಿಗೆ ಮನ್ನಾ ಮಾಡಿ ನೌಕರರ ಭವಿಷ್ಯ ನಿಧಿ (ಇಪಿಎಫ್) ಮೇಲೆ ತೆರಿಗೆ ಹಾಕುವ ಯತ್ನ ಮಾಡಿದ ಈ ಸರಕಾರದ ನೀತಿ ಮೇಲ್ನೋಟಕ್ಕೆ ಯಾರ ಪರ ಎಂಬುದು ಗೋಚರವಾಗುತ್ತದೆ. ರೈತರ ಆದಾಯ ದ್ವಿಗುಣಗೊಳಿಸುತ್ತೇವೆಂದು ಹೇಳುತ್ತಲೇ ರೈತರ ಬದುಕಿಗೆ ಮಾರಕವಾಗುವ ಭೂಸ್ವಾಧೀನ ಕಾನೂನಿಗೆ ತಿದ್ದುಪಡಿ ತರಲು ಹಪಹಪಿಸುತ್ತಿರುವ ಈ ಮೋದಿ ಸರ್ಕಾರದ ರೈತಪರ ಎಂಬ ಪ್ರಹಸನವನ್ನು ದೇಶದ ರೈತರು ಅರ್ಥ ಮಾಡಿಕೊಳ್ಳಬೇಕು.

ಕರ್ನಾಟಕದಲ್ಲಿ ಮುಖ್ಯಮಂತ್ರಿಗಳೂ ವಿತ್ತಸಚಿವರೂ ಆದ ಸಿದ್ದರಾಮಯ್ಯನವರು ಬಜೆಟ್ ಮಂಡಿಸಿದ್ದಾರೆ. ಈ ಬಾರಿ ಬಜೆಟ್ ನಂತರದ ದಿನಗಳಲ್ಲಿ ತಕ್ಷಣಕ್ಕೆ ಯಾವುದೇ ಚುನಾವಣೆಗಳಲ್ಲಿದ್ದುದರಿಂದ

ಜನಪ್ರಿಯ ಘೋಷಣೆಗಳಿಗೆ ಸಿದ್ದರಾಮಯ್ಯನವರು ಕೈ ಹಾಕಿಲ್ಲ. ಆ ಥರದ ಯಾವ ಒತ್ತಡ, ಅನಿವಾರ್ಯತೆ ಅವರ ಮೇಲಿರಲಿಲ್ಲ. ಆದರೂ ಆಯವ್ಯಯದಲ್ಲಿ ಹೆಚ್ಚು ದಾನ, ಅನುದಾನ, ಸಹಾಯಧನಗಳ ಅಂಕಿಸಂಖ್ಯೆಗಳು ತುಂಬಿವೆ. ಆಯವ್ಯಯದಲ್ಲಿ ಇವು ಇರಬಾರದೆಂದಲ್ಲ. ಅನುದಾನ, ಸಹಾಯಧನಗಳು ಕೇವಲ ಒಂದು ವರ್ಷದ ಮಿತಿಯನ್ನು ಹೊಂದಿರುತ್ತವೆ. ದಲಿತರು, ಹಿಂದುಳಿದವರು, ಒಟ್ಟಾರೆ ಬಡವರು ಸ್ವಾವಲಂಬಿಗಳಾಗುವಂತೆ ಮಾಡುವ ಯೋಜನೆಗಳನ್ನು ಹಂತಹಂತವಾಗಿಯಾದರೂ ರೂಪಿಸಬಹುದಿತ್ತು. ಕಾಂಗ್ರೆಸ್ ಪಕ್ಷ ಆರ್ಥಿಕ, ಕಾರ್ಪೊರೇಟ್ ಪರ ನೀತಿಗಳಲ್ಲಿ ಬಿ.ಜೆ.ಪಿ.ಗಿಂತ ಭಿನ್ನವೇನಲ್ಲ. ಆದರೆ ಅಹಿಂದ ನೀತಿ ಹೇಳುವ ಸಿದ್ದರಾಮಯ್ಯನವರ ಮೇಲೆ ಕಾಂಗ್ರೆಸ್ ಪಕ್ಷವನ್ನು ಹೊರತುಪಡಿಸಿ ಕೆಲವು ನಿರೀಕ್ಷೆಗಳಿವೆ. ನಿರೀಕ್ಷೆಯಂತೆಯೇ ಅವರ ಬಜೆಟ್‌ನಲ್ಲಿ ಅಹಿಂದ ಪರ ಒಲವು ಇದೆ. ಅದರ ಜೊತೆಗೆ ಗ್ರಾಮೀಣ ಭಾಗಕ್ಕೆ ಒತ್ತುಕೊಟ್ಟಿದ್ದಾರೆ. ಒಟ್ಟು ಬಜೆಟ್‌ನಲ್ಲಿ ೨೦೧೬–೧೭ರ ಅವಧಿಗೆ ಕೃಷಿಗೆ ೪೩೪೪ ಕೋಟಿ, ತೋಟಗಾರಿಕೆಗೆ ೭೫೩ ಕೋಟಿ, ಪಶುಸಂಗೋಪನೆಗೆ ೧೮೮೬ ಕೋಟಿ, ರೇಷ್ಮೆಗೆ ೩೬೭ ಕೋಟಿ, ಮೀನುಗಾರಿಕೆಗೆ ೩೦೨ ಕೋಟಿ ಹೀಗೆ ಗ್ರಾಮೀಣ ಬದುಕಿಗೆ ಸಂಬಂಧಿಸಿದಂತೆ ವಿವಿಧ ಇಲಾಖೆಗಳಿಗೆ ಹಣ ಹಂಚಿಕೆ ಮಾಡಿದ್ದಾರೆ. ಇಂಥ ಹಂಚಿಕೆಯನ್ನು ಅವರು ಈ ಮೊದಲು ಹಲವಾರು ಬಾರಿ ಮಾಡಿದ್ದಾರೆ. ಆದರೂ ರೈತರ ಆತ್ಮಹತ್ಯೆ ಪ್ರಕರಣಗಳು ಹೆಚ್ಚುತ್ತಲೇ ಇವೆ. ಗ್ರಾಮೀಣ ಭಾಗದ ಬಡವರು ಪರರಾಜ್ಯಗಳಿಗೆ ಮತ್ತು ನಗರಗಳಿಗೆ ವಲಸೆ ಹೋಗುವುದು ನಡೆದೇ ಇದೆ. ೨೦೧೧ರ ಜನಗಣತಿಯ ಪ್ರಕಾರ ರಾಜ್ಯದ ಕೃಷಿ ಅವಲಂಬಿತರ ಸಂಖ್ಯೆ ಶೇ. ೪೯ಕ್ಕಿಳಿದಿದೆ. ರಾಜ್ಯದ ಒಟ್ಟು ಆಂತರಿಕ ಉತ್ಪನ್ನದಲ್ಲಿ ಕೃಷಿ ವಲಯದ ಪಾಲು ಕಳೆದ ವರ್ಷ ಶೇ. ೧೪ ಇದ್ದರೆ ಈ ವರ್ಷ ಶೇ. ೮ಕ್ಕೆ ಇಳಿಕೆಯಾಗಿದೆ. ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ ಜಾರಿಯಲ್ಲಿದ್ದರೂ, ಸುಮಾರು ೫೭ ಲಕ್ಷ ಕುಟುಂಬಗಳು ಕೆಲಸದ ಚೀಟಿ ಪಡೆದಿದ್ದರೂ ವಲಸೆ ನಿಂತಿಲ್ಲ. ಇವೆಲ್ಲ ಕೇವಲ ಅನುದಾನ ಅಥವಾ ಸಹಾಯಧನಗಳಿಂದ ಪರಿಹಾರವಾಗುವ ಸಮಸ್ಯೆಗಳಲ್ಲ. ಸಿದ್ದರಾಮಯ್ಯನವರು ಗಣಿ ಭ್ರಷ್ಟಾಚಾರದ ವಿರುದ್ಧ ಕಾಲ್ನಡಿಗೆ ಜಾಥಾ ಮಾಡಿ ಹಿಂದಿನ ಭ್ರಷ್ಟ ಬಿ.ಜೆ.ಪಿ. ಸರಕಾರದ ವಿರುದ್ಧ ಹೋರಾಡಿದರು. ಆದರೆ ಅವರ ಸರಕಾರ ಬಂದ ಮೇಲೆ ಭ್ರಷ್ಟಾಚಾರವೇನೂ ಕಡಿಮೆಯಾಗಲಿಲ್ಲ. ಬಿಲ್‌ವಿದ್ಯಾಪಾರಂಗತ ಅಧಿಕಾರಿಶಾಹಿಯನ್ನು ನಿಯಂತ್ರಿಸುವ ಕೆಲಸ ಈ ಸರಕಾರದಿಂದಾಗಿಲ್ಲ. ಹೀಗಾಗಿ ನರೇಗಾದಂಥ ಕೇಂದ್ರ ಸರಕಾರದ ಯೋಜನೆಗಳನ್ನೊಳಗೊಂಡು ರಾಜ್ಯ ಸರಕಾರದ ಬಹುತೇಕ ಯೋಜನೆಗಳು ಸೂಕ್ತವಾದ ರೀತಿಯಲ್ಲಿ ಅನುಷ್ಠಾನಗೊಂಡಿಲ್ಲ. ಇಲಾಖೆಗೆ ದುಡ್ಡು ಹಂಚುವ ಪೋಸ್ಟ್‌ಮನ್ ಕೆಲಸ ಮಾಡಿದಾಕ್ಷಣ ಅಥವಾ ಬಜೆಟ್ ಮಂಡನೆಯ ಸಂದರ್ಭದಲ್ಲಿ ಸಾವಿರ ಕೋಟಿಯ ಅಂಕಿಸಂಖ್ಯೆಗಳನ್ನು ಘೋಷಿಸಿದ ತಕ್ಷಣ ರಾಜ್ಯದ ಅಭಿವೃದ್ಧಿಯಾಗುವುದಿಲ್ಲ. ಅದರ ಜಾರಿಗಾಗಿ ಪ್ರಾಮಾಣಿಕ ಪಡೆಯನ್ನು ರೂಪಿಸಬೇಕು. ಸಿದ್ದರಾಮಯ್ಯನವರು ಹೊರಟ ರೀತಿ ನೋಡಿದರೆ ಅದು ಸಾಧ್ಯವೆಂದೆನಿಸುವುದಿಲ್ಲ.

ಬಜೆಟ್‌ನಲ್ಲಿ ಸಿದ್ದರಾಮಯ್ಯನವರು "ಕರ್ನಾಟಕ ರಾಜ್ಯ ಕೃಷಿ ಮತ್ತು ರೈತರ ಕಲ್ಯಾಣ ಸಮಿತಿ" ರಚಿಸಿ ಕೃಷಿ ಮತ್ತು ರೈತರ ಕಲ್ಯಾಣಕ್ಕಾಗಿ ಶ್ರಮಿಸುವುದಾಗಿ ಹೇಳಿದ್ದಾರೆ, ಇದು ಸ್ವಾಗತಾರ್ಹವೇ, ಆದರೆ ಅದರ ವಿವರಗಳನ್ನು ಕೊಟ್ಟಿಲ್ಲ. ಈಗಾಗಲೇ ಇರುವ ಹತ್ತಾರು ಮಂಡಳಿಗಳ ಹಾಗೆ ಇದೂ ಒಂದಾದರೆ ಪ್ರಯೋಜನವಿಲ್ಲ. ಕೇಂದ್ರ ಸರಕಾರ ಭೂಸ್ವಾಧೀನ ಹಾಗೂ ಕಾರ್ಪೊರೇಟ್ ಕೃಷಿ ನೀತಿ ಜಾರಿಗೆ ತರಲು ತುದಿಗಾಲ ಮೇಲೆ ನಿಂತಿದೆ. ಹಿಂದಿನ ಕಾಂಗ್ರೆಸ್ ಸರಕಾರದ ಪ್ರಧಾನಿ ಮನಮೋಹನ್ ಸಿಂಗ್ ಅವರೂ ಅದನ್ನೇ ಮಾಡಿದ್ದರು. ಇಂಥ ಸಂದರ್ಭದಲ್ಲಿ ರೈತರ ಸಹಕಾರಿ ಸಂಘಗಳನ್ನು ಸ್ಥಾಪಿಸಿ ಕಾರ್ಪೊರೇಟ್ ಕೃಷಿಗೆ ಪ್ರತಿಯಾಗಿ 'ಸಹಕಾರಿ ಕೃಷಿ' ವ್ಯವಸ್ಥೆಯನ್ನು ರೂಪಿಸುವಲ್ಲಿ ರಾಜ್ಯ ಸರಕಾರ ಯೋಚಿಸಬೇಕು. ಈಗ ಸಹಕಾರಿ ಬ್ಯಾಂಕ್‌ಗಳಿವೆ, ಹಾಲು ಒಕ್ಕೂಟ, ಕುರಿ, ಮೀನುಗಾರಿಕೆ ಹೀಗೆ ಹಲವಾರು ಕ್ಷೇತ್ರಗಳಲ್ಲಿ ಸಹಕಾರಿ ವ್ಯವಸ್ಥೆ ಇದೆ. ಆದರೆ ಕೃಷಿ ಮತ್ತು ಕೃಷಿ ಚಟುವಟಿಕೆಗಳನ್ನೇ ಸಹಕಾರಿ ವ್ಯವಸ್ಥೆಗೆ ತಂದು ರೈತರನ್ನು ಮಾನಸಿಕವಾಗಿ ಸಿದ್ಧಪಡಿಸಿದರೆ ಕಾರ್ಪೊರೇಟ್ ಕೃಷಿ ವ್ಯವಸ್ಥೆಯನ್ನು ಎದುರಿಸಲು ಸಾಧ್ಯವಾಗುತ್ತದೆ. ಸಿದ್ದರಾಮಯ್ಯನವರು ತಮ್ಮ ಆಯ–ವ್ಯಯ ಪತ್ರಿಕೆಯಲ್ಲಿ ಹೇಳಿದಂತೆ ಭಾರತದ ಮೊಟ್ಟಮೊದಲ ಕೃಷಿ ಸಹಕಾರ ಸಂಘ ನಮ್ಮ ರಾಜ್ಯದ ಗದಗ ಜಿಲ್ಲೆಯ ಕಣಗಿನಹಾಳದಲ್ಲಿದೆ. ಅದರ ಪ್ರಯೋಗ ಹೇಗೇ ಇರಲಿ, ಅದನ್ನು ಮಾದರಿಯನ್ನಾಗಿಸಿ ಯಶಸ್ಸಿನತ್ತ ಕೊಂಡೊಯ್ಯಬೇಕು. ಅದು ಮುಂಬರುವ ಸಹಕಾರಿ ಕೃಷಿ ವ್ಯವಸ್ಥೆಗೆ ಉದಾಹರಣೆಯಾಗಬೇಕು. ಮುಂಬರುವ ದಿನಗಳಲ್ಲಿ ರೈತರ ಬದುಕು, ಕೃಷಿ ವ್ಯವಸ್ಥೆ ಇನ್ನೂ ಅತಂತ್ರವಾಗುತ್ತದೆ. ಆಗ ರೈತರಿಗೆ ರೈತರೇ ಆಸರೆಯಾಗುವ ಸಹಕಾರಿ ಕೃಷಿ ವ್ಯವಸ್ಥೆ ಅನಿವಾರ್ಯವಾಗುತ್ತದೆ. ನಮ್ಮಲ್ಲಿನ ವ್ಯಕ್ತಿವಾದಿ, ಬಂಡವಾಳವಾದಿ ಮನೋಭಾವದಿಂದಾಗಿ ಈಗಿರುವ ಹಲವಾರು ಸಹಕಾರಿ ಸಂಸ್ಥೆಗಳು ಯಶಸ್ವಿಯಾಗಿರಲಿಕ್ಕಿಲ್ಲ. ಆದರೂ ಮುಂದಿನ ದಿನಗಳಲ್ಲಿ ಅದನ್ನು ಯಶಸ್ವಿಯಾಗಿಸುವ ಮಾರ್ಗಗಳನ್ನು ಕಂಡುಕೊಳ್ಳುವುದು ಅನಿವಾರ್ಯ ಹಾಗೂ ಅವಶ್ಯಕತೆಯಾಗುತ್ತದೆ.

ನಮ್ಮ ರಾಜ್ಯದ ಕಾರ್ಮಿಕರು, ಕಾರ್ಮಿಕ ಸಂಘಟನೆಗಳ ವಿಷಯದಲ್ಲಿ ನಮ್ಮ ಮುಖ್ಯಮಂತ್ರಿ ಸಿದ್ದರಾಮಯ್ಯನವರು ಆರಂಭದಿಂದಲೂ ಉದಾಸೀನತೆಯನ್ನೇ ತೋರಿದ್ದಾರೆ. ಅದೇ ನಿರ್ಲಕ್ಷ್ಯ ಅವರ ಬಜೆಟ್‌ನಲ್ಲಿಯೂ ವ್ಯಕ್ತವಾಗಿದೆ. ಸಿದ್ದರಾಮಯ್ಯನವರು ಕೇವಲ ವಿತ್ತಸಚಿವರಲ್ಲ, ರಾಜ್ಯದ ಮುಖ್ಯಮಂತ್ರಿಗಳೂ



ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಹೌದು. ಕೇಂದ್ರ ಸರಕಾರ ರೈತವಿರೋಧಿ, ಕಾರ್ಮಿಕ ವಿರೋಧಿ ನೀತಿಗಳನ್ನು ಅನುಸರಿಸುತ್ತಿರುವಾಗ ರಾಜ್ಯದ ಕಾಂಗ್ರೆಸ್ ಸರಕಾರದ ಮೇಲೆ ಅತಿ ಹೆಚ್ಚಿನ ಜವಾಬ್ದಾರಿಯಿದೆ. ಈಗಾಗಲೇ ಬಿ.ಜೆ.ಪಿ.ಯವರು ಮುಂದಿನ ಅವಧಿಗೆ ಅಧಿಕಾರ ಹಿಡಿಯಲು ಚಡ್ಡಿ ತೊಟ್ಟು ಸಿದ್ಧರಾಗಿದ್ದಾರೆ. ಇಂಥ ಸಂದರ್ಭದಲ್ಲಿ ಸಿದ್ದರಾಮಯ್ಯನವರು ರಾಜ್ಯದ ಅಹಿಂದ ಮತ್ತು ರೈತ ಕಾರ್ಮಿಕ ವರ್ಗದ ಜನ ಸಮೂಹವನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು. ಅವರು ಮಂಡಿಸಿದ ಬಜೆಟ್ ಅಂಕಿ ಅಂಶಗಳ ದಾಖಲೆಯಾಗಬಾರದು. ಅದರ ಜಾರಿಗಾಗಿ ನಿರಂತರ ಶ್ರಮಿಸಬೇಕು. ಬಜೆಟ್ ಅಂತಿಮ ನೀತಿಯಲ್ಲ. ದಿನನಿತ್ಯದ ಆಡಳಿತದಲ್ಲಿಯೂ ಜನಪರ ಕಾಳಜಿ ಆದ್ಯತೆ ಪಡೆಯಬೇಕು. ಅಧಿಕಾರಶಾಹಿಯ ಮಿತಿ ಜನಪ್ರತಿನಿಧಿಗಳ ಮಿತಿ ಆಗಬಾರದು. ಬಜೆಟ್ ಮಂಡಿಸುವಾಗ ವಿದ್ಯುತ್ ನಿಲುಗಡೆ, ಆಯ–ವ್ಯಯ ಪುಸ್ತಕದ ಮೊದಲ ಹದಿನಾರು ಪುಟಗಳು ಮತ್ತೆ ಪ್ರಿಂಟಾಗಿದ್ದು ತಾಂತ್ರಿಕ ದೋಷಗಳು ಮಾತ್ರವಲ್ಲ, ಇದು ಮೇಲ್ನೋಟ, ಮೇಲ್ಮಟ್ಟದಲ್ಲಿಯೇ ಅಧಿಕಾರಶಾಹಿಯ ನಿರ್ಲಕ್ಷ್ಯತನ ಮತ್ತು ಬೇಜವಾಬ್ದಾರಿತನಗಳನ್ನು ತೋರಿಸುತ್ತವೆ. ಇನ್ನು ಕೆಳಹಂತದ ಅಧಿಕಾರಶಾಹಿ ಹೇಗಿರಬೇಡ? ಸರ್ಕಾರ ಎಂಥ ನೀತಿ ತಂದರೂ ಅದನ್ನು, ಅದರ ಆಶಯಗಳನ್ನು ಮಣ್ಣುಪಾಲು ಮಾಡುವ ಅಪಾರ ಶಕ್ತಿ ನಮ್ಮ ಭ್ರಷ್ಟ ನೌಕರಶಾಹಿಗಿದೆ. ಅದನ್ನು ನಿಯಂತ್ರಿಸದೆ ಯಾವುದೇ ಯೋಜನೆ ಫಲಾನುಭವಿಗಳಿಗೆ ಉದ್ದೇಶಿತ ರೀತಿಯಲ್ಲಿ ತಲುಪುವುದಿಲ್ಲ. ಇದನ್ನು ಆಳುವವರು ಅರ್ಥ ಮಾಡಿಕೊಳ್ಳಬೇಕು.

## ಸಿದ್ದು ಸರಕಾರದ ಎಡಬಿಡಂಗಿ ನೀತಿಗೆ ಬಲಿಪಶು

ಭ್ರಷ್ಟಾಚಾರ ನಿರ್ಮೂಲನ ಎನ್ನುವುದು ಒಂದು ಮಾಯಾಮೃಗ. ರಾಜಕಾರಣಿಗಳು ಯಾರೇ ಅಧಿಕಾರಕ್ಕೆ ಬಂದರೂ ಅದನ್ನು ಬೇಕಾದ ಹಾಗೆ ಉಪಯೋಗಿಸಿಕೊಳ್ಳುತ್ತಾರೆ. ಎಂಥದ್ದೇ ಆರೋಪ ಬಂದರೂ ಅದರಿಂದ ಜಾರಿಕೊಳ್ಳುವ ವ್ಯವಧಾನವನ್ನು ಅಧಿಕಾರದಲ್ಲಿರುವವರು ಸೃಷ್ಟಿಸಿಕೊಂಡಿರುತ್ತಾರೆ. ಇದುವರೆಗೆ ಭ್ರಷ್ಟ ಅಧಿಕಾರಿಯೋ, ಸಚಿವನೋ ಶಿಕ್ಷೆಗೆ ಒಳಗಾಗಿ ಕಾರಾಗೃಹದಲ್ಲಿ ಕೊಳೆಯುತ್ತಿರುವ ಪ್ರಕರಣವಂತೂ ಗಮನಕ್ಕೆ ಬಂದಿಲ್ಲ. ಅಂಥವು ಅಪರೂಪ. ಇಲ್ಲವೇ ಇಲ್ಲವೆಂದರೂ ಸರಿಯೆ. ಭ್ರಷ್ಟಾಚಾರ ನಿರ್ಮೂಲನಕ್ಕಾಗಿ ಲೋಕಾಯುಕ್ತ ಎಂಬ ಸಂಸ್ಥೆಯೊಂದನ್ನು ಇಪ್ಪತ್ತೈದು ವರ್ಷಗಳ ಹಿಂದೆ ಸರಕಾರ ಸ್ಥಾಪಿಸಿತು. ಈ ವ್ಯವಸ್ಥೆ ಸಾಕಷ್ಟು ಸುದ್ದಿ ಮಾಡಿತು. ನೂರಾರು ಅಧಿಕಾರಿಗಳು, ರಾಜಕಾರಣಿಗಳು ಮೊದಲಾದವರ ಮನೆಗಳ ಮೇಲೆ ದಾಳಿ ನಡೆಸಿ ಲೋಕಾಯುಕ್ತರು, ಅವರ ಅಧೀನದಲ್ಲಿರುವ ಪೊಲೀಸರು ಕೋಟಿಗಟ್ಟಲೆ ಹಣ, ಆಸ್ತಿಪಾಸ್ತಿಗಳನ್ನು ವಶಪಡಿಸಿಕೊಂಡರು. ಮೊಕದ್ದಮೆ ಹೂಡಿದರು, ಆದಾಯಕ್ಕಿಂತ ಹೆಚ್ಚುಪಟ್ಟು ಸ್ಥಿತಿವಂತರಾಗಿರುವವರ ಮೇಲೆ. ಆಮೇಲೇನಾಯಿತು ? ಯಾರಿಗೂ ಗೊತ್ತಿಲ್ಲ. ಎಲ್ಲೋ ಅಲ್ಲೊಂದು, ಇಲ್ಲೊಂದು ಅಪರಾಧ ಸಾಬೀತಾಗಿ ಶಿಕ್ಷೆಯೂ ಆಗಿರಬಹುದು. ಆದರೆ ಈ ಹಣವಂತರಿಗೆ ದೇಶದ ಶ್ರೇಷ್ಠ ನ್ಯಾಯಾಲಯದ ಮೆಟ್ಟಿಲೇರುವ ಅವಕಾಶ ಇರುತ್ತದಲ್ಲ ! ಏನೇ ಆಗಲಿ ಕರ್ನಾಟಕದಲ್ಲಿ ಲೋಕಾಯುಕ್ತ ಸ್ಥಾಪನೆಯಾದ ಮೇಲೆ ಭ್ರಷ್ಟಾಚಾರಿಗಳಿಗೆ ಸಿಕ್ಕಿ ಬೀಳುವ ಭಯವಂತೂ ಇತ್ತು. ಅದು ಅಂಥ ಹೆಸರನ್ನೂ ಮಾಡಿತ್ತು.

ಈಗ ಆ ಭಯ ಹೋಗಿ ಎಷ್ಟೋ ದಿನಗಳು ಕಳೆದುಹೋಗಿವೆ. ಲೋಕಾಯುಕ್ತವನ್ನು ಸಂಪೂರ್ಣವಾಗಿ ನಿಷ್ಕ್ರಿಯಗೊಳಿಸಿದ ಕೀರ್ತಿ ಮುಖ್ಯಮಂತ್ರಿ ಸಿದ್ದರಾಮಯ್ಯನವರಿಗೆ ಸಲ್ಲುತ್ತದೆ. ಲೋಕಾಯುಕ್ತ ಪೊಲೀಸರು ಇದುವರೆಗೆ ಲೋಕಾಯುಕ್ತರ ಅಧೀನದಲ್ಲಿದ್ದರು. ಅದಕ್ಕೆ ಬದಲಾಗಿ ಸರಕಾರ ಮುಖ್ಯಮಂತ್ರಿ ಅಧೀನದಲ್ಲಿ 'ಭ್ರಷ್ಟಾಚಾರ ನಿಗ್ರಹ ದಳ' ಸ್ಥಾಪಿಸಿದೆ. ಈ ದಳ ಸ್ಥಾಪನೆಯಿಂದಾಗಿ ಭ್ರಷ್ಟಾಚಾರ ನಿಯಂತ್ರಣ ಕಾಯಿದೆ ೧೯೮೮ರ ಅಡಿ ದೂರು ದಾಖಲಿಸಿಕೊಂಡು, ತನಿಖೆ ನಡೆಸುವ ಅಧಿಕಾರ ಲೋಕಾಯುಕ್ತ ಪೊಲೀಸರಿಗೆ ಇರುವುದಿಲ್ಲ, ಮುಖ್ಯಮಂತ್ರಿ ಅಧೀನದಲ್ಲಿರುವ ನಿಗ್ರಹ ದಳದ್ದೇ ಪರಮಾಧಿಕಾರ. ಈ ಹೊಸ ವ್ಯವಸ್ಥೆಯಿಂದ ಅಧಿಕಾರವೆಲ್ಲವೂ ಸರಕಾರದ್ದೇ ಆಗಿರುವುದರಿಂದ ಲೋಕಾಯುಕ್ತ ಸಂಸ್ಥೆ ಹೆಸರಿಗೆ ಮಾತ್ರ ಉಳಿದಿರುತ್ತದೆ. ಸಾರ್ವಜನಿಕರು ನೀಡುವ ದೂರು ಕೈಗೆತ್ತಿಕೊಳ್ಳುವುದು ಸರಕಾರ ನೇಮಿಸಿರುವ ದಳ, ಲೋಕಾಯುಕ್ತರಲ್ಲ. ಹಾಗಾಗಿ ಲೋಕಾಯುಕ್ತ ಎನ್ನುವುದು ನಿರುಪಯುಕ್ತವಾಗಿ ಉಳಿದಿರುತ್ತದೆ.

ಒಂದು ಕಾಲದಲ್ಲಿ ಕರ್ನಾಟಕ ಲೋಕಾಯುಕ್ತ ದೇಶದಲ್ಲಿ ಎಲ್ಲರ ಗಮನ ಸೆಳೆದಿತ್ತು. ನ್ಯಾಯಮೂರ್ತಿಗಳಾದ ವೆಂಕಟಾಚಲಯ್ಯ, ಸಂತೋಷ ಹೆಗ್ಗಡೆ ಇರುವವರೆಗೆ. ಅನಂತರ ಶುರುವಾಯಿತು ಅದರ ಅವನತಿ, ಭಾಸ್ಕರ್ ರಾವ್ ಲೋಕಾಯುಕ್ತರಾದ ಮೇಲೆ. ಲೋಕಾಯುಕ್ತರ ಮೇಲೇ ಭ್ರಷ್ಟಾಚಾರದ ಆರೋಪಗಳು ಬಂದು, ಬಲವಂತವಾಗಿ ಅವರನ್ನು ಕೆಳಗಿಳಿಸಲಾಯಿತು. ಈ ವಿಚಾರದಲ್ಲಿ ಗೊಂದಲ ಸೃಷ್ಟಿಮಾಡಿ, ಸಂಸ್ಥೆಯನ್ನೇ ಅವಹೇಳನಕ್ಕೀಡು ಮಾಡಿದ್ದು ಅಧಿಕಾರದಲ್ಲಿರುವ ಕಾಂಗ್ರೆಸ್ ಸರಕಾರ. ಉಪ ಲೋಕಾಯುಕ್ತರ ಮೇಲೂ ಆರೋಪ ಹೊರಿಸಿ, ವಿಧಾನ ಸಭೆಯಲ್ಲೂ ಗದ್ದಲ ಎಬ್ಬಿಸಿ ಸರಕಾರ ಲೋಕಾಯುಕ್ತ ಸಂಸ್ಥೆಯನ್ನೂ ಮೂಲೆಗುಂಪಾಗಿಸಿದೆ. ಎರಡೂ ಸ್ಥಾನಗಳು ಖಾಲಿಯಾಗಿ ಈಗ ಲೋಕಾಯುಕ್ತ ಕಚೇರಿ ದಿಕ್ಕು ದಿವಾಣಿ ಇಲ್ಲದೆ ಇದೆ. ಹಲವು ತಿಂಗಳುಗಳೇ ಕಳೆದರೂ ಸಿದ್ದರಾಮಯ್ಯ ಸರಕಾರಕ್ಕೆ ಲೋಕಾಯುಕ್ತರನ್ನು ನೇಮಕ ಮಾಡಲಾಗಿಲ್ಲ. ರಾಜ್ಯಪಾಲರು ಮತ್ತು ಸರಕಾರದ ಜಟಾಪಟಿಯಲ್ಲಿ ಲೋಕಾಯುಕ್ತ ತಣ್ಣಗಾಗಿದೆ. ಸರಕಾರ ಭ್ರಷ್ಟಾಚಾರ ನಿಗ್ರಹ ದಳ ಸ್ಥಾಪಿಸಿ ಲೋಕಾಯುಕ್ತವನ್ನು ನುಂಗಿಹಾಕಿದೆ.

ಲೋಕಾಯುಕ್ತವನ್ನು ಮುಗಿಸಿದ ರಾಜ್ಯ ಸರಕಾರ ರಾಜಧಾನಿ ಬೆಂಗಳೂರಿನಲ್ಲಿರುವ ಏಕೈಕ ಆರ್ಟ್ ಗ್ಯಾಲರಿ ವೆಂಕಟಪ್ಪ ಕಲಾಭವನವನ್ನು ಖಾಸಗೀ ಕಂಪೆನಿ 'ತಸ್ವೀರ್ ಫೌಂಡೇಷನ್'ಗೆ ಒಪ್ಪಿಸಿ ಕೈತೊಳೆದುಕೊಂಡಿದೆ. ಈ ವಿಚಾರದಲ್ಲಿ ಸರಕಾರ ಕಲಾವಿದರ ಅಭಿಪ್ರಾಯ ಕೇಳುವ ಗೋಜಿಗೆ ಹೋಗಲಿಲ್ಲ. ಕಬ್ಬನ್ ಉದ್ಯಾನದ ಆವರಣದಲ್ಲಿರುವ ವೆಂಕಟಪ್ಪ ಆರ್ಟ್ ಗ್ಯಾಲರಿಯನ್ನು ಕಲಾವಿದರ ಪ್ರತಿಭಟನೆಯ ನಡುವೆಯೂ ಸರಕಾರ ಖಾಸಗೀ ಕಂಪನಿಗೆ ದತ್ತು ನೀಡಿದೆ. ಗ್ಯಾಲರಿಯ ಎದುರು ಕಲಾವಿದರು ಪ್ರತಿಭಟನೆ ನಡೆಸುತ್ತಿದ್ದಾರೆ. ಈ ಗ್ಯಾಲರಿ ಇದುವರೆಗೆ ಕಡಿಮೆ ಬಾಡಿಗೆಯಲ್ಲಿ ಕಲಾವಿದರಿಗೆ ಲಭ್ಯವಿತ್ತು. ಖಾಸಗಿ ಒಡೆತನದಲ್ಲಿ ನವೀಕರಣಗೊಳ್ಳುವ ಗ್ಯಾಲರಿ ಇನ್ನುಮುಂದೆ ಶ್ರೀಮಂತರಿಗೆ ಮಾತ್ರ ಲಭ್ಯ. ಇದು ರಾಜ್ಯದ ಅತ್ಯಂತ ಹಳೆ ಆರ್ಟ್ ಗ್ಯಾಲರಿ. ಇದನ್ನು ಸಮರ್ಪಕವಾಗಿ ನಿರ್ವಹಿಸಲಾಗದ ಸರಕಾರ ಖಾಸಗಿಯವರಿಗೆ ವಹಿಸುತ್ತಿರುವುದು ನಾಚಿಕೆಗೇಡು ಹಾಗೂ ಖಂಡನೀಯ. ಇಂಥ ಕಲಾಭವನವನ್ನು ವ್ಯಾಪಾರೀ ದೃಷ್ಟಿಯಿಂದ ಸರಕಾರ ನೋಡುವುದು ಸರಿಯಲ್ಲ. ನೆರೆಯ ರಾಜ್ಯಗಳಲ್ಲಿ ಸರಕಾರಗಳು ಯಶಸ್ವಿಯಾಗಿ ತಮ್ಮ ಸ್ವಾಮ್ಯದಲ್ಲಿರುವ ಕಲಾಭವನಗಳನ್ನು ನಡೆಸಿಕೊಂಡು ಹೋಗುತ್ತಿವೆ. ಅಂಥದ್ದರಲ್ಲಿ ನಮ್ಮ ಸರಕಾರಕ್ಕೆ ಇರುವ ಒಂದೇ ಆರ್ಟ್ ಗ್ಯಾಲರಿಯನ್ನು ಅದೂ ನಮ್ಮ ನಾಡಿನ ಅತ್ಯಂತ ಶ್ರೇಷ್ಠ ಕಲಾವಿದ ವೆಂಕಟಪ್ಪನವರ ಹೆಸರಿನಲ್ಲಿರುವುದನ್ನು ನಡೆಸಲು ಸಾಧ್ಯವಿಲ್ಲವೆ ? ಈ ವ್ಯವಹಾರದ ಹಿಂದೆ ಏನೋ ಕೈವಾಡವಿದೆ. ಖಾಸಗೀಕರಣ ಸಮಸ್ಯೆಗೆ ಪರಿಹಾರವಲ್ಲ. ಎಲ್ಲಕ್ಕೂ ಅದೇ ಪರಿಹಾರವಾದರೆ ಸರಕಾರ ಯಾಕಿರಬೇಕು ? ಸಿದ್ದರಾಮಯ್ಯ ಸರಕಾರ ಕಲಾವಿದರೊಂದಿಗೆ ಸಮಾಲೋಚಿಸ ಬೇಕಿತ್ತು. ಅದು ಬಿಟ್ಟು ದಿಢೀರ್ ಎಂದು ಖಾಸಗೀಕರಣದ ದಾರಿ ಹಿಡಿದಿರುವುದು ಅಸಮರ್ಥನೀಯ. ಸರಕಾರ ಈ ಕೂಡಲೇ ಖಾಸಗಿ ಕಂಪನಿಯ ಜೊತೆ ಮಾಡಿಕೊಂಡಿರುವ ಒಪ್ಪಂದವನ್ನು ರದ್ದುಗೊಳಿಸಬೇಕು. ಎಂದಿನಂತೆ ಸರಕಾರದ ಸುಪರ್ದಿನಲ್ಲೇ ನಾಡಿನ ಅತ್ಯಂತ ಶ್ರೇಷ್ಠ ಕಲಾವಿದನ ಹೆಸರಿನಲ್ಲಿರುವ ಗ್ಯಾಲರಿ ಕಲಾವಿದರೆಲ್ಲರ ಸಹಕಾರದಿಂದ ಮುಂದುವರಿಯಬೇಕು.

*(ಈ ತಿಂಗಳು : ೩ನೇ ಪುಟದಿಂದ)*

ನಾವು ಖಂಡತುಂಡವಾಗಿ ತೆರಿಗೆ ಪಾವತಿಸಲು ಆಗ್ರಹಿಸ ಬಾರದೆಂಬುದು ಅವರ ನೀತಿ. ಪೆಟ್ರೀಸಿಯಾ ಹೇಳಿದಂತೆ ಕೇಳುತ್ತಾರೋ ಅಥವಾ ರಾಷ್ಟ್ರೀಯತೆಯ ಬಗ್ಗೆ ಉದ್ದುದ್ದದ ಭಾಷಣ ಮಾಡುವ ಜೇಟ್ಲಿ, ದೇಶದ ಜನತೆಯ ಸಂಪತ್ತನ್ನು ರಕ್ಷಿಸುತ್ತಾರೋ ಇಲ್ಲವೋ ಎಂಬುದು ಇಂದಿನ ಬೃಹತ್ ಪ್ರಶ್ನೆ. ವೋಡಫೋನ್ ಕಂಪನಿ ಪಾವತಿಸಬೇಕಾಗಿದ್ದ ತೆರಿಗೆ ಸುಮಾರು ೮೦೦೦ ಕೋಟಿ. ಅದನ್ನು ಅನೇಕ ವರ್ಷ ಪಾವತಿಸದಿದ್ದುದರಿಂದ ಈಗ ಅದು ಸುಮಾರು ೨೦,೦೦೦ ಕೋಟಿ ಆಗಿದೆ. ರೈತರ ಐದುಸಾವಿರ ಬಿಡಲು ತಗಾದೆ ಮಾಡುವ ಜೇಟ್ಲಿ ಈಗ ವೋಡಫೋನ್‌ಗೆ ೧೨,೦೦೦ ಕೋಟಿ ಬಿಟ್ಟುಕೊಡಲು ಸಿದ್ಧರಾಗುತ್ತಾರೆಯೇ? ಕೇರ್ನ್ ಕಂಪನಿ ನೀಡಬೇಕಾದ ತೆರಿಗೆ (ಬಡ್ಡಿಯೂ ಸೇರಿ) ೧೦,೨೪೭ ಕೋಟಿ. ಅದನ್ನೂ ಬಿಟ್ಟುಕೊಟ್ಟಾರು !

ಒಟ್ಟಿನಲ್ಲಿ, ವಿದೇಶಿ ಕಂಪನಿಗಳು ನಮ್ಮ ದೇಶವನ್ನು ಲೂಟಿ ಮಾಡಲು ಅವಕಾಶ ಮಾಡಿಕೊಡುವುದು ನಮ್ಮ ದೇಶದ ಆರ್ಥಿಕ ನೀತಿ. ನಾಚಿಕೆ ಇಲ್ಲದೆ ಅದನ್ನು ರಾಷ್ಟ್ರೀಯತೆಯ ಮಹಾನ್ ಲಕ್ಷಣವೆಂದು ಕೆಲವರು ಹೇಳುತ್ತಿದ್ದಾರೆ. ರಾಷ್ಟ್ರಭಕ್ತಿ ಪ್ರದರ್ಶಿಸಲು ಜನರು ಘೋಷಣೆ ಕೂಗಬೇಕಂತೆ. "ವಸೂಲು ಮಾಡಬೇಕಾದ ತೆರಿಗೆ ವಸೂಲು ಮಾಡಿ" ಎಂಬ ಘೋಷಣೆಯು ರಾಷ್ಟ್ರವಿರೋಧಿ ಘೋಷಣೆಯೋ ಏನೋ ! ಅರುಣ್ ಜೇಟ್ಲಿ ಮಂಡಿಸಿರುವ ಮುಂಗಡ ಪತ್ರಕ್ಕೆ ಕಡೆಯಲ್ಲಿ ಕೆಲವು ಅನುಬಂಧಗಳಿವೆ. ಅವುಗಳಲ್ಲಿ ಒಂದು, ದೊಡ್ಡ ಕಂಪನಿಗಳಿಗೆ ವಿವಿಧ ರೂಪಗಳಲ್ಲಿ ನೀಡಲಾಗಿರುವ ಸಹಾಯಧನ (ಸಬ್ಸಿಡಿ) ಎಷ್ಟೆಂಬುದನ್ನು ತಿಳಿಸುವಂಥದು. ಈ ವರ್ಷದ ಬಜೆಟ್‌ನಲ್ಲಿ ಈ ಕಂಪನಿಗಳಿಗೆ ಉದಾರವಾಗಿ ೬೧,೬೦೦ ಕೋಟಿ ರೂಪಾಯಿಗಳ ಸಹಾಯಧನವನ್ನು ಜೇಟ್ಲಿ ಘೋಷಿಸಿದ್ದಾರೆ. ಅದನ್ನು ನಮ್ಮ ಮಾಧ್ಯಮಗಳು ಅಷ್ಟಾಗಿ ಒತ್ತಿಹೇಳಿಲ್ಲ. ಆದರೆ "ಮನ್‌ರೇಗ" ಎಂಬ ಯೋಜನೆಗೆ (ಹಳ್ಳಿಗಳಲ್ಲಿ ವರ್ಷದಲ್ಲಿ ಕನಿಷ್ಠ ನೂರು ದಿನ ಕನಿಷ್ಠ ಕೂಲಿ ಕೊಟ್ಟು ಕೆಲಸ ಮಾಡಿಸಿಕೊಳ್ಳುವ ಸರ್ಕಾರಿ ಯೋಜನೆ) ಕೋಟಿ ಗಟ್ಟಲೆ ರೂಪಾಯಿಗಳಿಗೆ ಜೇಟ್ಲಿ ಕತ್ತರಿ ಹಾಕಿದ್ದಾರೆ ! ಅದು ತಪ್ಪೆಂದೇನಾದರೂ ಕನ್ಹಯ್ಯನಂತಹ ವಿದ್ಯಾರ್ಥಿಗಳು ಘೋಷಣೆ ಕೂಗಿದರೆ ದೇಶದ್ರೋಹ ಎಸಗಿದ ಆಪಾದನೆ ಹೊರಿಸಿ ಅವರನ್ನು ಜೈಲಿಗೆ ತಳ್ಳಲಾಗುತ್ತದೆ. ಜೈ ಮಹಾನ್ ರಾಷ್ಟ್ರೀಯತೆ, ಘೋಷಣೆಗಳಿಂದ ದೇಶದ ಸ್ವಾಯತ್ತತೆ, ಸಾರ್ವಭೌಮತ್ವ, ಸಮಾನತೆ ಮತ್ತು ಸ್ವಾತಂತ್ರ್ಯಗಳನ್ನು ಗಳಿಸಲಾಗುವುದಿಲ್ಲ, ಉಳಿಸಲಾಗು ವುದಿಲ್ಲ. ಅದಕ್ಕೆ ಬೇಕಾದ್ದು ಜನತೆಯ ಬಗೆಗಿನ ಪ್ರೀತಿ–ಗೌರವ, ಜನಪರವಾದ ಆರ್ಥಿಕ ನೀತಿ, ಮತ್ತು ನಿರ್ದಾಕ್ಷಿಣ್ಯವಾಗಿ ಸ್ವದೇಶದ ಮತ್ತು ವಿದೇಶಗಳ ಕಂಪನಿ ಗಳಿಂದ ತೆರಿಗೆ ವಸೂಲು ಮಾಡುವುದು. ತೆರಿಗೆಯು ಕಂಪನಿಗಳು ನೀಡುವ ದಾನವಲ್ಲ. ಮಾನ್ಯ ಜೇಟ್ಲಿ ಯವರು ಸಹಸಚಿವೆ ಸ್ಮೃತಿ ಇರಾನಿಯವರ ರಕ್ಷಣೆಗೆ ಓಡಬೇಕಾಗಿಲ್ಲ, ಅವರ ಪ್ರಾಥಮಿಕ ಜವಾಬ್ದಾರಿ ಜನತಾಪರವಾದ ರಾಷ್ಟ್ರೀಯ ಆರ್ಥಿಕ ನೀತಿಯನ್ನು ರೂಪಿಸುವುದು ಮತ್ತು ಜಾರಿಗೆ ತರುವುದು ಆಗಿದೆ.

✶ ✶ ✶

ನಮ್ಮ ದೇಶದ ಅಪಕ್ವ ಮನಸ್ಸುಗಳು ಹೇಗಾಗಿವೆ ಯೆಂದರೆ ನೈಜ ಭಾವನೆಗಳಿಗಿಂತಲೂ ಘೋಷಣೆಗಳಿಗೆ ಅವು ಮಾರುಹೋಗಿವೆ. ಭಾರತವನ್ನು ಮನಸಾ ಆರಾಧಿಸಿದರೆ ಸಾಲದು, ನೀವು ಘೋಷಣೆ ಕೂಗಬೇಕು, ಭಾವನೆ ಇಲ್ಲದಿದ್ದರೂ ಘೋಷಣೆ ಕೂಗಿ ತೋರಿಕೆಯ ಶ್ರದ್ಧೆಯನ್ನು ನಟಿಸಿ ತೋರಿಸಬಹುದು. ಎಲ್ಲೆಲ್ಲಿ ಎಷ್ಟೆಷ್ಟು ಬಾರಿ ಮತ್ತು ಎಷ್ಟು ದೊಡ್ಡ ಗಂಟಲಲ್ಲಿ ಘೋಷಣೆ ಕೂಗಬೇಕೆಂದು ಸರ್ಕಾರ ಆಜ್ಞೆ ಹೊರಡಿಸಬಹುದು. ನಮ್ಮ ಪರಂಪರೆಯಲ್ಲಿ "ಮಾನಸಿಕ ಪೂಜೆ" ಎಂಬ ಪ್ರಭೇದವೊಂದಿದೆ, ಆದರೆ ಮಂಕುದಿಣ್ಣೆಗಳಿಗೆ ಅದು ತಿಳಿಯದು. "ಕಾಯಾ ವಾಚಾ ಮನಸಾ" ಎಂದಾಗ 'ಮನಸಾ' ಮಾಡುವುದು ಅತಿ ಶ್ರೇಷ್ಠವಾದ್ದು. ಏಕೆಂದರೆ ಅದು ಅಂತರ್ಗತ ಭಾವನೆಗಳ ಸಂಕೇತ. ನಮ್ಮ ದೇಶ ದೊಡನೆ ಪಾಕಿಸ್ತಾನ ಸ್ಪರ್ಧಿಸದಿದ್ದರೆ ಆದೀತೆ ? ಅತಿರೇಕಗಳು ಕೇವಲ ಭಾರತದ ಸ್ವತ್ತಾಗಬಾರದಲ್ಲ ! ಆದ್ದರಿಂದ ಅಫ್ರಿದಿ ಎಂಬ ಕ್ರಿಕೆಟಿಗನಿಗೆ ಪಾಕಿಸ್ತಾನವು ಘೋರ ಛೀಮಾರಿ ಹಾಕಿದೆ. ಅವನ ಅಪರಾಧ "ನಾನು ಭಾರತವನ್ನು ಪ್ರೀತಿಸುತ್ತೇನೆ, ಕ್ರೀಡಾಪಟುಗಳನ್ನೂ ಭಾರತೀಯರು ಆದರದಿಂದ ಕಾಣುತ್ತಾರೆ" ಎಂದು ಹೇಳಿದ್ದು. ನಮ್ಮ ಯುವ ಕ್ರಿಕೆಟಿಗರು ಆಗಾಗ್ಗೆ ಹೇಳುತ್ತಿರುತ್ತಾರೆ, "ನನಗೆ ಸೋಬರ್ಸ್ ಮಾದರಿ, ನನಗೆ ಕ್ಲೈವ್ ಲಾಯ್ಡ್ ಇಷ್ಟ, ಇಂಗ್ಲೆಂಡಿನ ಬಾಬಿ ಚಾರ್ಲ್‌ಟನ್ ನನಗೆ ಆರಾಧ್ಯ ಪುರುಷ", ಇತ್ಯಾದಿ. ಪಾಕಿಸ್ತಾನದಲ್ಲೂ ಹಾಗೆ ಹೇಳುವ ಯುವ ಆಟಗಾರರಿರಬಹುದು. ಆದರೆ ಅವರಾರೂ "ನನಗೆ ಚಂದೂ ಬೋರ್ಡೆ ಇಷ್ಟ, ನನಗೆ ಸುನಿಲ್ ಛೇತ್ರಿ ಆರಾಧ್ಯ ಪುರುಷ" ಎಂದು ಹೇಳಬಾರದು. ಅಂತೆಯೇ ನಮ್ಮ ದೇಶದಲ್ಲಿ ಯಾರೂ "ನನಗೆ ಹನೀಫ್ ಮೊಹಮ್ಮದ್ ಆರಾಧ್ಯ ವ್ಯಕ್ತಿ" ಎಂದು ಹೇಳಬಾರದು. ಮೂರ್ಖತನಕ್ಕೆ ಎಲ್ಲೆಯುಂಟೆ ! ಭಾರತ ಮತ್ತು ಪಾಕಿಸ್ತಾನಗಳಲ್ಲಿ ಇದೊಂದು ಮನೋರೋಗ. ಒಬ್ಬ ಕ್ರೀಡಾಪಟುವನ್ನೋ, ಸಂಗೀತಗಾರನನ್ನೋ, ನಾಟಕಕಾರನನ್ನೋ ಮೆಚ್ಚಿಕೊಳ್ಳಲು ಆತ ಅಥವಾ ಆಕೆ ಯಾವ ದೇಶದವರೆಂಬುದು ಹೇಗೆ ಪ್ರಸ್ತುತವಾಗುತ್ತದೆ ? ಅಮೆರಿಕಾದ ಅಧ್ಯಕ್ಷನಾಗಬಯಸುವ ಟ್ರಂಪ್ ಎಂಬ ಮನೋವೈಕಲ್ಯದ ವ್ಯಕ್ತಿಯನ್ನು ಬಹಿರಂಗವಾಗಿ ಮೆಚ್ಚಿಕೊಳ್ಳಬಹುದು, ಆದರೆ ಮೊಹಮ್ಮದ್ ಆಲಿ ಜಿನ್ನಾ ಬಗ್ಗೆ ಒಂದು ಒಳ್ಳೆಯ ಮಾತನ್ನು ಎಲ್. ಕೆ. ಅದ್ವಾನಿ ಸಹ ಹೇಳಬಾರದು ! ಬೌದ್ಧಿಕ ಹುಳುಕುತನ ಇಷ್ಟು ಹದಗೆಡಬಾರದಿತ್ತು ಎನಿಸುತ್ತದೆ. ಅಲ್–ಬಿರೂನಿ ಸುಮಾರು ಹತ್ತನೆಯ ಶತಮಾನದಲ್ಲಿ ಭಾರತಕ್ಕೆ ಬಂದು ಕೆಲವರ್ಷಗಳ ಅಧ್ಯಯನ ಮಾಡಿ ನಮ್ಮ ದೇಶದ ಬಗ್ಗೆ ಸೊಗಸಾದ ಒಂದು ಪುಸ್ತಕ ಬರೆದ, ಚೀಣಾದ ಅನೇಕ ಯಾತ್ರಿಕರು ಭಾರತವನ್ನು ಶ್ಲಾಘಿಸಿ ಬರೆದರು. ಚೀಣಾದ ಜನತಾ ಹೋರಾಟದ ಸಮಯದಲ್ಲಿ ಭಾರತದ ಯುವ ವೈದ್ಯ ಕೊಟ್ನಿಸ್ ಅಲ್ಲಿಗೆ ತೆರಳಿ ಅಮರನಾದ. ಈಗ ಅಫ್ರಿದಿ ಒಂದು ತುಸು ಬಾಯಿಬಿಟ್ಟರೆ ಪಾಕಿಸ್ತಾನದಲ್ಲಿ ಅರ್ಥವಿಲ್ಲದ ಅಬ್ಬರ. ನವಯುಗದ ಸಂಸ್ಕೃತಿ ಎಷ್ಟು ದ್ವೇಷಪೂರಿತವಾಗಿದೆ ಎಂಬುದಕ್ಕೆ ಇದೊಂದು ದೃಷ್ಟಾಂತ. ನಮ್ಮ ಭವ್ಯ ಭಾರತದಲ್ಲಿ "ಮಣಿಪುರದಲ್ಲಿ ಕೆಲವು ಮಿಲಿಟರಿ ಸೈನಿಕರು ಅನೀತಿಯ ಕೆಲಸ ಮಾಡಿದ್ದಾರೆ" ಎಂದು ಹೇಳಿದರೆ ಅದು "ರಾಷ್ಟ್ರದ್ರೋಹ" ಎಂದು ಪರಿಗಣಿಸುವ ಪಡೆಗಳು ಸಿದ್ಧಗೊಳ್ಳುತ್ತಿವೆ. ನಾವು ಮತ್ತು ವಿಶೇಷತಃ ನಮ್ಮ ಯುವಕ–ಯುವತಿಯರು ಇದೆಂತಹ ಪ್ರಮಾದವೆಂಬುದನ್ನು ಕುರಿತು ಗಂಭೀರ ವಾಗಿ ಆಲೋಚನೆ ಮಾಡುತ್ತಾರೆಂದು ಆಶಿಸೋಣ.

✶ ✶ ✶

ಕೆಲ ದಿನಗಳ ಹಿಂದೆ ತಮಿಳುನಾಡಿನ ರೈತನೊಬ್ಬ ಖಾಸಗಿ ಫೈನಾನ್ಸ್ ಕಂಪೆನಿಯೊಂದರಿಂದ ಏಳು ಲಕ್ಷ ರೂಪಾಯಿಗಳ ಸಾಲ ಪಡೆದುಕೊಂಡು ಟ್ರಾಕ್ಟರ್ ಒಂದನ್ನು ಖರೀದಿಸಿದ್ದ. ಐದು ಲಕ್ಷ ರೂ. ಸಾಲ ಮರುಪಾವತಿಯನ್ನೂ ಮಾಡಿದ್ದ. ಬಾಕಿ ಎರಡು ಲಕ್ಷ ತೀರಿಸಲು ಸ್ವಲ್ಪ ನಿಧಾನವಾಯಿತು. ನಡುರಸ್ತೆಯಲ್ಲಿ ಟ್ರಾಕ್ಟರ್ ನಿಲ್ಲಿಸಿ ಕಂಪನಿಯ ಧಡಿಯರು ರೈತನನ್ನು ಥಳಿಸಿ ಟ್ರಾಕ್ಟರ್ ತೆಗೆದುಕೊಂಡು ಹೋದರು. ಇದರಿಂದ ಅವಮಾನಿತನಾದ ನಿಸ್ಸಹಾಯಕ ರೈತ ಆತ್ಮಹತ್ಯೆ ಮಾಡಿಕೊಂಡ. ಇಂಥ ಹಲವಾರು ಪ್ರಕರಣಗಳು ನಡೆದಿವೆ, ನಡೆಯುತ್ತಿರುತ್ತವೆ. ಸಾಲ ನೀಡುವ ಬ್ಯಾಂಕುಗಳು, ಫೈನಾನ್ಸ್ ಕಂಪನಿಗಳು ಅಮಾಯಕರ ಪ್ರಾಣ ಹಿಂಡಿ ಸಾಲ ವಸೂಲಿ ಮಾಡಿಕೊಳ್ಳುತ್ತವೆ. ಮನೆಮಠ ಆಸ್ತಿಪಾಸ್ತಿ ಎಲ್ಲ ಜಪ್ತಿಮಾಡಿ ಹರಾಜು ಹಾಕುತ್ತಾರೆ. ಆದರೆ ಭಾರಿ ಕುಳಗಳು ಮಾತ್ರ ಸಾವಿರಾರು ಕೋಟಿ ರೂ.ಗಳ ಪಂಗನಾಮ ಹಾಕಿ ಆರಾಮವಾಗಿರುತ್ತಾರೆ.

ಮದ್ಯದ ದೊರೆ, ಪ್ಲೇಬಾಯ್, ಜೂಜುಕೋರ ಇನ್ನೂ ಏನೇನೋ ಹೆಸರುಗಳಿಂದ ಪ್ರಖ್ಯಾತನಾಗಿರುವ ವಿಜಯ ಮಲ್ಯ ಬ್ಯಾಂಕುಗಳಿಗೆ, ಮುಖ್ಯವಾಗಿ ರಾಷ್ಟ್ರೀಕೃತ ಬ್ಯಾಂಕುಗಳಿಗೆ ಕೊಡಬೇಕಾಗಿರುವ ಸುಮಾರು ಹತ್ತು ಸಾವಿರ ಕೋಟಿ ರೂ.ಗಳನ್ನು ವಂಚಿಸಿ ಲಂಡನ್ನಿಗೆ ಪರಾರಿಯಾಗಿ ಆರಾಮವಾಗಿದ್ದಾನೆ. ಈ ವಿಷಯ ಹೊರಗೆ ಬಂದದ್ದು ಒಂದು ವಾರದ ನಂತರ ಸರಕಾರಿ ವಕೀಲ ಅಡ್ವೋಕೇಟ್ ಜನರಲ್ ನ್ಯಾಯಾಲಯಕ್ಕೆ ಅರುಹಿದಾಗ. ಮೋದಿ ಸರಕಾರದ ಸಚಿವರುಗಳು ಮಣ್ಣು ಮುಕ್ಕಿ ವಿವರಣೆ ನೀಡಲಾಗದೆ ತಿಣುಕಾಡುತ್ತಿದ್ದಾರೆ. ಸರಕಾರಕ್ಕೆ, ಸಿಬಿಐಗೆ, ಪೋಲೀಸರಿಗೆ, ಬ್ಯಾಂಕುಗಳಿಗೆ ಈ ಮನುಷ್ಯ ಪರಾರಿಯಾದಾನು ಎಂಬ ಸುಳಿವು ಗೊತ್ತಿದ್ದೂ ಬಿಟ್ಟದು ಹೇಗೆ ? ಇದು ಯಕ್ಷಪ್ರಶ್ನೆ ! ಪ್ರಶ್ನೆ ಏನೆಲ್ಲ ಗೊತ್ತಿದ್ದೂ ಮಲ್ಯ ಪರಾರಿಯಾಗಲು ಅಧಿಕಾರಿಗಳು ಅವಕಾಶ ಮಾಡಿಕೊಟ್ಟಿದ್ದಾರೆ. ಯಾರು ಎಂದು ಹೇಳುವುದು ಸರಕಾರಕ್ಕೆ ಬಿಸಿ ತುಪ್ಪವಾಗಿ ಗಂಟಲಲ್ಲಿ ಸಿಕ್ಕಿಕೊಂಡಿದೆ.

ಮದ್ಯದ ದೊರೆಯ ಅವ್ಯವಹಾರಗಳು ಗೊತ್ತಿದ್ದೂ ಕೂಡ ಬ್ಯಾಂಕುಗಳು ಪೈಪೋಟಿ ನಡೆಸಿ ಸಾಲ ನೀಡಿವೆ. ಮದ್ಯದ ಮಾರಾಟದಿಂದ ಕೋಟಿಗಟ್ಟಲೆ ಸಂಪಾದಿಸಿದ ವಿಜಯ ಮಲ್ಯ ವಿಮಾನ ಹಾರಿಸಲು ಹೊರಟ, ಹಾಗೇ ತಾನೂ ಎಲ್ಲರಿಗೂ ಮೋಸಮಾಡಿ ವಿಮಾನದಲ್ಲಿ ಪರಾರಿಯಾದ. ಈತ ಕರ್ನಾಟಕದವನು. ಕರ್ನಾಟಕ ದಿಂದ ರಾಜ್ಯಸಭಾಗೆ ಆಯ್ಕೆಯಾಗಿರುವ ಆಸಾಮಿ. ಆಯ್ಕೆ ಮಾಡಿದ ಭಾಜಪ ಮತ್ತು ಜೆಡಿಎಸ್‌ಗೆ ಎಷ್ಟು ಕೋಟಿ ಕೊಟ್ಟನೋ ಈ ಭೂಪ. ಅದು ರಹಸ್ಯ. ಅದಕ್ಕೇ ಮಾಜಿ ಪ್ರಧಾನಿ ಜೆಡಿಎಸ್‌ನ ಅಧಿಪತಿ ದೇವೇಗೌಡ

ಮಲ್ಯನನ್ನು ಈಗಲೂ ಹಿಂಬಿಟ್ಟುಕೊಳ್ಳುತ್ತಿರುವುದು. ನಮ್ಮ ದೇಶಕ್ಕೆ ಮೋಸಮಾಡಿ, ಸರಕಾರದ ಕೃಪೆಯಿಂದ ದೇಶ ಬಿಟ್ಟು ಓಡಿಹೋಗಿರುವವರಲ್ಲಿ ವಿಜಯ ಮಲ್ಯ ಮೊದಲನೆಯವನೇನಲ್ಲ. ಇಟಲಿಯ ಕೊಟ್ರಾಚಿ, ಅಮೆರಿಕದ ಅಂಡರ್ಸನ್, ಲಲಿತ್ ಮೋದಿ ಈ ಮೂವರಲ್ಲಿ ಮೊದಲನೆಯವನು ಬೋಫೋರ್ಸ್ ಪ್ರಕರಣಕ್ಕೆ, ಎರಡನೆಯವನು ಭೋಪಾಲ್ ದುರಂತಕ್ಕೆ, ಮೂರನೆಯವನು ಐಪಿಎಲ್ ಕ್ರಿಕೆಟ್ ಮೋಸದಾಟಕ್ಕೆ ಸಂಬಂಧಿಸಿದವರು. ಎಲ್ಲವೂ ಕೋಟಿಗಟ್ಟಲೆ ವ್ಯವಹಾರಕ್ಕೆ ಸಂಬಂಧಿಸಿರುವುವೆ. ವಿಜಯ ಮಲ್ಯ ಕೂಡ ಐಪಿಎಲ್‌ನಲ್ಲಿ ಪಾಲುದಾರ. ಈಗ ಲಲಿತ್ ಮೋದಿ ಮತ್ತು ಮಲ್ಯ ಇಬ್ಬರೂ ಲಂಡನ್ನಿನಲ್ಲಿ ತಲೆ ತಪ್ಪಿಸಿ ಕೊಂಡಿದ್ದಾರೆ. ಉಳಿದಿಬ್ಬರೂ ಈಗ ಇಲ್ಲವಾಗಿದ್ದಾರೆ.

ಸುಮಾರು ಎಪ್ಪತ್ತು ಎಂಬತ್ತು ವರ್ಷಗಳ ಹಿಂದೆ ಬೆಂಗಳೂರಿನ ಬಿ. ಎಸ್. ಗೋಪಾಲ ರಾವ್ ಎನ್ನುವ ಲೇವಾದೇವಿ ವ್ಯವಹಾರಸ್ಥ ದುಬಾರಿ ಬಡ್ಡಿ ಆಮಿಷ ತೋರಿ ಸಾವಿರಾರು ಜನಕ್ಕೆ, ಬ್ಯಾಂಕುಗಳಿಗೆ ಪಂಗನಾಮ ಹಾಕಿ ಜೈಲು ಸೇರಿದ. ಆಗಿನ್ನೂ ಸುಲಭವಾಗಿ ಪರಾರಿ ಯಾಗಲು ಅವಕಾಶವೂ ಇರಲಿಲ್ಲ, ಅದಕ್ಕೆ ಶಾಮೀಲಾಗುವ 'ಗಾಡ್‌ಫಾದರ್'ಗಳೂ ಇರಲಿಲ್ಲ. ಅಂದರೆ ರಾಜಕಾರಣಿಗಳಿರಲಿಲ್ಲ. ಆಗ ಕೆಲವು ಬ್ಯಾಂಕುಗಳು ದಿವಾಳಿಯಾಗಿ ಬೇಕಾದಷ್ಟು ಠೇವಣಿದಾರರು ಹಣ ಕಳೆದುಕೊಂಡರು. ಈಗ ಅಂಥ ಸಂಭವ ಕಡಿಮೆ. ಆದರೂ ಬ್ಯಾಂಕುಗಳ ಸಾಲದ ಹೊರೆ ನೋಡಿದರೆ ಖಂಡಿತ ಭಯವಾಗುತ್ತದೆ. ವಿಜಯ ಮಲ್ಯನಂಥ ಹಲವು ಭಾರಿ ಕುಳಗಳಿಗೆ ನೀಡಿರುವ ಸಾಲದ ಮೊತ್ತ ಸುಮಾರು ಐದಾರು ಲಕ್ಷ ಕೋಟಿ ರೂ.ಗಳಿಗೂ ಮೀರಿದ್ದಾಗಿದೆ ಎಂದು ಅಂದಾಜು ಮಾಡಲಾಗಿದೆ. ಇನ್ನು ಏನೇನು ರಹಸ್ಯ ಇದೆಯೋ ಹಣಕಾಸು ಸಚಿವನೇ ಬಲ್ಲ!

* * *

ಅಭಿವೃದ್ಧಿ, ಶುದ್ಧ ಆಡಳಿತ, ಕಪ್ಪುಹಣ ತರುವ ಜಾಗಟೆ ಬಾರಿಸಿ ಚುನಾವಣೆಯಲ್ಲಿ ಜಯಗಳಿಸಿದ ಮೋದಿ ಸರಕಾರ ಬರೀ ಘೋಷಣೆಗಳನ್ನು ಮಾಡುತ್ತಿ ರುವುದೇ ಹೊರತು ಬೇರೇನಿಲ್ಲ. ಗಂಗಾ ಶುದ್ಧೀಕರಣ ಆಯಿತು, ಭಾರತ ಸ್ವಚ್ಛವಾಯಿತು, ಭಾರತದಲ್ಲೇ ತಯಾರಾಯಿತು. ಇವೆಲ್ಲ ಭ್ರಮೆ ಅಷ್ಟೆ. ಕನಸುಗಳು ಅಷ್ಟೆ. ಭಾಜಪಗೆ ಇದಾವುದನ್ನೂ ನನಸು ಮಾಡುವುದ ಕ್ಕಾಗಿಲ್ಲ. ಆಗುವುದೂ ಇಲ್ಲ. ಆದರೆ ಮೋದಿ ಸರಕಾರ ಭ್ರಮಾಲೋಕ ಸೃಷ್ಟಿಸುವವರಿಗೆ ಪೂರ್ಣ ಬೆಂಬಲ ನೀಡುತ್ತದೆ. ಈ ದೇಶದಲ್ಲಿ ಅಂಥವರಿಗೇನೂ ಕಡಿಮೆ ಇಲ್ಲ. ಅಂಥವರಲ್ಲಿ ಒಬ್ಬ ಬೆಂಗಳೂರಿನವನೇ ಶ್ರೀ ಶ್ರೀ ರವಿಶಂಕರ್. ಈತ ಬೆಂಗಳೂರಿನಿಂದ ಸುಮಾರು ಮೂವತ್ತು ಕಿಲೋಮೀಟರುಗಳ ದೂರದಲ್ಲಿ ಹತ್ತಾರು ಎಕರೆ ಜಮೀನನ್ನು ಕಬಳಿಸಿ ಭವ್ಯವಾದ ಆಶ್ರಮ ಕಟ್ಟಿಕೊಂಡಿದ್ದಾನೆ. ಈತನ ಶಿಷ್ಯಕೋಟಿ ಎಲ್ಲ ಐಟಿ, ಬಿಟಿಯ ಭಾರಿ ಕುಳಗಳೇ. ವರ್ಷದಲ್ಲಿ ಹೆಚ್ಚುಕಾಲ ವಿದೇಶಗಳಲ್ಲೇ ವಿರಾಜಿಸುವ ಈತ ಈಚೆಗೆ ದೆಹಲಿಯ ಯಮುನಾ ತೀರದ ಪ್ರದೇಶದಲ್ಲಿ ಭಾರೀ ಮೇಳ ನಡೆಸಿದ. ಓಷೋ, ಮಹರ್ಷಿ ಯೋಗಿಯಂಥವರಿಗೆ ಈತ ಕಡಿಮೆ ಏನಿಲ್ಲ. ಮೂರು ನಾಲ್ಕು ವರ್ಷಗಳ ಹಿಂದೆ ಈತ ಬೆಂಗಳೂರಿನ ಹೊರವಲಯದಲ್ಲಿ ಜಕ್ಕೂರು ವಿಮಾನನಿಲ್ದಾಣ ಪ್ರದೇಶದಲ್ಲಿ ಲಕ್ಷಾಂತರ ಜನ ಭಾಗ ವಹಿಸಿದ್ದ ಯೋಗ ಶಿಬಿರ ಏರ್ಪಡಿಸಿದ್ದ. ಈಗ ದೆಹಲಿಯಲ್ಲಿ ನಡೆಸಿದ್ದು 'ಅಂತರರಾಷ್ಟ್ರೀಯ ಸಾಂಸ್ಕೃತಿಕ ಉತ್ಸವ'. ಪ್ರಾಯಶಃ ಇದು ನೊಬೆಲ್ ಶಾಂತಿ ಪ್ರಶಸ್ತಿ ಪಡೆಯುವುದಕ್ಕೆ ನಡೆಸಿದ ಸಿದ್ಧತೆಯೇನೋ ತಿಳಿಯದು. ಹಾಗೆ ಈತನಿಗೆ ಪ್ರಶಸ್ತಿ ದೊರೆತರೂ ಆಶ್ಚರ್ಯವೇನಲ್ಲ. ದಲಾಯಿಲಾಮ, ಹೆನ್ರಿ ಕಿಸಿಂಜರ್ ಅಂಥವರಿಗೇ ನೊಬೆಲ್ ಶಾಂತಿ ಪುರಸ್ಕಾರ ದೊರೆತಿರುವಾಗ ಈತನು ಏನು ಕಮ್ಮಿ.

ಇರಲಿ, ವಿಷಯಕ್ಕೆ ಬರೋಣ. ದೆಹಲಿಯಲ್ಲಿ ಮೂರು ದಿನಗಳ ಉತ್ಸವವೂ ಮುಗಿಯಿತು. ಪ್ರಧಾನಿ ಮೋದಿ ಶ್ರೀ ಶ್ರೀಯ ಪಕ್ಕದಲ್ಲಿ ಕುಳಿತು ಮೆರೆದದ್ದೂ ಆಯಿತು. ಭಾರತೀಯ ಸಾಂಸ್ಕೃತಿಕ ಪರಂಪರೆ ಕುರಿತು ಭಾಷಣ ಚಚ್ಚಿದ್ದೂ ಆಯಿತು. ಆದರೆ ಈ ರವಿಶಂಕರ ಮಾತ್ರ ಸರಕಾರೀ ಸಂಸ್ಥೆ ವಿಧಿಸಿದ್ದ ಐದುಕೋಟಿ ರೂ.ಗಳಲ್ಲಿ ಒಂದು ಪೈಸೆ ತೆರಲಿಲ್ಲ. ದಂಡ ಹಾಕಿದ್ದ ಪರಿಸರ ನ್ಯಾಯಾಲಯಕ್ಕೆ ದೊಮ್ಮಡಿ ದಂಡ ಕಟ್ಟುವುದಿಲ್ಲ ಎಂದು ಈತ ಸವಾಲು ಹಾಕಿದ್ದ, ಜೈಲಿಗೆ ಹೋಗುತ್ತೇನೆ ಬೇಕಾದರೆ ಎಂದಿದ್ದ. ಸರಕಾರೀ ಯಂತ್ರ ಸ್ತಬ್ದವಾಗಿತ್ತು. ಇಂಥ ಶ್ರೀ ಶ್ರೀಗಳಿಗೆ ಮಣೆ ಹಾಕುವುದೇ ಆಡಳಿತದ ಗುರಿ ಏನೊ. ಇನ್ನು ಭಾರತೀಯ ಸಾಂಸ್ಕೃತಿಕ ಪರಂಪರೆಯ ಜಪ ಮಾಡುವ ಭಾಜಪ ಸರಕಾರ ಇರುವಾಗ ಇಂಥವರ ಅಟಾಟೋಪಕ್ಕೆ ಎಣೆಯುಂಟೆ!

ದೆಹಲಿಯ ನರ್ಮದಾ ತೀರದಲ್ಲಿ ರವಿಶಂಕರ್ ಮೇಳಕ್ಕೆ ಸರಕಾರ ಪರವಾನಗಿ ನೀಡಿ ಕೆಲವು ತಿಂಗಳುಗಳೇ ಆಗಿರಬೇಕು. ಅಗತ್ಯವಾದ ನಿರ್ಮಾಣ ಕಾರ್ಯ ಸಾಕಷ್ಟು ಸಮಯದಿಂದ ನಡೆದಿದೆ. ಹಾಗಿರುವಾಗ ಪರಿಸರ ಸಂರಕ್ಷಣೆ ಹೊಣೆಹೊತ್ತವರು ಕೊನೆಯ ನಿಮಿಷದವರೆಗೆ ಸುಮ್ಮನಿದ್ದದ್ದು ಏಕೆ? ಪ್ರಚಾರಕ್ಕಾಗಿ ನಡೆಸಿದ ಅಣಕವೆ? ರಕ್ಷಣಾ ಸಚಿವಾಲಯದ ಕೃಪೆಯಿಂದ ನದಿಗೆ ಅಡ್ಡವಾಗಿ ಹಂಗಾಮಿ ಸೇತುವೆ ನಿರ್ಮಾಣವಾಗಿತ್ತು. ಕೊನೆ ಘಳಿಗೆಯಲ್ಲಿ ರಾಷ್ಟ್ರಪತಿ ಸಮಾರೋಪ ಸಮಾರಂಭದಲ್ಲಿ ಭಾಗಿಯಾಗಲಿಲ್ಲ. ಮೋದಿ ಮಾತ್ರ ಉದ್ಘಾಟನೆಗೆ ಹಾಜರ್. ಸರಕಾರದ ಕೃಪಾಕಟಾಕ್ಷದಿಂದ ಈ ದೇಶದಲ್ಲಿ ಇಂಥ ಬಾಬಾಗಳು, ಶ್ರೀ ಶ್ರೀಗಳು, ಮಠಾಧೀಶರು ಸಾಕಷ್ಟು ಮಂದಿ ಇದ್ದಾರೆ. ಇವರಲ್ಲಿ ಕೆಲವರ ಮೇಲೆ ಗಂಭೀರ ಆರೋಪದ ಮೊಕದ್ದಮೆಗಳೂ ಇವೆ. ಜಯವಿರುವವರೆಗೆ ಭಯವಿಲ್ಲ ಇದು ಶ್ರೀ ಶ್ರೀ ರವಿಶಂಕರರಿಗೂ ಅನ್ವಯ.

* * *

ಆರೆಸ್ಸೆಸ್‌ನವರು ಈಗ ಮೆಜಾರಿಟಿಗೆ ಬಂದಿದ್ದಾರೆ. ಬೆಳೆದ ಮೇಲೆ ಬದಲಾವಣೆ ಬೇಕು ತಾನೆ. ಅದಕ್ಕೇ 'ಚಡ್ಡಿ' ಬಿಟ್ಟು ಈಗ 'ಪ್ಯಾಂಟ್'ಧಾರಿಗಳಾಗುತ್ತಾರೆ. ಭಾರತೀಯ ಸಂಸ್ಕೃತಿಯ ಪರಂಪರೆಯ ಪ್ರಕಾರ 'ವೀರಗಚ್ಚೆ' ಹಾಕಬೇಕಾಗಿತ್ತು. ಆದರೆ ಏಕೋ ವಿದೇಶೀ ಷರಾಯಿಗೆ ಗಂಟುಬಿದ್ದಿದ್ದಾರೆ. ಮೆಜಾರಿಟಿಗೆ ತಕ್ಕ ಹಾಗೆ ಈಗ ಬಹಿರಂಗವಾಗಿ ಸರಕಾರದ ನೀತಿ ನಿರೂಪಿಸುವುದರಲ್ಲಿ ತೊಡಗಿಕೊಂಡಿದ್ದಾರೆ. ಹಿಂದೆಲ್ಲಾ ತೆರೆಯ ಮರೆಯಲ್ಲಿರುತ್ತಿದ್ದವರು ಈಗ ರಾಜಾರೋಷವಾಗಿ 'ಹಿಂದುತ್ವ' ಹೇರಿಕೆಗೆ ಮುಂದಾಗಿದ್ದಾರೆ. ಕ್ಷಮಿಸಿ, ಏನೋ ಹೇಳಲು ಹೊರಟು ವಿಷಯಾಂತರವಾಯಿತು.

ಕನ್ನಡದಲ್ಲಿ ಅವಧಾನಿಗಳ ಪರಂಪರೆ ಏಕೋ ಬೆಳೆಯಲಿಲ್ಲ. ತೆಲುಗಿನಲ್ಲಿ ಅಷ್ಟಾವಧಾನಿಗಳು, ಶತಾವಧಾನಿಗಳು ಬೇಕಾದಷ್ಟಿದ್ದಾರೆ. ನಮ್ಮ ಬೆಂಗಳೂರಿನಲ್ಲಿ ಇರುವ ಶತಾವಧಾನಿ ಇರುವವರು ಒಬ್ಬರೇ ಏನೋ ತಿಳಿಯದು. ಅವರೇ ಶತಾವಧಾನಿ ಡಾ॥ ಆರ್. ಗಣೇಶ್. ಹಬ್ಬ ಹರಿದಿನಗಳಲ್ಲಿ ಬೆಂಗಳೂರು ದೂರದರ್ಶನದಲ್ಲಿ ಭಾರತೀಯ ಶ್ರೇಷ್ಠ ಪರಂಪರೆ ಕುರಿತು ಅವರ ಏಕತಾನದ ಭೈರಿಗೆ ಟಿವಿ ಭಕ್ತರಿಗೆ ಪರಿಚಿತ. ಸಾಕಷ್ಟು ಪ್ರವಚನಗಳನ್ನು ನೀಡುವ ಈ ವ್ಯಕ್ತಿ ಸಂಘಪರಿವಾರ ದವರಿಗೆ ಗುರು. ಪಟಪಟನೆ ಸಂಸ್ಕೃತ ಪಾಂಡಿತ್ಯ ಮೆರೆವ, ವೇದ ಶ್ಲೋಕಗಳನ್ನು ಧಾರಾಳವಾಗಿ ಪಠಿಸಿ ಕೇಳುಗರನ್ನು ದಿಗ್ಭ್ರಮೆಗೊಳಿಸುವ ಈತ ಈಚೆಗೆ ಕನ್ನಡದಲ್ಲಿ ಉದ್‌ಗ್ರಂಥವೊಂದನ್ನು ಪ್ರಕಟಿಸಿದ್ದಾರೆ. ಇದರ ಪ್ರಕಾಶಕರು ಬೇರಾರೂ ಅಲ್ಲ ಸಂಘ ಪರಿವಾರದ ಪ್ರಸಾರಾಂಗ ರಾಷ್ಟ್ರೋತ್ಥಾನ ಪರಿಷತ್ತು. ಪುಸ್ತಕ ಬಿಡುಗಡೆ ಸಮಾರಂಭ ದಲ್ಲಿ ಶಿಷ್ಯ ಭೈರಪ್ಪನವರೂ ಹಾಜರಿದ್ದರು. ಅದರಲ್ಲಿ ವಿಶೇಷ ಇಲ್ಲ ಬಿಡಿ. ಪುಸ್ತಕದ ವಿಚಾರಕ್ಕೆ ಬರೋಣ.

ಮುನ್ನೂರಕ್ಕೂ ಹೆಚ್ಚು ಪುಟಗಳನ್ನು ಹೊಂದಿರುವ ಈ ಪುಸ್ತಕ ಇತಿಹಾಸವನ್ನು ತಿರುಚಿ ಹೇಳುವುದು ಹೇಗೆ ಎನ್ನುವುದಕ್ಕೆ ಕೈಪಿಡಿ. ಸಂಘಿಗಳಿಗೆ ಪ್ರಿಯವಾಗುವ ಹೊತ್ತಿಗೆ. "ಭಾರತೀಯ ಕ್ಷಾತ್ರ ಪರಂಪರೆ" ಪುಸ್ತಕದ ಶೀರ್ಷಿಕೆ. ನಂದರ ಕಾಲಕ್ಕೆ ಕ್ಷಾತ್ರ ಪರಂಪರೆ ಸಂಕರವಾಯಿತು ಎಂದು ಹೇಳುವ ಈ ಗ್ರಂಥ ವೇದಕಾಲದಿಂದ ಬೆಳೆದು ಬಂದಿರುವ ಕಥಾನಕ. ಸಾಕಷ್ಟು ಅಡಿ ಟಿಪ್ಪಣಿಗಳೂ ಇವೆ. ಸ್ವಾತಂತ್ರ್ಯ ಚಳುವಳಿ, ಗಾಂಧಿ, ನೆಹರೂ ಮೊದಲಾದವರನ್ನು ಹೀಯಾಳಿಸಿ, ವಲ್ಲಭಭಾಯಿ ಪಟೇಲ್, ರಾಜಗೋಪಾಲಾಚಾರಿ, ನೇತಾಜಿ ಸುಭಾಷ್‌ಚಂದ್ರ ಬೋಸ್ ಇವರನ್ನು ಮೂಲೆ ಗುಂಪಾಗಿಸಲಾಯಿತು ಎಂದು ತುತ್ತೂರಿ ಊದಿ, ಮೊಗಲರ ಆಳ್ವಿಕೆಯ ಕ್ರೌರ್ಯವನ್ನು ಉತ್ಪ್ರೇಕ್ಷೆ ಮಾಡಿ ಬಣ್ಣಿಸುವ ಈ ಗ್ರಂಥ ಸಾಕಷ್ಟು ಬೋರು ಹೊಡಿಸುತ್ತೆ. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸದೆ ಬ್ರಿಟಿಷ ರೊಂದಿಗೆ ಶಾಮೀಲಾಗಿದ್ದ ಸಂಘಪರಿವಾರವನ್ನು ಕೊಂಡಾಡುವ ಈ ಪುಸ್ತಕ ಮುಖ್ಯವಾಗಿ ಕಮ್ಯುನಿಸ್ಟರನ್ನು, ಮುಸಲ್ಮಾನರು ಮತ್ತು ಕ್ರೈಸ್ತರನ್ನು ವಾಚಾಮಗೋಚರ ವಾಗಿ ಬೈದುಕೊಳ್ಳುತ್ತದೆ. ಅದರಲ್ಲೊಂದು ಅಣಿಮುತ್ತು ಹೀಗಿದೆ: "ಈ ಜಗತ್ತಿನಲ್ಲಿ ಮೂವರಿಗೆ ರಾಷ್ಟ್ರೀಯ ವಾದವಿಲ್ಲ; ಮುಸಲ್ಮಾನರು, ಕ್ರೈಸ್ತರು ಮತ್ತು ಕಮ್ಯುನಿಷ್ಟರು. ಅವರಿಗೆ ಮತೀಯತೆಯೊಂದೇ ಬಂಡವಾಳ. ಕಮ್ಯುನಿಷ್ಟರಿಗೆ ಕಾರ್ಲ್ ಮಾರ್ಕ್ಸ್ ಪ್ರವಾದಿ. ಅವರಲ್ಲಿ ಮತೀಯತೆ ಇಲ್ಲವಲ್ಲ ಎಂದರೆ ಅಲ್ಲಿ ಮತರಾಹಿತ್ಯವೇ ಮತ; ಬರ್ಬರತೆಯೇ ಅವರ ದೇವರು; 'ದಾಸ್ ಕ್ಯಾಪಿಟಲ್' ಅವರ ಮತಗ್ರಂಥ.' ಇದು ಒಂದು ಸ್ಯಾಂಪಲ್ ಅಷ್ಟೆ. ಪುಸ್ತಕದ ಉದ್ದಕ್ಕೂ ಇಂಥ ಅಪದ್ಧಗಳು ಬೇಕಾದಷ್ಟಿವೆ.




**ಧರ್ಮದ ಚೌಕಟ್ಟಿನಲ್ಲಿ ಅಗೋಚರ ಕ್ರೌರ್ಯ**

✉ "ಧರ್ಮ ರಕ್ಷಣೆಗಾಗಿ, ಸಮಾಜದಲ್ಲಿ ತಲೆದೋರುವ ಅಧರ್ಮದ ವಿನಾಶಕ್ಕಾಗಿ, ಹಿಂಸೆ ಒಂದು ಅನಿವಾರ್ಯ ಮಾರ್ಗವಾದರೆ ಅನುಸರಿಸಲು ಅಡ್ಡಿಯಿಲ್ಲ" – ಇದು ಬಹುಶಃ ಎಲ್ಲ ಧರ್ಮಗಳಲ್ಲೂ ಕಂಡುಬರುವ ಒಂದು ಪಾರಂಪರಿಕ ಧೋರಣೆ. ಅಧರ್ಮ ತನ್ನೆಲ್ಲಾ ಪೈಶಾಚಿಕ ಬಾಹುಗಳನ್ನು ಎಲ್ಲೆಡೆ ವ್ಯಾಪಿಸಿ ಮಾನವ ಸಮಾಜವನ್ನು ಕಾಡುತ್ತಿರುವ ಸಂದರ್ಭದಲ್ಲಿ ಧರ್ಮ ಸಂಸ್ಥಾಪಕರು ಅವತರಿಸಿ ಶಾಂತಿಯ ನೆಲೆ ಸ್ಥಾಪಿಸಲು ಯತ್ನಿಸುವ ಪುರಾಣ ಕಥನಗಳು ಹಿಂದೂ, ಇಸ್ಲಾಂ, ಕ್ರೈಸ್ತ ಧರ್ಮಗಳ ಪುರಾಣಗಳಲ್ಲಿ ಹೇರಳವಾಗಿ ದೊರೆಯುತ್ತವೆ.

ಭಾರತೀಯ ಸಂಸ್ಕೃತಿಯನ್ನು ಧರ್ಮದ ನೆಲೆಗಟ್ಟಿನಲ್ಲಿ ವಿಶ್ಲೇಷಿಸುವಾಗ ಈ ಧೋರಣೆಯನ್ನು ನಮ್ಮ ಪುರಾಣ ಕಥನಗಳಲ್ಲಿ, ಧರ್ಮ ಗ್ರಂಥಗಳಲ್ಲಿ ಮತ್ತು ಅಧ್ಯಾತ್ಮದ ಚೌಕಟ್ಟಿನಲ್ಲಿ ಕಾಣಲು ಸಾಧ್ಯ. ದೈವ ಸೃಷ್ಟಿಯ ನಿಯಮಗಳನ್ನು ಪ್ರಮಾಣೀಕರಿಸಲು ಸೃಷ್ಟಿಸಲಾಗಿರುವ ದಶಾವತಾರಗಳ ಕಥನಗಳಲ್ಲಿ ಈ ಪ್ರಯತ್ನ ಮಾಡಲಾಗಿದೆ. ನರಮಾನವನ ನೆಲೆಯಾದ ಭೂಮಂಡಲದಲ್ಲಿ ದೈವೀಶಕ್ತಿಯ ಅವತಾರ ಆಗುವುದೇ ಯಾವುದೋ ಒಂದು ದುಷ್ಟ ಶಕ್ತಿಯ ಅಥವಾ ಧರ್ಮ ವಿರೋಧಿ ಶಕ್ತಿಯ ಸಂಹಾರಕ್ಕಾಗಿ ಎಂದು ಪುರಾಣಗಳು ನಿರೂಪಿಸುತ್ತವೆ. ಈ ದುಷ್ಟ ಶಕ್ತಿಗಳು ಸಹಜ ಸಾಮಾಜಿಕ ಪ್ರವೃತ್ತಿಯಾಗಿ ರೂಪುಗೊಳ್ಳದೆ ಒಂದು ನಿರ್ದಿಷ್ಟ ಆಯಾಮದಲ್ಲಿ ಸೃಷ್ಟಿಯಾಗಿ ಅಂತ್ಯಗೊಳ್ಳುತ್ತವೆ. ಅಂದರೆ ಮಾನವ ಸಮಾಜ ಇಂತಹ "ಧರ್ಮ ವಿರೋಧಿ" ಶಕ್ತಿಗಳನ್ನು ಬಯಸುವುದಿಲ್ಲ, ಆದರೆ ಅನಿವಾರ್ಯವಾಗಿ ಸಹಿಸಿಕೊಳ್ಳಬೇಕಾಗುತ್ತದೆ. ಈ ಸಮಸ್ಯೆಯ ನಿವಾರಣೆಗೆ ದೈವೀ ಶಕ್ತಿಗಳ ಅವತಾರವೊಂದೇ ಮಾರ್ಗ ಎನ್ನುವ ಪರಂಪರೆಯನ್ನು ಪುರಾಣ ಕಥನಗಳಲ್ಲಿ ಕಾಣಬಹುದು. ಸ್ಥಾಪಿತ ಧರ್ಮ ಮತ್ತು ಧರ್ಮ ಕೇಂದ್ರಿತ ಆಧಿಪತ್ಯವನ್ನು ಪ್ರತಿರೋಧಿಸುವ ದನಿಗಳು ಸಹಜವಾಗಿಯೇ ದೈವ ವಿರೋಧಿ ನೆಲೆಯಲ್ಲಿ ಬಿಂಬಿಸಲ್ಪಡುತ್ತದೆ.

ಯಾವುದೇ ಧರ್ಮದಲ್ಲಿನ ಪೌರಾಣಿಕ ಕಥನಗಳನ್ನು ಮತ್ತು ಮಿಥ್ಯೆಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕ್ರೌರ್ಯ ಮತ್ತು ಧರ್ಮ ಒಂದೇ ನಾಣ್ಯದ ಎರಡು ಮುಖಗಳಂತೆ ಕಾಣುತ್ತವೆ. ಜಾಣತನ ಎನ್ನುವುದು ನೀಚತನದ ಮತ್ತೊಂದು ಆಯಾಮ ಎಂದು ಹೇಳಲು ಧರ್ಮಸೂಕ್ಷ್ಮಗಳು ಸ್ಪಷ್ಟ ನಿದರ್ಶನ. ದೇವರು ತನ್ನ ಭಕ್ತರನ್ನು ಅತ್ಯಂತ ಕಠಿಣ ಅಗ್ನಿಪರೀಕ್ಷೆಗೆ ಒಳಪಡಿಸುವ ಮೂಲಕವೇ ಅವರಿಗೆ ಮೋಕ್ಷ ನೀಡುವ ಒಂದು ಪರಂಪರೆಯನ್ನು ಬಹುತೇಕ ಎಲ್ಲ ಪುರಾಣಗಳಲ್ಲೂ ಕಾಣಬಹುದು. ಇಲ್ಲಿ ದೇವರು ಅಥವಾ ದೈವತ್ವದ ಪರಿಕಲ್ಪನೆಯನ್ನು ಭಾವುಕ ನೆಲೆಯಲ್ಲಿ ಕಾಣುವಾಗ ಈ ಕ್ರೌರ್ಯ ಮತ್ತು ಅಮಾನವೀಯ ಮೌಲ್ಯಗಳು ಭಕ್ತಿಪರವಶತೆಯ ಗುಂಗಿನಲ್ಲಿ ಕಣ್ಮರೆಯಾಗುತ್ತವೆ. ಸಮಾಜದ ನೈತಿಕ ಮೌಲ್ಯಗಳನ್ನು ನಿರ್ಧರಿಸುವ ಪ್ರಭಾವಶಾಲಿ ಶಕ್ತಿಯೇ ಧರ್ಮಸೂಕ್ಷ್ಮಗಳನ್ನೂ ನಿರ್ಧರಿಸುವುದರಿಂದ, ಸ್ಥಾಪಿತ ಅಥವಾ ಸ್ವೀಕೃತ ಎನ್ನಬಹುದಾದ ಮೌಲ್ಯಗಳ ರಕ್ಷಣೆಗಾಗಿ ಹಿಂಸೆ, ಕ್ರೌರ್ಯ ಮತ್ತು ಅಸಹಿಷ್ಣುತೆಯನ್ನು ಸಹಿಸಿಕೊಳ್ಳುವ ವೇದಿಕೆಯನ್ನು ಸೃಷ್ಟಿಸಲಾಗುತ್ತದೆ. ಮೌಲ್ಯ ರಕ್ಷಣೆಗಾಗಿ ತನ್ನ ತಾಯಿಯ ಶಿರಸ್ಸನ್ನೇ ಕಡಿಯುವ ಪರಶುರಾಮ, ತನ್ನ ತಂದೆಯ ಸಂಹಾರವನ್ನೇ ಆಹ್ವಾನಿಸುವ ಪ್ರಹ್ಲಾದ ಇಲ್ಲಿ ನಿದರ್ಶನವಾಗಿ ನಿಲ್ಲುತ್ತಾರೆ.




ಧರ್ಮದ ಪರಿಕಲ್ಪನೆಯೇ ಒಂದು ಪ್ರಭಾವಶಾಲಿ ವ್ಯವಸ್ಥೆಯ ಹಿತರಕ್ಷಣೆಯ ಚೌಕಟ್ಟಿನಲ್ಲಿ ಮೂಡಿದಾಗ ಆ ಧರ್ಮದ ಚೌಕಟ್ಟಿನಲ್ಲಿ ನಿರ್ಧರಿತವಾಗುವ ಮೌಲ್ಯಗಳು ಪ್ರಶ್ನಾರ್ಹವಾಗುತ್ತವೆ. ಮಹಾಭಾರತದ ಪ್ರಸಂಗಗಳನ್ನೇ ಗಮನಿಸಿದಾಗ ಸೂತಪುತ್ರನೆಂದು ಅವಹೇಳನಕ್ಕೊಳಗಾಗುವ ಕರ್ಣ ತನ್ನೆಲ್ಲಾ ನಿಷ್ಠೆ, ಶ್ರದ್ಧೆ, ಬದ್ಧತೆ ಮತ್ತು ಶೌರ್ಯದ ನಡುವೆಯೇ ಧರ್ಮ ವಿರೋಧಿ ನೆಲೆಯಲ್ಲಿ ಅಪಮಾನಕ್ಕೊಳಗಾಗುತ್ತಾನೆ. ಮೋಸ, ಕಪಟ ಮಾರ್ಗಗಳಿಂದ ಹತ್ಯೆಗೊಳಗಾಗುತ್ತಾನೆ. ಶ್ರೀಕೃಷ್ಣನ ಸ್ಥಾಪಿತ ಧರ್ಮ ಮತ್ತು ಧಾರ್ಮಿಕ ಮೌಲ್ಯಗಳ ವ್ಯಾಪ್ತಿಯಲ್ಲಿ ದುರ್ಯೋಧನ ಮತ್ತು ಕರ್ಣ ಇಬ್ಬರೂ ಸಮಾನ ನೆಲೆಯಲ್ಲಿ ನಿಲ್ಲುತ್ತಾರೆ. ಶಿಶುಪಾಲ, ದಂತವಕ್ರ, ಜರಾಸಂಧ ಮುಂತಾದವರೂ ಸ್ಥಾಪಿತ ವ್ಯವಸ್ಥೆಯನ್ನು ಪ್ರತಿರೋಧಿಸಿದ ತಪ್ಪಿಗೆ ಶಿಕ್ಷೆಗೊಳಗಾಗುತ್ತಾರೆ. ಇಲ್ಲಿ ಜನಸಮುದಾಯಗಳ ಅಭಿವ್ಯಕ್ತಿಗೆ ಕಿಂಚಿತ್ತೂ ಬೆಲೆ ಇಲ್ಲದಿರುವುದನ್ನು ಧರ್ಮಸೂಕ್ಷ್ಮದ ನೆಲೆಯಲ್ಲಿ ಗ್ರಹಿಸಬೇಕಾಗುತ್ತದೆ. ಹಾಗಾಗಿ ಶ್ರೀಕೃಷ್ಣ ಅನುಸರಿಸುವ ಶತ್ರು ಸಂಹಾರ ವಿಧಾನಗಳು ಉನ್ನತ ಮೌಲ್ಯಗಳಾಗುತ್ತವೆ. ಈ ಸಂಹಾರ ಮಾರ್ಗದ ಹಿನ್ನೆಲೆಯಲ್ಲಿರುವ ಕ್ರೌರ್ಯ ಸ್ವೀಕೃತ ಮೌಲ್ಯಗಳಾಗಿಬಿಡುತ್ತವೆ.

ಸಮಕಾಲೀನ ರಾಜಕಾರಣ ಮತ್ತು ಅಧಿಕಾರ ವ್ಯವಸ್ಥೆಯ ಸಂದರ್ಭದಲ್ಲಿ ಈ ಪೌರಾಣಿಕ ಮಿಥ್ಯೆಗಳನ್ನು ಅವಲೋಕಿಸಿದಾಗ ಕ್ರೌರ್ಯ ಎನ್ನುವುದು ಮಾನವ ಸಮಾಜ ತನ್ನ ಅಸ್ತಿತ್ವದ ಉಳಿವಿಗಾಗಿ ನಿರ್ಮಿಸಿಕೊಂಡಿರುವ ಒಂದು ಪ್ರಬಲ ಅಸ್ತ್ರ ಎಂಬುದು ಅರಿವಾಗುತ್ತದೆ. ಹಾಗಾಗಿಯೇ ಎಂತಹ ಮಾನವೀಯ ಸಮಾಜವನ್ನು ಆರಾಧಿಸುವ ಜನಸಮುದಾಯದವರು ಸಹ ಕ್ರೌರ್ಯದ ಪರಾಕಾಷ್ಠೆ ಎನ್ನಬಹುದಾದ ದೈವಿಕ ಶಕ್ತಿಗಳನ್ನು ಸಮಾನ ಭಕ್ತಿಯಿಂದ ಆರಾಧಿಸುತ್ತಾರೆ. ಕಾಳಿ, ಚಾಮುಂಡೇಶ್ವರಿ ಮುಂತಾದ ದೇವೀ ಸ್ವರೂಪಗಳು ಭಕ್ತಿಯ ಕೇಂದ್ರ ಬಿಂದುಗಳಾಗುತ್ತವೆ. ಮರ್ದನಕ್ಕೊಳಗಾದ, ಕ್ರೌರ್ಯಕ್ಕೊಳಗಾದ ಅಸುರ ಶಕ್ತಿಗಳು ಸಮಾಜದ ದೃಷ್ಟಿಯಲ್ಲಿ ಅಪಮೌಲ್ಯಕ್ಕೊಳಗಾಗುತ್ತವೆ. ಭಕ್ತಿ ಮತ್ತು ದೈವ ಶಕ್ತಿ, ದೈವ ನಂಬಿಕೆಗಳನ್ನು ಸ್ಥಾಪಿತ ಧರ್ಮದ ನೆಲೆಯಲ್ಲಿ ಗ್ರಹಿಸುವಾಗ ಇಂತಹ ಅಪಭ್ರಂಶಗಳು ಸಹಜವಾಗಿಯೇ ತಲೆದೋರುತ್ತವೆ. ಇದೇ ನಂಬಿಕೆಗಳನ್ನು ಮಾನವೀಯ ನೆಲೆಯಲ್ಲಿ ವಿಮರ್ಶೆಗೊಳಪಡಿಸಿ ಪರಾಮರ್ಶಿಸುವ ದಾರ್ಷ್ಟ್ಯತೆ ಮತ್ತು ಪ್ರಾಮಾಣಿಕತೆ ನಮ್ಮ ಸಮಾಜಕ್ಕೆ ಇದೆಯೇ ಎನ್ನುವುದು ಮೂರ್ತ ಪ್ರಶ್ನೆ.

ಮೈಸೂರು **ನಾ. ದಿವಾಕರ**

**ಪ್ರತಿಕ್ರಿಯೆ**

✉ ಫೆಬ್ರವರಿ ತಿಂಗಳ ಹೊಸತು ಪತ್ರಿಕೆಯಲ್ಲಿ ಬಿ. ಎಸ್. ಜಯಚಂದ್ರ ಅವರ ಪ್ರತಿಕ್ರಿಯೆ ನೋಡಿ ಆಶ್ಚರ್ಯವಾಯಿತು. "ಟಿಪ್ಪು ಕೊಡವ ಮತ್ತು ಮಲಬಾರ್ ಪ್ರದೇಶ ಹಾಗೂ ಕರಾವಳಿ ತೀರವನ್ನು ಆಕ್ರಮಿಸಿದಾಗ ಅಲ್ಲಿಯ ಬಹುಪತಿತ್ವ ಅಥವಾ ಮಾತೃ ಪ್ರಧಾನ ಎನ್ನುವ ಅಶ್ಲೀಲ ಸಂಪ್ರದಾಯವನ್ನು ವಿರೋಧಿಸಿದ, ಜೊತೆಗೆ ಇಸ್ಲಾಂ ದೃಷ್ಟಿಯ ಮೂಲಕ ವಿಶ್ಲೇಷಿಸಿದ" ಎಂದು ಹೇಳಿದ್ದಾರೆ. ಮಾತೃಪ್ರಧಾನತೆ ಎಂದರೆ ಬಹುಪತಿತ್ವ ಎಂದು ಜಯಚಂದ್ರರವರು ಭಾವಿಸಿದಂತಿದೆ. ಮಾತೃ ಪ್ರಧಾನತೆ ಎಂದರೆ ಮಾತೃದೇವೋಭವ ಎಂಬುದು ಮಾತ್ರ. ಪಿತೃಪ್ರಧಾನತೆ ಅಲ್ಲ ಎಂಬುದಷ್ಟೆ. ಮಾತೃ ಪ್ರಧಾನತೆಯಲ್ಲಿ ಬಹುಪತಿತ್ವ ಇಲ್ಲ ಮರುಮದುವೆ ಇದೆ. ವಿಚ್ಛೇದಿತೆ ಅಥವಾ ವಿಧವೆ ಮರುಮದುವೆ ಆಗಬಹುದು.

ಅಲ್ಲದೆ ಕರಾವಳಿ ಭಾಗದಲ್ಲಿ ಟಿಪ್ಪು ಸುಲ್ತಾನ್ ಹಿಂದುಗಳನ್ನು ಹಿಂಸಿಸಿದ ದಾಖಲೆಗಳಿಲ್ಲ. ಬದಲಾಗಿ, ಕ್ರೈಸ್ತರನ್ನು ಹಿಂಸಿಸಿದಾಗಲೂ ಅವರ ರಕ್ಷಣೆಗೆ

ನಿಂತವರು ಹಿಂದೂಗಳು. ಈ ವಿಷಯವನ್ನು ನನ್ನ ಕೃತಿ 'ಬಂಟರು – ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ' ಕೃತಿಯಲ್ಲಿ ಅಧ್ಯಾಯ ೧೩ – 'ಗ್ರಾಮಸಾಮರಸ್ಯ'ದಲ್ಲಿ ದಾಖಲಿಸಿದ್ದೇನೆ.

*ಬೆಂಗಳೂರು* **ಡಾ॥ ಇಂದಿರಾ ಹೆಗ್ಗಡೆ**

**ಮುಟ್ಟೂ... ಧಾರ್ಮಿಕ ಮನಸ್ಸಿನ ಮೈಲಿಗೆಯೂ...**

ಕೇರಳದ ಅಯ್ಯಪ್ಪಸ್ವಾಮಿ ದೇಗುಲ ಮಂಡಳಿ ಮುಖ್ಯಸ್ಥ ಪ್ರಯಾರ್ ಗೋಪಾಲಕೃಷ್ಣನ್, 'ಮಹಿಳೆಯರು ದೇವಾಲಯ ಪ್ರವೇಶ ಮಾಡುವು ದಾದರೆ ಮುಟ್ಟಾಗಿದ್ದಾರೆಯೇ ಇಲ್ಲವೇ ಎಂಬುದನ್ನು ಪತ್ತೆ ಹಚ್ಚಿ ನಂತರ ಅವಕಾಶ ನೀಡಬೇಕು. ಇದಕ್ಕೆ ಒಂದು ಯಂತ್ರ ಮೀಸಲಿಟ್ಟರೂ ತಪ್ಪಿಲ್ಲ' ಎಂದು ಹೇಳಿದ್ದರು.

ಸ್ತ್ರೀಯರ ನಿಸರ್ಗದತ್ತ ಪ್ರಕ್ರಿಯೆ ಬಗೆಗಿನ ಅವರ ನಿಲುವು ಮಹಿಳೆಯರ ಆಕ್ರೋಶಕ್ಕೆ ತುತ್ತಾಗಿರುವುದು ಸಹಜವೇ. ಯಾವುದೇ ಹೆಣ್ಣಿನ ಬಗ್ಗೆ ಈ ರೀತಿಯ ಕೀಳುಮಟ್ಟದ ಚಿಂತನೆ ಸಲ್ಲದು. ಪ್ರಸ್ತುತ ಇಂಥ ಧಾರ್ಮಿಕ ಮನಃಸ್ಥಿತಿಗಳು ಹೆಚ್ಚಾಗುತ್ತಿವೆ. ನಾವೇ ಶ್ರೇಷ್ಠರೆಂಬ ಮನೋಬೇನೆ ಇಂಥವರಲ್ಲಿ ಬೇರೂರಿರುವುದರಿಂದ ಬದಲಾವಣೆ ಕಷ್ಟಸಾಧ್ಯ. ಆದರೆ, ಇವೆಲ್ಲದರ ಪರಿಣಾಮದ ಬಗ್ಗೆ ಚಿಂತಿಸದೆ, ಇರಲಾಗದು.

ಯಂತ್ರದ ಮೂಲಕ ಪರೀಕ್ಷಿಸಿದ ಮೇಲೆಯೇ ದೇಗುಲದೊಳಗೆ ಮಹಿಳೆಯರನ್ನು ಬಿಡಬೇಕೆಂಬ ಮಾತು ಅಸಹ್ಯ ಹುಟ್ಟಿಸದೇ ಇರದು. ಇಂಥ ಜನರ ಆಲೋಚನೆಗಳಿಗೆ ಧಿಕ್ಕಾರವಿರಲಿ. ಇವರ ಈ ಹೇಳಿಕೆಗೆ ಮಹಿಳಾ ವಲಯದಲ್ಲಿ ವಿರೋಧ ವ್ಯಕ್ತ ವಾಗುತ್ತಿದೆ. ಅಲ್ಲದೇ 'ಹ್ಯಾಪಿ ಟು ಬ್ಲೀಡ್' ಎಂಬ ಆಂದೋಲನ ಆರಂಭಿಸಿದ್ದಾರೆ. ಇದಕ್ಕೆ ಸಮಾಜದ ವಿವಿಧ ವರ್ಗಗಳಿಂದ ಬೆಂಬಲ ವ್ಯಕ್ತವಾಗುತ್ತಿರುವುದು ಸ್ವಾಗತಾರ್ಹ.

ಅಯ್ಯಪ್ಪ ಬ್ರಹ್ಮಚಾರಿ. ಆತನ ಸನ್ನಿಧಿಗೆ ಮಹಿಳೆಯರು ಯಾವುದೇ ಕಾರಣಕ್ಕೂ ಹೋಗ ಬಾರದು ಎಂಬುದು ಅಲ್ಲಿನ ಸಂಪ್ರದಾಯವಾದಿಗಳ ವಾದ. ಈ ವಾದವನ್ನು ಹಿಂದಿನಿಂದಲೂ ಜಪಿಸಿ ಕೊಂಡು ಬರಲಾಗುತ್ತಿದೆ. ಅದರಲ್ಲೂ ಗರ್ಭಗುಡಿಗೆ ೫೦ರ ವಯೋಮಾನದ ಮಹಿಳೆಯರಿಗೆ ಮಾತ್ರ ಪ್ರವೇಶದ ಅವಕಾಶ ಕಲ್ಪಿಸಲಾಗಿದೆ. ೧೦ರಿಂದ ೫೦ರ ವರ್ಷದೊಳಗಿನವರು ಯಾವುದೇ ಕಾರಣಕ್ಕೂ ದೇಗುಲ ಪ್ರವೇಶಿಸಬಾರದೆಂಬ ನಿರ್ಬಂಧ ಹೇರಲಾಗಿದೆ.

ಈ ಹಿಂದೆ ನಟಿ ಜಯಮಾಲ ಶಬರಿಮಲೆ ದೇವಾಲಯ ಪ್ರವೇಶಿಸಿದ ವಿಷಯ ಪ್ರಸ್ತಾಪಿಸಿ ವಿವಾದಕ್ಕೆ ಸಿಲುಕಿದ್ದರು. ನಂತರ ಕೋರ್ಟು ಇವರ ಪರವಾಗೇ ತೀರ್ಪು ನೀಡಿತ್ತು. ಇನ್ನೊಂದು ಪ್ರಕರಣ, ದೇವಾಲಯದ ಮುಖ್ಯ ಅರ್ಚಕರ ಹನ್ನೊಂದು ವರ್ಷದ ಮಗಳಿಗೆ ಸಂಬಂಧಪಟ್ಟದ್ದು. ಆಕೆಗೆ ಗರ್ಭಗುಡಿ ಒಳಗೆ ಹೋಗಲು ಅವಕಾಶ ನೀಡಿದ್ದು ವಿವಾದಕ್ಕೆ ಕಾರಣವಾಗಿತ್ತು. ಈ ಸಂಬಂಧ ಮುಖ್ಯ ಅರ್ಚಕರ ಭದ್ರತಾ ಅಧಿಕಾರಿ, ಇಬ್ಬರು ಮಹಿಳಾ ಪೊಲೀಸ್ ಅಧಿಕಾರಿಗಳು, ಟಿಡಿಬಿಯ ಇಬ್ಬರು ಗುತ್ತಿಗೆ ಆಧಾರದ ಸಿಬ್ಬಂದಿ ಮೇಲೆ ದೂರು ಸಲ್ಲಿಸಲಾಗಿತ್ತು.

ಎಂಥ ವಿಪರ್ಯಾಸ ನೋಡಿ. ಮಕ್ಕಳು ದೇವರಿಗೆ ಸಮ ಎನ್ನುತ್ತಾರೆ. ಆ ಮಕ್ಕಳನ್ನೂ ದೇವರಿಂದ ದೂರ ತಳ್ಳಿ, ದೇವರೆಂದರೆ ಏನು? ಎಂಬ ಪ್ರಶ್ನೆ ಹುಟ್ಟಲು ಅವಕಾಶ ಕಲ್ಪಿಸಿಕೊಡುತ್ತಾರೆ.

ದೇವರೆಂದರೆ ಯಾರು? ನಮ್ಮ ಕಣ್ಣಿಗೆ ಕಾಣದ, ಯಾರದೋ ಕಲ್ಪನೆಯಲ್ಲಿ, ಬಣ್ಣದ ಕುಂಚದಲ್ಲಿ ಮೂಡಿದ ಅಥವಾ ಶಿಲ್ಪಿಯ ಕೈಯಲ್ಲಿ ಸಿಲುಕಿ ಮೂರ್ತಗೊಂಡ ಮೂರ್ತಿಯೇ? ಸಂಕಷ್ಟಗಳಿಗೆ ಕಿವಿಗೊಡುವ, ಅವುಗಳನ್ನು ಪರಿಹರಿಸುವಲ್ಲಿ ಸಹಕಾರಿಯಾಗುವ, ನಮ್ಮ ತಪ್ಪು ಒಪ್ಪುಗಳನ್ನು ತಿದ್ದುವ ಮಾರ್ಗದರ್ಶಕನೇ ನಿಜವಾದ ದೇವರು ಎಂಬುದು ನನ್ನ ಅನಿಸಿಕೆ.

ದೇವರಿಗೆ ಎಲ್ಲರೂ ಸಮಾನರೇ. ಯಾವ ದೇವರು ತಾನೇ ನನ್ನ ಬಳಿ ಇಂಥವರು ಬರಬಾರದು ಎಂದು ಬಾಯಿ ಬಿಟ್ಟು ಹೇಳಿದ? ದೇವರೆಂಬ ಪರಿಕಲ್ಪನೆಯೊಳಗೇ ನಾವು ಇಲ್ಲಿಯವರೆಗೂ ಬಾಳುತ್ತಿದ್ದೇವೆ. ಸರಿ, ಆದರೆ ಆ 'ದೇವರು' ಎಂಬ ಪದ ನಮ್ಮಲ್ಲಿ ಯಾವ ರೀತಿಯ ಆಲೋಚನೆಗಳಿಗೆ ಎಡೆಮಾಡಿಕೊಡುವಂತಿರಬೇಕು?

ಇನ್ನು ಕೆಲವರಿಗೆ ಸ್ತ್ರೀಯರ ಮುಟ್ಟಿನ ಕ್ರಿಯೆ ಮೈಲಿಗೆ, ಅಸಹ್ಯ ಹುಟ್ಟಿಸುತ್ತದೆ. ಹಾಗೇ ಅದರೊಳಗೆ ಮಿಂದೆದ್ದು ಹೊಸ ಹುಟ್ಟು ಪಡೆದವರೂ ಮೈಲಿಗೆ ಯಾದವರೇ! ಯಾಕೆಂದರೆ, ಅವರಿಗೂ ಆ ರಕ್ತದ ಕಲೆ ಮೆತ್ತಿಕೊಂಡಿರುತ್ತಲ್ಲವೇ!?

ಹೆಣ್ಣು ಋತುಮತಿಯಾಗುವ ಕ್ರಿಯೆಗೆ ಸ್ವಇಚ್ಛೆ ಯಿಂದ ತೆರೆದುಕೊಳ್ಳುವುದಿಲ್ಲ. ಅದಕ್ಕೆ ಮೆದುಳಿನಲ್ಲಿ ಇರುವ ಹೈರೋಥ್ಯಾಲಮಸ್ ಎಂಬ ಗ್ರಂಥಿ ಸ್ರವಿಸುವ ಹಾರ್ಮೋನುಗಳೇ ಕಾರಣ. ಕೆಲ ಹೆಂಗಸರೂ ಈ ಸಂದರ್ಭದಲ್ಲಿ ತಮ್ಮನ್ನು ತಾವೇ ಕೀಳಾಗಿ ಭಾವಿಸುವ ಮನೋವೇದನೆಗೆ ಒಳಗಾಗುತ್ತಾರೆ. ನಾವೇನೋ ದೊಡ್ಡ ಅಪಚಾರ ಮಾಡಿದವರಂತೆ, ಅಸ್ಪೃಶ್ಯ ರಾಗುತ್ತಾರೆ. ಈ ಆಲೋಚನೆ ಗ್ರಾಮೀಣ ಪ್ರದೇಶ ಗಳಲ್ಲಿ ಗಟ್ಟಿಯಾಗಿ ಬೇರೂರಿದೆ. ಅವರೂ ಇತ್ತೀಚಿನ ದಿನಗಳಲ್ಲಿ ಇದು ಸಹಜ ಪ್ರಕ್ರಿಯೆ ಎಂಬುದನ್ನು ಅರ್ಥೈಸಿಕೊಳ್ಳುತ್ತಿದ್ದಾರೆ. ಇದು ಉತ್ತಮ ಬೆಳವಣಿಗೆ. ಆದರೆ, ಕೆಲ ಅತೀ ಬುದ್ಧಿವಂತರಿಗೆ ಇದಿನ್ನೂ ಅರ್ಥವಾಗುತ್ತಿಲ್ಲ?

*ಹಾಸನ ಜಿಲ್ಲೆ* **ಕಾವೇರಿ ಎಸ್. ಎಸ್.**

**ಮಕ್ಕಳಿಗೆ ಹಕ್ಕುಗಳಿವೆ**

ಮಕ್ಕಳು ದೇಶದ ಆಸ್ತಿ. ಆರೋಗ್ಯವಂತ ಮಕ್ಕಳು ದೇಶದ ಅರ್ಥವ್ಯವಸ್ಥೆಯ ಸಾರಥಿಗಳು. ಮಕ್ಕಳ ಶಿಕ್ಷಣ ಮಾನವ ಸಂಪನ್ಮೂಲ ಅಭಿವೃದ್ಧಿಗೆ ಮೂಲ. ಸಾಮಾಜಿಕ ಮೌಲ್ಯ ಹೆಚ್ಚಿಸುವಲ್ಲಿಯೂ ಮಕ್ಕಳ ಪಾತ್ರ ಹಿರಿದು. ರಾಷ್ಟ್ರದ ಕಟ್ಟಡದ ಸುಂದರ ವಾದ ಗಟ್ಟಿ ಇಟ್ಟಿಗೆಗಳೇ ಮಕ್ಕಳು. ಒಟ್ಟಿನಲ್ಲಿ ಮಕ್ಕಳು ದೇಶದ ಸಮಗ್ರ ಅಭಿವೃದ್ಧಿಗೆ, ನವನಿರ್ಮಾಣಕ್ಕೆ ಅನಿವಾರ್ಯವಾಗಿದ್ದಾರೆ. "ಬಾಳ ಸಂಪುಟದಲ್ಲಿ ಬಾಲ್ಯ ಎಂಬುವುದೊಂದು ಅಳಿಸಲಾರದ ಮಧುರ ಭಾವಗೀತ" ಆಗಿರುವುದರಿಂದಾಗಿ ಮಕ್ಕಳು ನಿಸರ್ಗದತ್ತವಾಗಿ ಹಾಗೂ ದೇಶದ ಕಾನೂನಿನ ಚೌಕಟ್ಟಿನಲ್ಲಿ ಹಕ್ಕುಗಳನ್ನು ಹೊಂದಿರುತ್ತಾರೆ.

ನಮ್ಮ ಸಂವಿಧಾನದ ೧೪ನೇ ವಿಧಿಯ ಪ್ರಕಾರ ಮಕ್ಕಳಿಗೆ ಸಮಾನತೆಯ ಹಕ್ಕು, ೨೧ನೇ ವಿಧಿಯ ಪ್ರಕಾರ ಜೀವರಕ್ಷಣೆ ಮತ್ತು ವೈಯಕ್ತಿಕ ಸ್ವಾತಂತ್ರ್ಯದ ಹಕ್ಕನ್ನು ನೀಡಲಾಗಿದೆ. ೨೧ (ಎ) ವಿಧಿಯ ಪ್ರಕಾರ ಪ್ರಾಥಮಿಕ ಶಿಕ್ಷಣದ ಹಕ್ಕು ಮತ್ತು ಈ ಹಕ್ಕಿನಡಿಯಲ್ಲಿಯೇ ಉಚಿತ ಮತ್ತು ಕಡ್ಡಾಯ ಶಿಕ್ಷಣದ ಕಾಯ್ದೆಯನ್ನು ೨೦೧೦ರಿಂದಲೇ ಜಾರಿ ಗೊಳಿಸಲಾಗಿದೆ. ೨೩ ಮತ್ತು ೨೪ನೇ ವಿಧಿಗಳಲ್ಲಿ ಕ್ರಮವಾಗಿ ಮಕ್ಕಳ ಶೋಷಣೆಯ ವಿರುದ್ಧದ ಹಕ್ಕು ಮತ್ತು ೧೪ ವರುಷದ ಒಳಗಿನ ಮಕ್ಕಳನ್ನು ಅಪಾಯಕಾರಿ ಸ್ಥಳಗಳಲ್ಲಿ ದುಡಿಸಿಕೊಳ್ಳುವ ವಿರುದ್ಧದ ಹಕ್ಕುಗಳಿವೆ. ಅಲ್ಲದೆ ೬ ವರ್ಷದೊಳಗಿನ ಎಲ್ಲ ಮಕ್ಕಳಿಗೆ 'ಬಾಲ್ಯ ಪೋಷಣೆ' ಮತ್ತು ಶಿಕ್ಷಣವನ್ನು ಕೊಡಲು ಸರ್ಕಾರ ಯತ್ನಿಸಬೇಕೆಂಬುದನ್ನು ರಾಜ್ಯನಿರ್ದೇಶಿತ ತತ್ವಗಳಲ್ಲಿ ಸೇರಿಸಲಾಗಿದೆ.

ಮಕ್ಕಳ ಶಿಕ್ಷಣದ ಸಾರ್ವತ್ರೀಕರಣಕ್ಕೆ 'ಸರ್ವ ಶಿಕ್ಷಣ ಅಭಿಯಾನ', ಮಕ್ಕಳ ಆರೋಗ್ಯಕ್ಕೆ 'ನಗು ಮಗು', 'ಜನನಿ ಸುರಕ್ಷಾ ಯೋಜನೆ', 'ಮಡಿಲು ಕಿಟ್‌ಗಳು', ಮಕ್ಕಳಿಗೆ ಕಬ್ಬಿಣಾಂಶದ ಮಾತ್ರೆಗಳನ್ನು ನೀಡುವುದು, ಪೌಷ್ಟಿಕಾಂಶದ ಕೊರತೆಗೆ ಮಧ್ಯಾಹ್ನ ಬಿಸಿಯೂಟ ಕಾರ್ಯಕ್ರಮ, ಹೆಣ್ಣುಮಕ್ಕಳ ಶ್ರೇಯೋಭಿವೃದ್ಧಿಗಾಗಿ ಸುಕನ್ಯಾ ಸಮೃದ್ಧಿ ಯೋಜನೆ. 'ಬೇಟಿ ಬಚಾವೊ ಬೇಟಿ ಪಡಾವೊ', ಪ್ರಗತಿ ಮತ್ತು ಇತ್ತೀಚೆಗೆ ಘೋಷಿಸಿರುವ ಇಂದ್ರಧನುಷ್, 'ಖೋಯಾಪಾಯಾ', ನಲಿ ಕಲಿ ಈ ತೆರನಾದ ಕೇಂದ್ರ ಹಾಗೂ ರಾಜ್ಯ ಸರಕಾರದ ಯೋಜನೆಗಳು ಮಕ್ಕಳ ಸರ್ವತೋಮುಖ ಅಭಿವೃದ್ಧಿಗೆ ಎಡೆಮಾಡಿ ಕೊಡುತ್ತವೆ.

ಆದರೂ ಇಂದು ಹೆಚ್ಚುತ್ತಿರುವ ಬಾಲ್ಯವಿವಾಹ, ಭ್ರೂಣ ಹತ್ಯೆ, ಮಕ್ಕಳ ಕಳ್ಳಸಾಗಾಣಿಕೆ, ಕಳಪೆ ಗುಣಮಟ್ಟದ ಶಿಕ್ಷಣ... ಇತ್ಯಾದಿಗಳಿಂದಾಗಿ ನಾವು ಮಕ್ಕಳನ್ನು ಅಲಕ್ಷಿಸುತ್ತಿರುವುದು ಸ್ಪಷ್ಟ. 'ಪ್ರಥಮ್' ಎಂಬ ಸರ್ಕಾರೇತರ ಸಂಸ್ಥೆ ರೂಪಿಸಿರುವ ವರದಿಯ ಪ್ರಕಾರ ೮ನೇ ತರಗತಿಯ ಮಕ್ಕಳಿಗೆ ಎರಡನೇ ತರಗತಿ ಮಟ್ಟದ ಸರಳವಾದ ಲೆಕ್ಕ ಹಾಗೂ ಪಠ್ಯವನ್ನು ಓದಲು–ಬರೆಯಲು ಬರುತ್ತಿಲ್ಲ ಎಂಬುದು ಸರ್ಕಾರಿ ಶಾಲೆಗಳ ಗುಣಮಟ್ಟವನ್ನು ವಿವರಿಸುವಂಥದ್ದು. ಹಳ್ಳಿ ಮತ್ತು ನಗರಗಳಲ್ಲಿರುವ ಮಕ್ಕಳ ನಡುವೆ ಶೈಕ್ಷಣಿಕ, ಸಾಮಾಜಿಕ ಸೌಲಭ್ಯಗಳ ಅಂತರ ಹೆಚ್ಚಾಗಿ ಸಮಸ್ಯೆಗಳುಂಟಾಗುತ್ತಿವೆ.

ಇವನ್ನೆಲ್ಲ ಹೋಗಲಾಡಿಸಲು, ಮಕ್ಕಳ ಕುರಿತ ಸರ್ಕಾರಿ ಕಾರ್ಯಕ್ರಮಗಳನ್ನು ಅಧಿಕಾರಿಗಳು ಯಶಸ್ವಿಯಾಗಿ ಅನುಷ್ಠಾನಗೊಳಿಸಬೇಕು. ಮಕ್ಕಳ ಅಭಿವೃದ್ಧಿಗೆ ಪೂರಕವಾದ ಅಂತಾರಾಷ್ಟ್ರೀಯ ಕಾನೂನಿ ನನ್ವಯ ಮಾನದಂಡಗಳನ್ನು ನಿಗದಿಪಡಿಸಬೇಕು.

ರಚನಾತ್ಮಕ ಶಿಕ್ಷಣದ ಮೂಲಕ ಮಕ್ಕಳು ಬರೀ ಭತ್ತ ತುಂಬುವ ಗೋಣಿಚೀಲಗಳಾಗದಂತೆ ಎಚ್ಚರ ವಹಿಸ ಬೇಕು. ಅವರು ಭತ್ತ ಬೆಳೆಯುವ ಗದ್ದೆಗಳಾಗಬಾರದು, ೨೧ನೇ ಶತಮಾನ ಮಕ್ಕಳಿಗೆ ತಂದೊಡ್ಡಿರುವ ಸವಾಲುಗಳನ್ನು ಪರಿಹರಿಸುವತ್ತ ಸಮಗ್ರ ನೀತಿ ರೂಪಿಸುವುದು ಸರ್ಕಾರ, ನಾಗರಿಕ ಸಮಾಜ, ಸಂಘ–ಸಂಸ್ಥೆಗಳು, ತಂದೆ–ತಾಯಿ, ಪಾಲಕರು ಮತ್ತು ವಿದ್ಯಾಕೇಂದ್ರಗಳ ಜವಾಬ್ದಾರಿ. ಒಂದು ವೇಳೆ ಈ ಜವಾಬ್ದಾರಿಯನ್ನು ಮರೆತರೆ, ಅಲಕ್ಷಿಸಿದರೆ ನಮ್ಮ ನಿಮ್ಮೆಲ್ಲರಿಗೆ ಉಳಿಯುವುದೊಂದೇ ಪ್ರಶ್ನೆ, ಅದು **"ಮಕ್ಕಳಿಗೆ ಹಕ್ಕುಗಳಿವೆಯೇ?"** ಎಂಬುದು.

*[೨೦–೧೧–೨೦೧೫ : ಮಕ್ಕಳ ಹಕ್ಕಿನ ದಿನ]*

*ಬೆಳಗಾವಿ* ***ಡಾ॥ ಸಿ. ಕೆ. ನಾವಲಗಿ***

### ಜಾತ್ಯತೀತ ಚರ್ಚೆ

ಜಾತ್ಯತೀತ ಪದದಲ್ಲಿನ ಜಾತಿ ಅಂದರೆ ಇಂಗ್ಲಿಷಿನ ಕ್ಯಾಸ್ಟ್ ಒಡನೆ ಸೇರಿ ಗೊಂದಲ ಉಂಟುಮಾಡುತ್ತದೆ. ಧರ್ಮನಿರಪೇಕ್ಷತೆ ಧರ್ಮ ವಿರೋಧದ ಆಭಾಸ ಉಂಟುಮಾಡುತ್ತದೆ. ಧರ್ಮ ಪದಕ್ಕೆ ಮತಧರ್ಮದ ಹಂಗಿಲ್ಲದ ತನ್ನದೇ ನೆಲೆಯಿದೆ. ಹೀಗಾಗಿ ಇಂಗ್ಲಿಷಿನ ಸೆಕ್ಯುಲರ್‌ಗೆ ಪರ್ಯಾಯವಾಗಿ ಕನ್ನಡ ಪದ ಬೇಕು. ಇಂಗ್ಲಿಷಿನಲ್ಲಿ 'ಸೆಕ್ಯುಲರ್' ಮತ್ತು 'ರಿಗರಸ್' ಪದಗಳನ್ನು ಬಳಸಿದಾಗ ಅವು ಮತಧರ್ಮದ ಉಪದೇಶಕನಿಗೆ ಒಂದು ವಿಧವಾದ ಕಠಿಣ ಆಚರಣೆಗಳನ್ನು ವಿಧಿಸಿ, ಅನುಯಾಯಿಗಳಿಗೆ ಸಡಿಲವಾದ ಆಚರಣೆಗಳನ್ನು ವಿಧಿಸುವ ಸಂದರ್ಭದಲ್ಲಿ ಬಳಸಿದ ಪದಗಳು. ಆ ಸೆಕ್ಯುಲರ್ ಪದ ನಮಗೆ ಇಸಂ ಆದಾಗ ಆ ಆಚರಣೆಗಳಿಗೆ ತುಂಬ ಒತ್ತು ಕೊಡದ ಸಾಂಸಾರಿಕ ಜೀವನ ಕ್ರಮ ಅಂತಲೇ ಅರ್ಥ. ಸಾಮಾಜಿಕ ಹಾಗೂ ರಾಜಕೀಯ ಜೀವನದಲ್ಲಿ ಮತಧರ್ಮದ ಕಟುನಿಷ್ಠೆಯ ಹಾದಿ ಬೇಡ, ಸರಳವಾಗಿರಲಿ ಅಂತ ಹೇಳಿದ ರೀತಿ ಅದು. ಅಂದರೆ ಮತಧರ್ಮೀಯ ಅನುಸರಣೆಗಳು ವ್ಯಕ್ತಿಯ ಖಾಸಗಿ ವಿಷಯ. ಎಷ್ಟೋ ಜನ ಮಹನೀಯರು ಆ ನಿಷ್ಠೆಯ ಮೂಲಕ ತಮ್ಮ ಶುದ್ಧ ಚಾರಿತ್ರ್ಯ ನಿರ್ಮಿಸಿಕೊಂಡು, ಸಾರ್ವಜನಿಕವಾಗಿ ಸ್ವಚ್ಛ ಜೀವನ ನಡೆಸುತ್ತಾರೆ; ಅದೇ ಸಮಯ ತಮ್ಮ ಸ್ವಂತ ಮತಧರ್ಮದ ವಿಷಯಗಳನ್ನು ಯಾರ ಮೇಲೂ ಹೇರುವುದಿಲ್ಲ. ಅದು ಗೌಪ್ಯ ಅವರಿಗೆ.

ಸಂವಿಧಾನದ ಆಶಯ ಸಾರ್ವಜನಿಕ ವಿಷಯ ಗಳಲ್ಲಿ ಮತಧರ್ಮದ ಆಚರಣೆ ಬೇಡ ಅನ್ನುವುದು. ತಮ್ಮ ರಾಷ್ಟ್ರ ಏಕ ಮತಧರ್ಮದ ದೇಶ ಆಗಿದ್ದರೆ ಬಹುಶಃ ಇಂದಿನ ಗೊಂದಲ ಇರುತ್ತಿರಲಿಲ್ಲವೇ ಅಂದರೆ ಅದೂ ಸರಿಯಲ್ಲ. ಒಂದೇ ಮತಧರ್ಮ ದೊಳಗೆ ಹಲವಾರು ಪ್ರಭೇದ ಆಚರಣೆಗಳಿದ್ದು, ಅಲ್ಲೂ ಸ್ಥಾನಿಕ ಮನಸ್ತಾಪಗಳು ತಾಂಡವವಾಡುತ್ತಿವೆ. ಅಮೇರಿಕದಲ್ಲಿ ಕ್ಯಾಥೊಲಿಕ್ ಮತ್ತು ಪ್ರೊಟೆಸ್ಟೆಂಟ್‌ಗಳ ನಡುವೆ ಗೊಂದಲ ಇರುತ್ತದೆ. ಇನ್ನು ಬಹುಮತ ಧರ್ಮೀಯ ನಾಡಿನಲ್ಲಿ ಸಾರ್ವಜನಿಕ ಜೀವನವನ್ನು ಸುಗಮವಾಗಿ ನಡೆಸುವುದು ಹೇಗೆ ? ಸರ್ವಧರ್ಮ ಸಮಾನತೆಯನ್ನು ಸಾರ್ವಜನಿಕ ದೈನಂದಿನ ಜೀವನದಲ್ಲಿ ಅನುಸರಿಸುವ ಬಗೆ ಹೇಗೆ ? ತೆಂಗಿನಕಾಯಿ, ಆರತಿ, ತಿಲಕ ಮೂರ್ತಿ, ಅಮೂರ್ತ ಬಣ್ಣ ಬಣ್ಣಗಳು ಒಂದೇ ಎರಡೇ ? ಸೆಕ್ಯುಲರ್ ಪ್ರಾರ್ಥನೆ ಅನ್ನುವುದನ್ನೇ ಎಲ್ಲ ಮತಧರ್ಮೀಯ ಗುರುಮಠಗಳು ಒಪ್ಪುವುದಿಲ್ಲ.

ಸಾಮಾನ್ಯವಾಗಿ ಇಂಗ್ಲಿಷಿನ Religion ಗೆ ಮತ ಎಂಬ ಪದ ಬಳಕೆಯಾಗುತ್ತದೆ. ಅಲ್ಲಿ ನಮ್ಮ ಮತದ ಅರ್ಥ ಬರುವುದಿಲ್ಲ. ಮತ ಅಂದರೆ ಅಭಿಪ್ರಾಯ, ಅಭಿಮತ ಇತ್ಯಾದಿ. ಹಾಗೆಯೇ ಮತಕ್ಕೆ ಹಲವರು ಧರ್ಮ ಎನ್ನುತ್ತಾರೆ. ಆದರೆ ಮತ ಪದಕ್ಕೆ ನಮ್ಮ ಸಂಪ್ರದಾಯದಲ್ಲಿ ಇಂಗ್ಲಿಷಿನ ರಿಲಿಜನ್‌ಗಿಂತ ವಿಸ್ತಾರವಾದ ಅರ್ಥವಿದ್ದು, ಅದನ್ನು ಧರ್ಮ ಎನ್ನುವುದು ಸರಿಯಲ್ಲ. ಅದರದೇ ಧರ್ಮವೂ ಇರಬಹುದು, ಅಷ್ಟೇ. ಮತ್ತೊಂದು ತೊಡಕು ಅಂದರೆ, ನಮ್ಮಲ್ಲಿ 'ವೋಟು' ಎಂಬ ಪದಕ್ಕೂ ಮತ ಅನ್ನುತ್ತೇವೆ. ವೋಟಿನ ಹೆಸರಿನಲ್ಲಿ ಮತಧರ್ಮ ಮೂಗು ತೂರಿಸುತ್ತದೆ. ಹೀಗಾಗಿ ನಾನು ರಿಲಿಜನ್‌ಗೆ ಮತಧರ್ಮವೆಂದೇ ಬಳಸುತ್ತೇನೆ.

ಸಾಮಾಜಿಕ ಜೀವನದಲ್ಲಿ ಮತಗಳ ಮೂಗು ತೂರಿಸುವಿಕೆ ಬೇಡ ಅನ್ನುವ ಸೆಕ್ಯುಲರ್‌ಗೆ ಮತಧರ್ಮಾತೀತ ಅನ್ನುವ ಪದ ಸೂಕ್ತ. ಇದು ಅಪಾರ್ಥಕ್ಕೆ ಎಡೆಕೊಡುವ ನಿರಪೇಕ್ಷ ಅನ್ನುವುದಕ್ಕಿಂತ ಮತಧರ್ಮಾತೀತ ಸಾರ್ವಜನಿಕ ನಡವಳಿಕೆ ಅನ್ನುವುದು ಸೂಕ್ತ. ದಯವಿಟ್ಟು ನಾವೆಲ್ಲ ಕನ್ನಡದಲ್ಲಿ ಸೆಕ್ಯುಲರ್‌ಗೆ ಮತಧರ್ಮಾತೀತ ಅನ್ನುವ ಪದ ಬಳಕೆಗೆ ತರೋಣ ಅಂತ ನನ್ನ ವಿನಮ್ರ ವಿನಂತಿ.

*ಬೆಂಗಳೂರು* ***ಕೆ. ಎಸ್. ಪಾರ್ಥಸಾರಥಿ***

### 'ದೇಶಭಕ್ತಿ', 'ದೇಶಾಭಿಮಾನ' – ಬಿಜೆಪಿಯ ವ್ಯಾಖ್ಯಾನ

ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯ ದಲ್ಲಿ, ಇತ್ತೀಚೆಗೆ ನಡೆದ ವಿದ್ಯಮಾನಗಳ ಹಿನ್ನೆಲೆಯಲ್ಲಿ, ಆಡಳಿತಾರೂಢ ಬಿಜೆಪಿ ಪಕ್ಷ, 'ದೇಶಭಕ್ತಿ' ಎಂಬ ಪದಕ್ಕೆ ತನ್ನದೇ ಆದ ಅರ್ಥ ಮತ್ತು ವ್ಯಾಖ್ಯಾನಗಳನ್ನು ಈ ದೇಶದ ಪ್ರಜೆಗಳ ಮುಂದಿಟ್ಟಿದೆ. ಪ್ರತಿಯೊಬ್ಬರೂ ಬಿಜೆಪಿ ಪಕ್ಷದ 'ದೇಶಭಕ್ತಿ' ಮತ್ತು 'ದೇಶಾಭಿಮಾನ' ಕುರಿತಾದ ವ್ಯಾಖ್ಯಾನಗಳನ್ನು ಮತ್ತು ಪಾಠಗಳನ್ನು ಒಪ್ಪಿ ಕೊಳ್ಳಲೇಬೇಕು, ಇಲ್ಲದಿದ್ದರೆ ಅಂಥವರಿಗೆ ಉಳಿಗಾಲ ಇಲ್ಲ, ಎನ್ನುವ ಪರಿಸ್ಥಿತಿಯನ್ನು ಸೃಷ್ಟಿಸಲು ಮುಂದಾಗಿದೆ. ಈ ದೇಶದ ವಿಶ್ವವಿದ್ಯಾಲಯಗಳಲ್ಲಿ ರಾಜಕೀಯ ಸಿದ್ಧಾಂತ, ಬೆಳವಣಿಗೆಗಳು ಮತ್ತು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ತೆಗೆದು ಕೊಳ್ಳುವ ನಿರ್ಧಾರಗಳ ಬಗ್ಗೆ ಮುಕ್ತ ಚರ್ಚೆ ನಡೆಸುವುದೇ ಮಹಾಪರಾಧ ಎಂದು ನಿರ್ಧರಿಸುವ ಮಟ್ಟಿಗೆ ಕೋಲಾಹಲ ಸೃಷ್ಟಿಸಲಾಗುತ್ತಿದೆ.

ಆಡಳಿತಾರೂಢ ಬಿಜೆಪಿ ಮತ್ತು ಸಂಬಂಧಿತ ಸಂಘಟನೆಗಳು, ಈ ದೇಶದಲ್ಲಿ, ಓರ್ವ ಪ್ರಜೆ 'ದೇಶಭಕ್ತ'ನೆನ್ನಿಸಿಕೊಳ್ಳಬೇಕಾದರೆ, ಅವನು ಅಥವಾ ಅವಳು ಏನನ್ನು ಮಾಡಬೇಕು ಮತ್ತು ಏನನ್ನು ಮಾಡಬಾರದು ಎನ್ನುವುದರ ಬಗ್ಗೆ ನಿಗದಿತ ಸಂಹಿತೆಯನ್ನು ಜಾರಿಗೊಳಿಸುವ ದಿಸೆಯಲ್ಲಿ ಸಾಗುತ್ತಿದೆ.

ಹೈದರಾಬಾದ್ ವಿಶ್ವವಿದ್ಯಾಲಯದ ಸಂಶೋಧನಾ ವಿದ್ಯಾರ್ಥಿ ರೋಹಿತ್ ವೇಮುಲ ಆತ್ಮಹತ್ಯೆ ಮತ್ತು ಕನ್ಹಯ್ಯ ಕುಮಾರ್ ಬಂಧನ ಮುಂದೆ ಸಂಭವಿಸ ಬಹುದಾದ ರಾಜಕೀಯ ಬೆಳವಣಿಗೆಗಳ ಮುನ್ಸೂಚನೆ ಎನ್ನಬಹುದು. ಆಡಳಿತಾರೂಢ ಪಕ್ಷ ಮತ್ತು ಸರ್ಕಾರಗಳ ನೀತಿ, ನಿಲುವುಗಳನ್ನು ವಿರೋಧಿಸುವುದೂ 'ದೇಶದ್ರೋಹಿ' ಚಟುವಟಿಕೆ ಎಂದು ತೀರ್ಮಾನಿಸುವ ದಿನಗಳು ಸನ್ನಿಹಿತ ವಾದರೆ ಆಶ್ಚರ್ಯವಿಲ್ಲ. ಈ ದೇಶದಲ್ಲಿ, ಬಡತನ ರೇಖೆಗಿಂತ ಕೆಳಗಿರುವ ಸುಮಾರು ಶೇಕಡ ೪೦ರಷ್ಟು ಜನಸಂಖ್ಯೆಯ ಹಸಿವು, ಬಡತನ ಮತ್ತು ನಿರಾಶ್ರಿತತೆಯನ್ನು ಪರಿಹರಿಸುವ ನಿಟ್ಟಿನಲ್ಲಿ 'ದೇಶಭಕ್ತಿ' ವ್ಯಕ್ತವಾಗಬೇಕು. ಶತಮಾನಗಳಿಂದ ಸಾಮಾಜಿಕ ಶೋಷಣೆ ಮತ್ತು ತುಳಿತಕ್ಕೆ ಒಳಗಾದ ಹಿಂದುಳಿದ ಸಮುದಾಯಗಳ ಉನ್ನತಿಗೆ ಶ್ರಮಿಸುವ ದಿಕ್ಕಿನಲ್ಲಿ 'ದೇಶಾಭಿಮಾನ' ವ್ಯಕ್ತವಾಗಬೇಕು.

*ಬೆಂಗಳೂರು* ***ಶಂಕರನಾರಾಯಣ***

### ಅಭಿಪ್ರಾಯ

ಸೂರ್ಯನ ಸುತ್ತ ಭೂಮಿ ತಿರುಗುತ್ತದೆ ಎಂದು ಹೇಳಿದವನನ್ನು ಕೊಂದರು. ಆದರೆ ಈಗ ಜನ ಅದನ್ನು ಒಪ್ಪಿಕೊಂಡು ಮಕ್ಕಳಿಗೂ ಹೇಳುತ್ತಿದ್ದಾರೆ. ಹಾಗೆಯೇ ನಾನು ತಿಳಿದುಕೊಂಡಿದ್ದು, ಕಲ್ಲು ದೇವರು ದೇವರಲ್ಲ. ಕಲ್ಲು ದೇವರ ಮೇಲೆ ಉಚ್ಚಿ ಹೊಯ್ದರೂ ಏನು ಆಗುವುದಿಲ್ಲ ಎಂದು ಹೇಳಿದ ಎಂ. ಎಂ. ಕಲಬುರ್ಗಿ ಯವರನ್ನು ಕೊಂದರು. ಮುಂದೆ ಒಂದು ದಿನ ಕಲ್ಲು ದೇವರು, ಕಬ್ಬಿಣ ದೇವರು, ಕಟ್ಟಿಗೆ ದೇವರು, ಇಟ್ಟಿಗೆ ದೇವರು, ಪ್ಲಾಸ್ಟಿಕ್ ದೇವರು, ಪಂಚಲೋಹಗಳ ದೇವರು, ಪಂಚಭೂತಗಳ ದೇವರು, ಇವರ್‍ಯಾರೂ ದೇವರಲ್ಲ ಎಂದು ಜನರು ಒಪ್ಪಿಕೊಂಡು, ಮಕ್ಕಳಿಗೆ ಕಲಿಸುವ ದಿನ ಬಂದೇ ಬರುತ್ತದೆ ಎಂಬ ವಿಶ್ವಾಸ ನನಗಿದೆ.

ಈ ಮೇಲಿನ ಎರಡು ಸತ್ಯಗಳನ್ನು ಏಕೆ ಹೇಳಿದೆ ನೆಂದರೆ, ವಿಜ್ಞಾನ ಬೆಳೆದಂತೆ ಮೂಢನಂಬಿಕೆಗಳು ಮಾಯವಾಗುವ ದಿನ ಬಂದೇ ಬರುತ್ತದೆ. ಹಾಗೆಯೇ ಹನ್ನೆರಡನೇ ಶತಮಾನದಲ್ಲಿ ಬಸವಣ್ಣನವರು ಹೇಳಿದ ವಚನಗಳಿಂದ ಮತ್ತು ಸಂತ–ಶರಣರ ನುಡಿಗಳಿಂದ, ಮುಂದೊಂದು ದಿನ ಖಂಡಿತವಾಗಿಯೂ ಜನ ಅನುಷ್ಠಾನಗೊಳಿಸಿ ಜೀವನದಲ್ಲಿ ಅಳವಡಿಸಿಕೊಂಡು ಬದುಕುವ **"ಸತ್ಯಯುಗ"** ಬಂದೇ ಬರುತ್ತದೆ. ಬಹಳ ವರ್ಷಗಳೇ ಬೇಕಾಗಬಹುದು. ಬಹಳ ವರ್ಷಗಳು ಏಕೆ ಬೇಕಾಗುತ್ತವೆ ? ಎಂದರೆ ವಿಜ್ಞಾನದಿಂದ ಒಳ್ಳೆಯದು ಎಷ್ಟು ಆಗುತ್ತಿದೆಯೋ ಹಾಗೆಯೇ ಕೆಟ್ಟದ್ದನ್ನೂ ಕಲಿಯುತ್ತಿದ್ದಾರೆ. ವಿಜ್ಞಾನದಿಂದ ಆಗುವ ಒಳ್ಳೆಯದರ ಜೊತೆಗೆ, ಸಂತ–ಶರಣರ ಸರಳತೆಯನ್ನು ಬೆರಸಿ ಜೀವನ ಸಾಗಿಸುವುದರಿಂದ ನೆಮ್ಮದಿಯ ಬದುಕು ನಡೆಸಲು ಸಾಧ್ಯ.

ವಿಜಯಪುರ ***ಸುರೇಶಬಾಬು ಶಿ. ಬಾದರಬಂಡಿ***

## ಕ್ಷ - ಕಿರಣ

- ಸಾನ್ವಿ ಪಿ.




### ಮಲ್ಯ ಪಲಾಯನ






# ಜೆ.ಎನ್.ಯು. ವಿದ್ಯಾರ್ಥಿಗಳ ಹೋರಾಟ

## ಸರ್ಕಾರದಿಂದ ಐ.ಪಿ.ಸಿ. ಕಲಂ ೧೨೪-ಎ ದುರ್ಬಳಕೆ

**ಕೇ**ವಲ ಕೆಲವು ತಿಂಗಳ ಹಿಂದೆ ಕನ್ಹಯ್ಯ ಕುಮಾರ್‌ನ ಹೆಸರು ಕೇಳಿದ್ದ ಜನರು ಬಹಳ ಕಡಿಮೆ. ಈಗ ದೇಶದಾದ್ಯಂತ ಈತ ಚಿರಪರಿಚಿತ. ಎಲ್ಲೆಲ್ಲೂ ಇವನ ಹೆಸರೇ ಮತ್ತು ಈತನ ಮಾತೇ. ಕೆಲವರು ಕನ್ಹಯ್ಯ ದೇಶದ್ರೋಹಿ ಎಂದು ಜರೆದು ಇವನ ನಾಮಸ್ಮರಣೆ ಮಾಡುತ್ತಿದ್ದರೆ, ಬಹುಪಾಲು ಜನ ತಮ್ಮ ಅಂತರಾಳದಲ್ಲಿ ಅಂಜಿ ಅಡಗಿದ್ದ ವಿಚಾರಗಳನ್ನು ಬಡಿದೆಬ್ಬಿಸಿ ದನಿಕೊಟ್ಟ ಪ್ರಚಂಡನೆಂದು ಅಭಿಮಾನದಿಂದ ಶ್ಲಾಘಿಸುತ್ತಿದ್ದಾರೆ. ಹೈದರಾಬಾದ್‌ನ ಕೇಂದ್ರೀಯ ವಿಶ್ವವಿದ್ಯಾಲಯದ ಸಂಶೋಧನಾ ವಿದ್ಯಾರ್ಥಿ ರೋಹಿತ್ ವೇಮುಲ ವ್ಯವಸ್ಥೆಯ ವ್ಯವಸ್ಥಿತ ಕ್ರೌರ್ಯಕ್ಕೆ ಬಲಿಯಾದ ಹಿನ್ನೆಲೆಯಲ್ಲೇ ಜವಹರಲಾಲ್ ವಿಶ್ವವಿದ್ಯಾಲಯದ ಆವರಣದಲ್ಲಿ ನಡೆದ ಒಂದು ಘಟನೆ ಕಾಡ್ಗಿಚ್ಚಿನಂತೆ ದೇಶವ್ಯಾಪಿ ಹಬ್ಬಿ, ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಪ್ರತಿಭಟನೆಗಳಿಗೆ ಕಾರಣವಾದದ್ದು ಇತಿಹಾಸ ಬರೆಯಲಿರುವ ಹೊಸ ಅಧ್ಯಾಯದ ಆರಂಭವೇ ಎಂಬುದನ್ನು ಕಾದು ನೋಡಬೇಕು. ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್, ಐ.ಐ.ಟಿ., ಚೆನ್ನೈ, ಹೈದರಾಬಾದ್ ಕೇಂದ್ರ ವಿಶ್ವವಿದ್ಯಾಲಯ, ಜೆ.ಎನ್.ಯು.ನ ವಿದ್ಯಾರ್ಥಿಗಳ ಹೋರಾಟಗಳು ಸೈದ್ಧಾಂತಿಕ ಹೋರಾಟಗಳು ಮಾತ್ರವಲ್ಲ, ಅವು ದೇಶದ ಸಾಮಾಜಿಕ ಮತ್ತು ರಾಜಕೀಯ ಮಂಥನಕ್ಕೆ ನಾಂದಿಯಾಗಿವೆ ಎಂದರೆ ಅತಿಶಯೋಕ್ತಿಯಾಗಲಾರದು.

**ಸ್ವಾತಂತ್ರ್ಯದ ಕೂಗು**

ಕನ್ಹಯ್ಯ ಕುಮಾರ್ ಮತ್ತು ಜೆ.ಎನ್.ಯು.ನ ವಿದ್ಯಾರ್ಥಿ ಸಮೂಹದ ಒಕ್ಕೊರಲಿನ ಕೂಗು; ಸ್ವಾತಂತ್ರ್ಯ – ಬಡತನ – ಹಸಿವಿನಿಂದ ಸ್ವಾತಂತ್ರ್ಯ, ಅಸಮಾನತೆಯಿಂದ ಸ್ವಾತಂತ್ರ್ಯ, ಮನುವಾದದಿಂದ ಸ್ವಾತಂತ್ರ್ಯ, ಭ್ರಷ್ಟಾಚಾರದಿಂದ ಸ್ವಾತಂತ್ರ್ಯ, ಜೀವಿಸುವ ಸ್ವಾತಂತ್ರ್ಯ – ಇವೆಲ್ಲ ನಮ್ಮ ಸಂವಿಧಾನದಲ್ಲಿರುವ ಮೂಲಭೂತ ಹಕ್ಕುಗಳೇ. ಹಾಗಾಗಿ ಈ ಘೋಷಣೆಗಳನ್ನು ಅಸಾಂವಿಧಾನಿಕವೆಂದಾಗಲೀ, ರಾಜದ್ರೋಹ

ಮೋದಿ ಸರ್ಕಾರ ಬಲಪಂಥೀಯ ಸರ್ಕಾರ. ತೀವ್ರ ಹತಾಶೆಗೆ ಸಿಲುಕಿರುವ ಸರ್ಕಾರ. ಇಂತಹ ಸರ್ಕಾರ ತೀವ್ರ ದಮನಕಾರಿ ಯಾಗುತ್ತವೆ ಎಂಬುದು ಚರಿತ್ರೆಯ ಪಾಠ. ತಮ್ಮ ಪ್ರಭುತ್ವವನ್ನು ರಕ್ಷಿಸಿಕೊಳ್ಳಲು ಇದಕ್ಕೆ ಇದೊಂದೇ ಮಾರ್ಗ. ಕಾನೂನು ಗಳನ್ನು ದುರುಪಯೋಗಮಾಡಿಕೊಳ್ಳುವುದೂ ದಮನಕಾರಿ ಆಳ್ವಿಕೆಯ ಪ್ರವೃತ್ತಿ. ಇಂದಿರಾ ಗಾಂಧಿ ಹೇರಿದ ತುರ್ತುಪರಿಸ್ಥಿತಿ ಇದಕ್ಕೊಂದು ಉದಾಹರಣೆ. ಜೆ.ಎನ್.ಯು.ನಲ್ಲಿ ಇಂದು ನಡೆಯುತ್ತಿರುವುದು ಅಂಥದೇ ಮತ್ತೊಂದು ಪ್ರಯೋಗ. ಕನ್ಹಯ್ಯ ಕುಮಾರ್‌ನ ಮೇಲೆ ಹೊರಿಸಿರುವ ರಾಜದ್ರೋಹದ ಆಪಾದನೆ ಎಷ್ಟೇ ಟೊಳ್ಳಾಗಿದ್ದರೂ, ಅದರ ಭಯಾನಕ ಪರಿಣಾಮ ಸಾಮಾನ್ಯ ಜನರ ಮೇಲೆ ಬೀರಿ ಅವರನ್ನು ಭಯಭೀತರನ್ನಾಗಿಸಿ ಅವರನ್ನು ಹದ್ದುಬಸ್ತಿನಲ್ಲಿಡುವುದೇ ಮೋದಿ ಸರ್ಕಾರದ ಸಂಘಪರಿವಾರ ಪ್ರೇರಿತ ಗುರಿ.

**ಮುರಳಿಧರ ಚಿಕ್ಕಮಗಳೂರು**



ಎಂದಾಗಲೀ ಪರಿಗಣಿಸುವಂತಿಲ್ಲ. ಇನ್ನು ಅಫ್ಜಲ್ ಗುರುವಿನ ಮರಣದಂಡನೆಯ ಬಗ್ಗೆ ವಿಮರ್ಶಿಸುವುದಾದಲ್ಲಿ, ಈ ಬಗ್ಗೆ ಭಾರತದ ಸರ್ವೋಚ್ಚ ನ್ಯಾಯಾಲಯದ ನಿರ್ಣಯ ಹಲವಾರು ಕಾನೂನು ತಜ್ಞರನ್ನು ಅಚ್ಚರಿಗೊಳಿಸಿದ್ದು ಹಾಗೂ ಈ ಕುರಿತು ಹತ್ತು ಹಲವು ಅಭಿಪ್ರಾಯಗಳು ವ್ಯಕ್ತವಾದದ್ದು ವಸ್ತುಸತ್ಯ. ಪ್ರಕರಣ ನಡೆದುಬಂದ ರೀತಿ ನ್ಯಾಯಾಲಯಗಳ ತೀರ್ಪುಗಳು ಮತ್ತು ಅಫ್ಜಲ್ ಗುರುವನ್ನು ಗಲ್ಲಿಗೇರಿಸಿದ ರೀತಿ ಈ ಹಿಂದೆ ಸಾಕಷ್ಟು ಚರ್ಚೆ ಮತ್ತು ಟೀಕೆಗಳಿಗೆ ಒಳಗಾಗಿದೆ. ಮುಂದೆಯೂ ನಿರಂತರ ಚರ್ಚೆ ಮತ್ತು ಟೀಕೆಗಳಿಗೆ ಒಳಗಾಗುವುದು ಸಹಜ. ಅಂಥ ಚರ್ಚೆ ಸಂವಿಧಾನದ ಮೂಲಭೂತ ಹಕ್ಕು ಅನುಚ್ಛೇದ ೧೯(೧)(ಎ) ವಾಕ್ ಸ್ವಾತಂತ್ರ್ಯದ ಗಡಿಯನ್ನೇನೂ ಮೀರುವುದಿಲ್ಲ. ಸರ್ವೋಚ್ಚ ನ್ಯಾಯಾಲಯದ ಹಲವಾರು ತೀರ್ಪುಗಳು ಸಾರ್ವಜನಿಕ ಚರ್ಚೆ ಮತ್ತು ಟೀಕೆಗೆ ಒಳಗಾಗಿವೆ. ರಚನಾತ್ಮಕ ಟೀಕೆಯನ್ನು ನ್ಯಾಯನಿಂದನೆಯೆಂದು ಪರಿಗಣಿಸಲಾಗುವುದಿಲ್ಲ. ಆದಕಾರಣ, ಜೆ.ಎನ್.ಯು.ನಲ್ಲಿ ಫೆಬ್ರವರಿ ೯ ರಂದು ನಡೆದ ವಿದ್ಯಾರ್ಥಿಕೂಟದಲ್ಲಿ ಅಫ್ಜಲ್ ಗುರುವಿನ ಬಗ್ಗೆ ನಡೆಯಿತೆನ್ನಲಾದ ಚರ್ಚೆಯೂ ಕೂಡ ಅಭಿವ್ಯಕ್ತಿ ಸ್ವಾತಂತ್ರ್ಯದ ಮಿತಿ ಮೀರಿದ್ದೆಂದಾಗಲಿ ಅಥವಾ ನ್ಯಾಯಾಂಗ ನಿಂದನೆಯೆಂದಾಗಲಿ ಪರಿಗಣಿಸ ಲಾಗುವುದಿಲ್ಲ. ಮೋದಿ ಸರ್ಕಾರಕ್ಕಂತೂ ಈ ಬಗ್ಗೆ ಮಾತನಾಡಲು ಯಾವ ನೈತಿಕ ಹಕ್ಕೂ ಇಲ್ಲ. ಕಾರಣ ಅಫ್ಜಲ್ ಗುರು ಹುತಾತ್ಮನೆಂದು ಕರೆದ ಮುಫ್ತಿ ಮುಹಮದ್ ಸಯೀದ್ ಅವರ ಪೀಪಲ್ಸ್ ಡೆಮಾಕ್ರಟಿಕ್ ಪಕ್ಷದ ಜೊತೆಗೂಡಿ ಭಾರತೀಯ ಜನತಾ ಪಕ್ಷ ಜಮ್ಮು-ಕಾಶ್ಮೀರದಲ್ಲಿ ಸರ್ಕಾರ ನಡೆಸಿದೆ. ಇನ್ನು ಭಾರತ ತುಂಡು-ತುಂಡಾಗುವುದೆಂಬ ಘೋಷಣೆ ಮತ್ತು 'ಪಾಕಿಸ್ತಾನ ಜಿಂದಾಬಾದ್' ಎಂಬ ಘೋಷಣೆ ಕೂಗಿದ್ದರೆ, ಕೂಗಿದ್ದು ಯಾರೆಂದು ಯಾರಿಗೂ ಗೊತ್ತಿಲ್ಲ. ಆದರೆ ಸ್ಪಷ್ಟವಾಗಿ ಹೊರಬಂದಿರುವ ಸತ್ಯ ಸಂಗತಿಯೆಂದರೆ ಕನ್ಹಯ್ಯ ಕುಮಾರ್ ಅಂತಹ ಘೋಷಣೆ ಕೂಗಿಲ್ಲ ಎಂಬುದು. ಕೆಲವು ದೃಶ್ಯ ಮಾಧ್ಯಮಗಳು ಮಿಥ್ಯೆಯನ್ನೇ ಸತ್ಯ ಎಂದು ತಿರುಚಿ ಪ್ರಚಾರ ಮಾಡಿ ಪತ್ರಿಕಾ ಸ್ವಾತಂತ್ರ್ಯವನ್ನು ದುರ್ಬಳಕೆ ಮಾಡಿಕೊಂಡದ್ದು ಖಂಡನೀಯ.

**ರಾಜದ್ರೋಹದ ಆರೋಪ-ಉದ್ದೇಶ**

ಕಾನೂನಿನ ಚೌಕಟ್ಟಿನಲ್ಲಿ ನೋಡುವುದಾದಲ್ಲಿ ಕನ್ಹಯ್ಯ ಕುಮಾರ್ ಮತ್ತು ಇತರೆ ಜೆ.ಎನ್.ಯು. ವಿದ್ಯಾರ್ಥಿಗಳ ಮೇಲೆ ಯಾವುದೇ ಆಪಾದನೆಯನ್ನು ಹೊರಿಸಲು ಆಧಾರವಿಲ್ಲದಿದ್ದರೂ ದೆಹಲಿಯ ಪೊಲೀಸ್ ಪಡೆ ಜೆ.ಎನ್.ಯು. ಆವರಣಕ್ಕೆ ನುಗ್ಗಿ ಕನ್ಹಯ್ಯ ಕುಮಾರ್‌ನನ್ನು ಭಾರತ ದಂಡಸಂಹಿತೆ ೧೨೪-ಎ- ರಾಜದ್ರೋಹದ ಆಪಾದನೆಯ ಮೇಲೆ ಬಂಧಿಸಿದ್ದೇಕೆ ಎಂಬುದು ಪ್ರಜ್ಞಾವಂತರು ವಿಮರ್ಶಿಸಬೇಕಾದ ವಿಚಾರ.

**ಜನ-ಮನಗಳ ವಿಭಜನೆ**

೨೦೧೪ರ ಲೋಕಸಭಾ ಚುನಾವಣೆಯಲ್ಲಿ ಜನತೆಗೆ ನರೇಂದ್ರ ಮೋದಿಯವರು ಕೊಟ್ಟ ಸುಳ್ಳು ಆಶ್ವಾಸನೆಗಳೆಷ್ಟೋ, ಪೊಳ್ಳು ಭರವಸೆಗಳೆಷ್ಟೋ! ಅದರ ಬಗ್ಗೆ ಅವರಿಗೇನೂ ಪರಿವೆಯಿಲ್ಲ. ಏಕೆಂದರೆ ಅವರು ತಮ್ಮ ಪೂರ್ವಾಶ್ರಮದಲ್ಲಿ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಪ್ರಚಾರಕರು. ಭ್ರಮೆ ಸೃಷ್ಟಿಸುವುದು ಮತ್ತು

**ಅಭಿನಂದನೆ.....**

ಚಿತ್ರದುರ್ಗದ ಮುರುಘಾ ಮಠದವರು ಕೊಡಮಾಡುವ ಶೂನ್ಯಪೀಠ 'ಅಲ್ಲಮ' ಪ್ರಶಸ್ತಿಯು ೨೦೧೫ರ ಸಾಲಿನಲ್ಲಿ ನವಕರ್ನಾಟಕ ಬಳಗದವರಲ್ಲೊಬ್ಬರಾದ ನಮಗೆಲ್ಲರಿಗೂ ಆತ್ಮೀಯರಾಗಿರುವ ಶ್ರೀ ಬರಗೂರು ರಾಮಚಂದ್ರಪ್ಪ ಅವರಿಗೆ ದೊರಕಿರುವುದು ಸಂತಸದ ಸಂಗತಿ. ಬರಗೂರರಿಗೆ 'ಹೊಸತು' ಹಾಗೂ 'ನವಕರ್ನಾಟಕ'ದ ಅಭಿನಂದನೆಗಳು.

ಸುಳ್ಳುಗಳ ವಿಷಬೀಜ ಬಿತ್ತುವುದು ಈ ಸಂಘದ ದಿನನಿತ್ಯದ ಕಾಯಕ. ಈ ಕಾಯಕದಲ್ಲಿ ಮೋದಿ ಮಹಾನ್ ಪಂಡಿತರು. ಆದಕಾರಣ ಮೋದಿ ಅಧಿಕಾರಕ್ಕೇರಿದರೆ ಆಗುವ ಜನ-ಮನಗಳ ವಿಭಜನೆಯನ್ನು ಆತಂಕದಿಂದ ನಿರೀಕ್ಷಿಸಿದ್ದ ಜನ-ಮನಗಳೆಷ್ಟೋ. ಅಧಿಕಾರಕ್ಕೇರುವುದು ಸುಲಭ. ಆದರೆ ಬಹುಮುಖೀ ಸಂಸ್ಕೃತಿಯ ಈ ದೇಶದ ಆಡಳಿತವನ್ನು ನಡೆಸುವುದು ಏಕಮುಖೀ ಸಂಸ್ಕೃತಿಯ ವಕ್ತಾರ ನರೇಂದ್ರ ಮೋದಿಗೆ ಬಹಳ ಕಷ್ಟ. ಶೇಕಡ ೬೯% ಜನ ಅವರ ಪರ ಮತ ಚಲಾಯಿಸಿಲ್ಲ ಎಂಬುದು ಬಹುಮುಖ್ಯ ಅಂಶ. ಆದರೂ ಕೂಡ ನರೇಂದ್ರ ಮೋದಿಯ ಜಯಕ್ಕೆ ತಾವೇ ರೂವಾರಿಗಳೆಂದೂ, ಈ ದೇಶವನ್ನೇ ಕೊಂಡುಕೊಂಡಂತೆ ಭಾವಿಸಿಬಿಟ್ಟಿದ್ದಾರೆ ಸಂಘಪರಿವಾರದ ಜನರು. ಇದೇ ಅವರ ದುರಂತ ಕೂಡ.

**ಹತಾಶೆ ತಂದ - ದೆಹಲಿ ಮತ್ತು ಬಿಹಾರ್ ಚುನಾವಣೆ**

ನರೇಂದ್ರ ಮೋದಿಯ 'ಅಭಿವೃದ್ಧಿ'ಯ ಮಂತ್ರ ಮತ್ತು ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಅಭಿವೃದ್ಧಿಯ ಗುರಿ ಒಂದೇ. ಅದೆಂದರೆ ಬಹುಮುಖೀ ಸಂಸ್ಕೃತಿಯ ನಾಶ ಮತ್ತು ಹಿಂದೂ ರಾಷ್ಟ್ರದ ಸ್ಥಾಪನೆ. ಗೋಮಾಂಸ ವಿವಾದ, ಘರ್ ವಾಪ್ಸಿ ಕಾರ್ಯಕ್ರಮ, ಚರ್ಚ್‌ಗಳ ಮೇಲೆ ದಾಳಿ, ನರೇಂದ್ರ ದಾಭೋಲ್ಕರ್, ಗೋವಿಂದ ಪಾನ್ಸರೆ, ಎಂ. ಎಂ. ಕಲ್ಬುರ್ಗಿಯವರ ಹತ್ಯೆ, ಪ್ರಗತಿಪರ ಚಿಂತಕರ ಮೇಲಿನ ದಾಳಿ ಈ ನಿಟ್ಟಿನಲ್ಲಿ ಸಂಘಪರಿವಾರದವರು ನಡೆಸಿರುವ ಕುಕೃತ್ಯಗಳು. ನರೇಂದ್ರ ಮೋದಿಯವರ ನೇತೃತ್ವದಲ್ಲಿ ತಮ್ಮ ದಾರಿ ಸುಗಮವೆಂದು ತಿಳಿದ ಸಂಘಪರಿವಾರದವರಿಗೆ ದೆಹಲಿ ಮತ್ತು ಬಿಹಾರದ ಮತದಾರರು ನೀಡಿದ ತೀರ್ಪು ಭಾರತೀಯ ಜನತಾ ಪಕ್ಷಕ್ಕೆ ಮತ್ತು ರಾಷ್ಟ್ರೀಯ ಸ್ವಯಂ ಸೇವಕರಿಗೆ ಗದಾ ಪ್ರಹಾರದಂತಾಗಿ ತತ್ತರಿಸುವಂತೆ ಮಾಡಿದೆ. ಅದು ಅವರನ್ನು ಹತಾಶೆಯ ಕೂಪಕ್ಕೆ ತಳ್ಳಿಬಿಟ್ಟಿದೆ.

**ಮುಗ್ಗರಿಸಿದ ಆರ್ಥಿಕ ನೀತಿ**

ಆರ್ಥಿಕ ಕ್ಷೇತ್ರದಲ್ಲೂ ಕೂಡ ಮೋದಿ ಸರ್ಕಾರದ ರೀತಿ-ನೀತಿಗಳು ಗೊಂದಲಮಯವಾಗಿವೆ ಎಂಬುದು ಅನೇಕ ಆರ್ಥಿಕ ತಜ್ಞರ ಅಭಿಪ್ರಾಯ. ಕಳೆದ ಎರಡು ವರ್ಷಗಳ ಅವಧಿಯಲ್ಲಿ ಜರುಗಿರುವ ಘಟನೆಗಳು ಮೋದಿ ಸರ್ಕಾರ ಶ್ರೀಮಂತರ ಪರ, ಬಡವರ ವಿರೋಧಿ ಸರ್ಕಾರ ಎಂಬುದನ್ನು ಸಾಕಷ್ಟು ಪುರಾವೆಗಳೊಂದಿಗೆ ಸಾಬೀತುಪಡಿಸಿವೆ. ವಿದೇಶಿ ನೇರ ಬಂಡವಾಳಕ್ಕೆ ದೇಶ-ದೇಶ ಸುತ್ತಿ ಕೈಚಾಚಿ, ಅಂಗಲಾಚಿದರೂ ಬಂಡವಾಳವೇನೂ ಉಕ್ಕಿ ಹರಿದು ಬಂದಿಲ್ಲ. ಹಾಗಾಗಿ 'ಮೇಕ್ ಇನ್ ಇಂಡಿಯ' ಕೈ ಕೊಟ್ಟಿದೆ. ಉತ್ಪಾದನೆ ಕುಂಠಿತಗೊಂಡಿದೆ. ರಫ್ತು ಇಳಿಮುಖವಾಗಿದೆ. ಸರ್ಕಾರ ಕಂಗಾಲಾಗಿದೆ. ಜನರಲ್ಲಿ ಹತಾಶೆ ಎದ್ದು ಕಾಣುತ್ತಿದೆ. ಕಾಂಗ್ರೆಸ್ ಮುಕ್ತ ಭಾರತವನ್ನು ಸೃಷ್ಟಿಸುವೆನೆಂದು ಹೇಳಿದ್ದ ಮೋದಿಗೆ ಕಾಂಗ್ರೆಸ್ ಪಕ್ಷ ರಾಜ್ಯಸಭೆಯಲ್ಲಿ ದೊಡ್ಡ ಅಡ್ಡಗೋಡೆಯಾಗಿಬಿಟ್ಟಿದೆ. ಅನೇಕ ವಿಷಯಗಳ ಕುರಿತಂತೆ ವಿರೋಧ ಪಕ್ಷಗಳು ಒಂದುಗೂಡಿವೆ. ವಿಶ್ವವಿದ್ಯಾಲಯಗಳನ್ನು ಕೇಸರೀಕರಣಗೊಳಿಸುವ ಸಂಘಪರಿವಾರದವರ ಪ್ರಯತ್ನಕ್ಕೆ ಹುಟ್ಟಿರುವ





ಕಡು–ವಿರೋಧ, ಆರ್ಥಿಕ ನೀತಿಯ ವೈಫಲ್ಯ, ರಾಜ್ಯಸಭೆ ದಾಟಲಾರದ ಸರ್ಕಾರದ ಮಸೂದೆಗಳು ಮೋದಿ ಸರ್ಕಾರದ ಹತಾಶೆಯನ್ನು ಪರಾಕಾಷ್ಠೆಗೇರಿಸಿದೆ.

**ಕಾನೂನುಗಳ ದುರ್ಬಳಕೆ**

ಮೋದಿ ಸರ್ಕಾರ ಬಲಪಂಥೀಯ ಸರ್ಕಾರ. ತೀವ್ರ ಹತಾಶೆಗೆ ಸಿಲುಕಿರುವ ಸರ್ಕಾರ. ಇಂತಹ ಸರ್ಕಾರ ತೀವ್ರ ದಮನಕಾರಿಯಾಗುತ್ತವೆ ಎಂಬುದು ಚರಿತ್ರೆಯ ಪಾಠ. ತಮ್ಮ ಪ್ರಭುತ್ವವನ್ನು ರಕ್ಷಿಸಿಕೊಳ್ಳಲು ಇದಕ್ಕೆ ಇದೊಂದೇ ಮಾರ್ಗ. ಕಾನೂನುಗಳನ್ನು ದುರುಪಯೋಗಮಾಡಿಕೊಳ್ಳುವುದೂ ದಮನಕಾರಿ ಆಳ್ವಿಕೆಯ ಪ್ರವೃತ್ತಿ. ಇಂದಿರಾ ಗಾಂಧಿ ಹೇರಿದ ತುರ್ತುಪರಿಸ್ಥಿತಿ ಇದಕ್ಕೊಂದು ಉದಾಹರಣೆ. ಜೆ.ಎನ್.ಯು.ನಲ್ಲಿ ಇಂದು ನಡೆಯುತ್ತಿರುವುದು ಅಂಥದೇ ಮತ್ತೊಂದು ಪ್ರಯೋಗ. ಕನ್ಹಯ್ಯ ಕುಮಾರ್‌ನ ಮೇಲೆ ಹೊರಿಸಿರುವ ರಾಜದ್ರೋಹದ ಆಪಾದನೆ ಎಷ್ಟೇ ಟೊಳ್ಳಾಗಿದ್ದರೂ, ಅದರ ಭಯಾನಕ ಪರಿಣಾಮ ಸಾಮಾನ್ಯ ಜನರ ಮೇಲೆ ಬೀರಿ ಅವರನ್ನು ಭಯಭೀತರನ್ನಾಗಿಸಿ ಅವರನ್ನು ಹದ್ದುಬಸ್ತಿನಲ್ಲಿಡುವುದೇ ಮೋದಿ ಸರ್ಕಾರದ ಸಂಘಪರಿವಾರ ಪ್ರೇರಿತ ಗುರಿ.

**ವಸಾಹತುಶಾಹಿ ಪಳೆಯುಳಿಕೆ**

ಭಾರತ ದಂಡಸಂಹಿತೆ – ೧೮೬೦ರಲ್ಲಿ ಬ್ರಿಟಿಷ್‌ರು ಭಾರತಕ್ಕೆ ಕೊಟ್ಟು ಬಿಟ್ಟುಹೋದ ಪಳೆಯುಳಿಕೆ. ಭಾರತ ಸಂಪೂರ್ಣ ಸ್ವರಾಜ್ಯ, ಪ್ರಜಾತಾಂತ್ರಿಕ ಗಣರಾಜ್ಯವಾಗಿ ಆರು ದಶಕಗಳು ಕಳೆದರೂ ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಸಾಹತು ದೇಶಗಳ ಆಳ್ವಿಕೆಗೆ ಪೂರಕವಾದ ದಂಡಸಂಹಿತೆಯ ಕಲಂಗಳು ಈಗಲೂ ಚಾಲ್ತಿಯಲ್ಲಿವೆ. ಇದು ಪ್ರಜಾತಂತ್ರ ವ್ಯವಸ್ಥೆಯಲ್ಲಿನ ವಿರೋಧಾಭಾಸ. ಅಂತಹ ಒಂದು ಕಲಂ ೧೨೪–ಎ.

**"ಕಲಂ ೧೨೪–ಎ : ರಾಜದ್ರೋಹ :**

ಯಾವ ವ್ಯಕ್ತಿಯೇ ಆಗಲಿ ತಾನು ಆಡುವ ಮಾತುಗಳಿಂದ ಅಥವಾ ಬರೆದ ಶಬ್ದಗಳಿಂದ ಅಥವಾ ಸಂಜ್ಞೆಗ್ಗಳಿಂದ ಅಥವಾ ದೃಶ್ಯ ನಿರೂಪಣೆಯಿಂದ ಭಾರತದಲ್ಲಿ ಕಾನೂನು ರೀತ್ಯಾ ಸ್ಥಾಪನೆಗೊಂಡ ಸರಕಾರದ ವಿರುದ್ಧ ದ್ವೇಷವನ್ನು ಅಥವಾ ತಿರಸ್ಕಾರವನ್ನು ಹುಟ್ಟುಹಾಕಿದರೆ ಅಥವಾ ಹುಟ್ಟುಹಾಕಲು ಪ್ರಯತ್ನಿಸಿದರೆ, ಅವನು ಜೀವಾವಧಿ ಕಾರಾಗೃಹ ವಾಸದ ಶಿಕ್ಷೆಯಿಂದ ದಂಡಿತನಾಗತಕ್ಕದ್ದು ಮತ್ತು ಜುಲ್ಮಾನೆ ವಿಧಿಸತಕ್ಕದ್ದು ಅಥವಾ ಮೂರು ವರ್ಷಗಳ ಕಾರಾಗೃಹ ಶಿಕ್ಷೆಯಿಂದ ದಂಡಿತನಾಗತಕ್ಕದ್ದು ಮತ್ತು ಆ ಶಿಕ್ಷೆಗೆ ಜುಲ್ಮಾನೆಯನ್ನು ವಿಧಿಸಬಹುದು ಅಥವಾ ಜುಲ್ಮಾನೆಗೆ ಒಳಗಾಗತಕ್ಕದ್ದು."

**ವಿವರಣೆ ೧ :** "ಅವಿಶ್ವಾಸ" ಎಂಬ ಪದವು ರಾಜದ್ರೋಹ ಮತ್ತು ಇತರ ಎಲ್ಲ ದ್ವೇಷ ಭಾವನೆಗಳನ್ನು ಒಳಗೊಂಡಿರುತ್ತದೆ.

**ವಿವರಣೆ ೨ :** ಸರಕಾರವು ತಳೆದ ಕ್ರಮಗಳನ್ನು ದ್ವೇಷ, ತಿರಸ್ಕಾರ ಅಥವಾ ಅವಿಶ್ವಾಸಗಳಿಂದ ಉದ್ರೇಕಿಸಿದರೆ ಅಥವಾ ಉದ್ರೇಕಿಸುವ ಪ್ರಯತ್ನ ಮಾಡದೆ ಕಾನೂನು ಸಮ್ಮತ ಕ್ರಮಗಳಿಂದ ಬದಲಾಯಿಸುವಂತೆ ಮಾಡುವ ಉದ್ದೇಶಗಳಿಂದ ಅವುಗಳನ್ನು ಕುರಿತು ಅಸಮ್ಮತಿಯನ್ನು ಸೂಚಿಸುವ ಟೀಕಾ ಪ್ರಹಾರಗಳು ಈ ಕಲಮಿನ ಮೇರೆಗೆ ಅಪರಾಧವೆಂದೆನಿಸಿಕೊಳ್ಳುವುದಿಲ್ಲ.

**ವಿವರಣೆ ೩ :** ದ್ವೇಷ, ತಿರಸ್ಕಾರ ಅಥವಾ ಅವಿಶ್ವಾಸಗಳನ್ನು ಉದ್ರೇಕಿಸಿದರೆ ಅಥವಾ ಉದ್ರೇಕಿಸುವ ಪ್ರಯತ್ನ ಮಾಡದೆ, ಸರಕಾರ ಕೈಗೊಂಡ ಆಡಳಿತ ಕ್ರಮಗಳನ್ನು ಅಥವಾ ಇತರ ಯಾವುದೇ ಕ್ರಮವನ್ನು ಕುರಿತು ಅಸಮ್ಮತಿ ಸೂಚಿಸುವ ಟೀಕಾ ಪ್ರಹಾರಗಳು ಈ ಕಲಮಿನ ಮೇರೆಗೆ ಅಪರಾಧವೆಂದೆನಿಸಿಕೊಳ್ಳುವುದಿಲ್ಲ.




**ರಾಜದ್ರೋಹ – ಬ್ರಿಟಿಷ್ ಸರ್ಕಾರ**

ಭಾರತ ದಂಡ ಸಂಹಿತೆಯ ಮೇಲ್ಕಂಡ ಕಲಮಿನ ಚರಿತ್ರೆಯನ್ನು ಅವಲೋಕಿಸಿದಾಗ ಇದನ್ನು ೧೮೭೦ರಲ್ಲಿ ಸಂಹಿತೆಗೆ ಸೇರಿಸಿದ "ಶ್ರೇಯಸ್ಸು" ಮೆಕಾಲೆಗೆ ಸಲ್ಲುತ್ತದೆ. ಇದು ೧೮೫೭ರಲ್ಲಿ ನಡೆದ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಬೆನ್ನಲ್ಲೇ ಅನೇಕ ಪ್ರಾಂತಗಳಲ್ಲಿ ಹುಟ್ಟಿಕೊಳ್ಳುತ್ತಿದ್ದ ಸ್ವಾತಂತ್ರ್ಯ ಪ್ರೇಮಿ ಹೋರಾಟಗಾರರನ್ನು ಹತ್ತಿಕ್ಕಲು ಬ್ರಿಟಿಷ್ ಸರ್ಕಾರ ದುರ್ಬಳಕೆ ಮಾಡಿಕೊಂಡ ಪ್ರಮುಖ ಕಾನೂನು ರೂಪದ ಆಯುಧ. ಮಹಾತ್ಮ ಗಾಂಧಿ, ಬಾಲಗಂಗಾಧರ ತಿಲಕ್ ಭಾರತ ದಂಡಸಂಹಿತೆಯ ಕಲಂ ೧೨೪–ಎ ನ ದುರ್ಬಳಕೆಗೆ ಒಳಗಾದ ಪ್ರಮುಖರು. ೧೯೪೭ಕ್ಕಿಂತ ಹಿಂದೆ ಸ್ವಾತಂತ್ರ್ಯ ಹೋರಾಟಗಾರರ ವಿರುದ್ಧ ಕಲಂ ೧೨೪–ಎ ದುರ್ಬಳಕೆಯಾಗಿದ್ದರೆ, ಸ್ವಾತಂತ್ರ್ಯಾನಂತರದ ವರ್ಷಗಳಲ್ಲಿ ಹೆಚ್ಚಾಗಿ ಕಮ್ಯುನಿಸ್ಟ್ ಕಾರ್ಯಕರ್ತರು ಇದರ ದುರ್ಬಳಕೆಗೆ ಬಲಿಯಾದವರು.

**ಕಲಂ ೧೨೪–ಎ – ಸರ್ವೋಚ್ಚ ನ್ಯಾಯಾಲಯದ ತೀರ್ಪು**

ಭಾರತದ ಸಂವಿಧಾನ ಜಾರಿಗೊಂಡನಂತರ ಕಲಂ ೧೨೪–ಎ ನ ಸಿಂಧುತ್ವದ ಪ್ರಶ್ನೆ ಸರ್ವೋಚ್ಚ ನ್ಯಾಯಾಲಯದ ಮುಂದೆ ಕೇದಾರನಾಥ್ ಸಿಂಗ್ ವಿರುದ್ಧ ಬಿಹಾರ್ ರಾಜ್ಯ (ಎ.ಐ.ಆರ್. ೧೯೬೨ ಎಸ್.ಸಿ. ೯೫೫) ಪ್ರಕರಣದಲ್ಲಿ ಪ್ರಶ್ನಿತಗೊಂಡಿತ್ತು. ಐದು ನ್ಯಾಯಮೂರ್ತಿಗಳ ನ್ಯಾಯಪೀಠ ಕಲಂ ೧೨೪–ಎ ಸಂವಿಧಾನಾತ್ಮಕವೆಂದು ತೀರ್ಪು ನೀಡಿದರೂ ಆರೋಪಿಯ ಮಾತು ಅಥವಾ ಬರಹ ಅವ್ಯವಸ್ಥೆಯನ್ನಾಗಲೀ ಅಥವಾ ಹಿಂಸೆಯನ್ನಾಗಲೀ ಉಂಟುಮಾಡದಿದ್ದಲ್ಲಿ ಕಲಂ ೧೨೪–ಎ ಅನ್ವಯವಾಗುವುದಿಲ್ಲ ಎಂದು ವ್ಯಾಖ್ಯಾನಿಸಿತು. ಆದರೆ ಪ್ರಶ್ನೆ ಎಂದರೆ ಕಾನೂನು ಅವ್ಯವಸ್ಥೆ ಮತ್ತು ಹಿಂಸೆಯನ್ನು ಅರ್ಥೈಸಿರುವುದು ಕಾರ್ಯಾಂಗ, ಅಂದರೆ ಪೊಲೀಸ್. ಹಾಗಾಗಿ ಕೇದಾರನಾಥ್ ಸಿಂಗ್ ಪ್ರಕರಣದಲ್ಲಿ ಕಲಂ ೧೨೪–ಎ ಬಗ್ಗೆ ಸಮರ್ಪಕ ತೀರ್ಪು ನೀಡಲಿಲ್ಲ ಎಂಬುದು ಹಲವಾರು ಕಾನೂನು ತಜ್ಞರ ಅಭಿಪ್ರಾಯ. ಆದರೆ ಕೇದಾರನಾಥ್ ಸಿಂಗ್ ತೀರ್ಪಿನ ಆಧಾರದಲ್ಲಿ ಇಂದಿರಾ ಗಾಂಧಿಯ ಹತ್ಯೆಯಾದ ದಿನವೇ ಚಂಡೀಘಡದ ನೀಲಂ ಚಿತ್ರಮಂದಿರದ ಮುಂದೆ "ಖಲಿಸ್ತಾನ್ ಜಿಂದಾಬಾದ್" ಎಂದು ತನ್ನ ಮಿತ್ರನೊಡಗೂಡಿ ಘೋಷಣೆ ಕೂಗಿದ ಬಲವಂತ್ ಸಿಂಗ್‌ನ ಪ್ರಕರಣದಲ್ಲಿ ಕಲಂ ೧೨೪–ಎ ನ ಆರೋಪದಿಂದ ಸರ್ವೋಚ್ಚ ನ್ಯಾಯಾಲಯ ಮುಕ್ತಗೊಳಿಸಿತು (ಬಲವಂತ್ ಸಿಂಗ್ ಮತ್ತು ಇನ್ನೊಬ್ಬ – ವಿರುದ್ಧ – ಪಂಜಾಬ್ ರಾಜ್ಯ – ಎ.ಐ.ಆರ್. ೧೯೯೫ ಎಸ್.ಸಿ. ೧೭೮೫).

**ಅಳಿಸಲೇಬೇಕಾದ ಕಾನೂನು**

ಭಾರತ ದಂಡಸಂಹಿತೆಯ ಕಲಂ ೧೨೪–ಎ ಸಂವಿಧಾನದ ಮೂಲಭೂತ ಹಕ್ಕಾದ ವಾಕ್ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ (ಅನುಚ್ಛೇದ ೧೯(೧)(ಎ)ವನ್ನು ಒರೆಗೆ ಹಚ್ಚಿ ನೋಡಬೇಕಾದ ಸಂದರ್ಭ ಮತ್ತೊಮ್ಮೆ ಬಂದಿದೆ. ಸರ್ವೋಚ್ಚ ನ್ಯಾಯಾಲಯ ತನ್ನ ಇತ್ತೀಚಿನ ತೀರ್ಪು ಶ್ರೇಯ ಸಿಂಘಲ್ ವಿರುದ್ಧ – ಯೂನಿಯನ್ ಆಫ್ ಇಂಡಿಯ (೨೦೧೫) ೫ ಎಸ್.ಸಿ.ಸಿ. – ಪುಟ ೧)ನಲ್ಲಿ ಮಾಹಿತಿ ತಂತ್ರಜ್ಞಾನ ಕಾಯಿದೆಯ ಕಲಂ ೬೬–ಎ ಅಸಿಂಧು ಎಂದು ಘೋಷಿಸಿದ್ದು, ಕಲಂ ೧೨೪–ಎ ಕೂಡ ಪುನರ್‌ವಿಮರ್ಶೆಗೊಳಪಡಬೇಕಾದ ಸನ್ನಿವೇಶವನ್ನು ಸೃಷ್ಟಿಸಿದೆ. ಶಾಸನಗಳು ಕರಾಳ ವಾಗದಂತೆ, ಮೂಲಭೂತ ಹಕ್ಕುಗಳಿಗೆ ಚ್ಯುತಿಬಾರದಂತೆ ನೋಡಿಕೊಳ್ಳಬೇಕಾದ್ದು ಸರ್ವೋಚ್ಚ ನ್ಯಾಯಾಲಯದ ಸರ್ವೋಚ್ಚ ಜವಾಬ್ದಾರಿ. ನಾಗರಿಕ ಸಮಾಜದ ಸೃಷ್ಟಿಯತ್ತ ಜನಾಭಿಪ್ರಾಯ ಬೆಳೆಯಬೇಕಾಗಿದೆ. ಕನ್ಹಯ್ಯ ಕುಮಾರ್‌ನ ಘಟನೆ ನಮ್ಮನ್ನು ಈ ದಿಕ್ಕಿನತ್ತ ಸೆಳೆದಿದೆ. ಕಲಂ ೧೨೪–ಎ ಭಾರತ ದಂಡಸಂಹಿತೆಯಿಂದ ಅಳಿಸಲ್ಪಟ್ಟಲ್ಲಿ ಅದು ಜೆ.ಎನ್.ಯು.ನ ಪ್ರಜ್ಞಾವಂತ ವಿದ್ಯಾರ್ಥಿ ಸಮೂಹದ ಹೋರಾಟದ ಫಲವೆಂದೇ ಪರಿಗಣಿಸಬಹುದು.

**ಮುರಳಿಧರ ಚಿಕ್ಕಮಗಳೂರು**
ವಕೀಲರು, ನಂ. ೩, ೨ನೇ ಮಹಡಿ, ಡೈಯಾಗನಲ್ ರಸ್ತೆ
ವಿ. ವಿ. ಪುರಂ, ಬೆಂಗಳೂರು – ೫೬೦ ೦೦೪

# ಬೆಳಕು






ಅವನು ಇಣುಕಿದಷ್ಟೂ ಆಳ ಅವಳ ಕಣ್ಣುಗಳು. ಜನಜಂಗುಳಿ, ರೈಲುಗಳ ಕಿವಿಗಡಚಿಕ್ಕುವ ಸದ್ದು. ಜನರ ಚೀರಾಟ ಕೂಗಾಟ. ಎಲ್ಲದರ ಮಧ್ಯೆಯೂ ಅವನು ಶಾಂತವಾಗಿ ಅವಳ ಕಣ್ಣಿನೊಳಕ್ಕೆ ಇಳಿಯುತ್ತಲೇ ಇದ್ದಾನೆ. ಅವಳೋ ಆಗೊಮ್ಮೆ ಈಗೊಮ್ಮೆ ರೆಪ್ಪೆ ಬಡಿದು ನಿರ್ಲಿಪ್ತವಾಗಿ ಕುಳಿತಿದ್ದಾಳೆ. 'ಫಟಾರ್' ಸದ್ದು. ಯಾರೋ ಪ್ಯಾಸೆಂಜರ್ ಓಡುವ ರಭಸಕ್ಕೆ ಅವಳ ಪಾತ್ರೆ ಮತ್ತು ಕೋಲನ್ನು ಒದ್ದುಬಿಟ್ಟರು. ತಟ್ಟೆ ಅಷ್ಟು ದೂರ ಹೋಗಿ ಬಿದ್ದಿತ್ತು. ಅವಳು ಕೈಯಾಡಿಸುವಷ್ಟರಲ್ಲಿ ಅವನು ಎದ್ದು ತಟ್ಟೆ ಅವಳ ಕೈಯಲ್ಲಿಟ್ಟು ಕೋಲು ಮುಂದಿಟ್ಟ. ಯಥಾ ರೀತಿ ಅವಳ ಕೃತಜ್ಞತೆಯ ಭಾವ. ಅವನು ಕೇಳಿದ 'ಕಣ್ಣು ಎಷ್ಟೂ ಕಾಣೋದಿಲ್ಲೇನು ?' ಈಗ ಅವಳ ಹಣೆ ಮೇಲೆ ನಿರಿಗೆ. ಅವನ ಧ್ವನಿಯಲ್ಲಿ ವ್ಯಂಗ್ಯವಿಲ್ಲ, ಕಕುಲಾತಿ ಇದೆ ಎಂದು ತಿಳಿಯಲು ಅವಳಿಗೆ ಒಂದೇ ಕ್ಷಣ ಸಾಕಾಯಿತು. ಮತ್ತೆ ನಿರಾಳ ಮುಖ. "ಇಲ್ಲಾ ನಾನು ಪೂರಾ ಕುರುಡಿ" ಅವಳ ಧ್ವನಿಗೆ ಅವನದೊಂದು ದೀರ್ಘ ನಿಟ್ಟುಸಿರು. ಆ ಉಸಿರು ಅವಳಿಗೆ ತಾಕಿತೇನೋ, ಚಕಿತ ಗೊಂಡಳು. ಇಡೀ ಬದುಕಿನಲ್ಲಿ ಇಂಥ ಆಪ್ಯಾಯಮಾನವಾದ ನಿಟ್ಟುಸಿರನ್ನು ಆಕೆ ಅನುಭವಿಸಿರಲಿಲ್ಲ. ಅವನ ಉಸಿರಿನ ಜಾಡನ್ನೇ ಹಿಡಿದು ಅವನೆಡೆಗೆ ಮುಖ ತಿರುವಿದಳು. ಅದು ಅವಳ ಪ್ರಶ್ನೆಯಾಗಿತ್ತು. ಅವ ನಿಧಾನಕ್ಕೆ ಅವಳ ಕೈ ಹಿಡಿದ. ಅವಳೂ ಕೈ ಹಿಂತೆಗೆಯಲಿಲ್ಲ. ದಿನನಿತ್ಯ ಕತ್ತಲಾದರೆ ಸಾಕು, ರೈಲು ನಿಲ್ದಾಣದ ಪ್ಲಾಟ್‌ಫಾರಂನಲ್ಲಿ ಪೊಲೀಸರು, ಹಮಾಲರು ಅವಳ ಕೈ, ಮುಖ, ದೇಹದ ಯಾವ ಭಾಗದಲ್ಲೂ ಸಂವೇದನೆ ಉಳಿಯದಂತೆ ತಿಕ್ಕುತ್ತಿದ್ದರು. ಅವರು ಕತ್ತಲಲ್ಲಿ ಬೀದಿ ನಾಯಿಯ ಥರ ಒದ್ದಾಡುತ್ತಿದ್ದರೆ ಅವಳೂ ಕತ್ತಲೊಳಗಿನ ಕತ್ತಲೆಯಷ್ಟೇ ನಿರ್ವಿಕಾರವಾಗಿರುತ್ತಿದ್ದಳು. ಆದರೆ ಇವತ್ತು ಅವನು ಹಿಡಿದ ಕೈ ಹಾಗಿರಲಿಲ್ಲ. ಕೈ ಹಿಂದಕ್ಕೆ ತೆಗೆಯಬೇಕೆನಿಸುತ್ತಿಲ್ಲ. ಪ್ರತಿಯಾಗಿ ಅವನು ಕೈ ಬಿಟ್ಟಾನು ಎಂಬ ಆತಂಕ. ಮೊಟ್ಟ ಮೊದಲಬಾರಿಗೆ ಅವಳ ಮೈ ನಡುಗಿತು. ಕೈಯನ್ನು ಇನ್ನೂ ಬಿಗಿಮಾಡಿ ಅವನು ಹೇಳಿದ 'ನಾನು ಕುಂಟ ಒಂದೇ ಕಾಲು'. ಅವನ ಧ್ವನಿಯ ಮೂಲಕವೇ ಅವನ ಹೃದಯ ಬಡಿತ ಗುರುತಿಸಿದಳು. ಅವಳಿಗರಿಯದೆ ಅವಳ ಕೈಗಳು ಅವನ ಕೈಯನ್ನು ಬಿಗಿ ಹಿಡಿದಿದ್ದವು.

ಆತ್ಮವನ್ನೂ ತಂಪು ಮಾಡುವಂತ ಸುಳಿಗಾಳಿ, ಪಕ್ಕದಲ್ಲಿ ಆತ. ಸ್ಪರ್ಶ ಒಂದೇ ಸಾಕು ತಮ್ಮ ಸ್ನೇಹ ಪರಿಪೂರ್ಣವೆಂಬ ನಿರ್ಧಾರಕ್ಕೆ ಬರಲು. ಈಗ ಅವರಿಗೆ ಬದುಕು ಎನ್ನುವದು ಬರೀ ಹಸಿವಲ್ಲ, ಬದುಕಿನ ಗುರಿ ಎಂಬುದು ತುತ್ತು ಅನ್ನವಷ್ಟೇ ಅಲ್ಲ ಅನ್ನಿಸತೊಡಗಿತು. ಆತ ಕೇಳಿದ 'ಇಲ್ಲಿ ಬ್ಯಾಡ ದೂರ ಹೋಗೂನು.' ತಕ್ಷಣ ಅವಳಿಗೆ ಕತ್ತಲೆಯಲ್ಲಿ ನುಗ್ಗುವ ಬೀದಿನಾಯಿಗಳಂಥವರ ನೆನಪಾಗಿ 'ಹೌದು ಇವತ್ತೇ ಹೋಗೂನು' ಅಂದಳು. ಎಲ್ಲಿಗೆ ಗೊತ್ತಿಲ್ಲ. ಎಲ್ಲಿಗೆ ಹೋದರೇನು ದೂರ ಹೋದಷ್ಟೂ ಸ್ವತಂತ್ರರೇ. ನಿರ್ಧಾರವಾಯ್ತು. ಎಷ್ಟೋ ಸಲ ಅವಳೂ ಯೋಚಿಸಿದ್ದಳು. ಯಾಕೆ ಬದುಕಬೇಕು, ಅದೂ ಇಂಥಾ ಬದುಕು, ಒಮ್ಮೆ ಹಳಿಯ ಮೇಲೆ ಕುಳಿತೇಬಿಟ್ಟಿದ್ದಳು. ಯಾರೋ ಎಳೆದು ಹಾಕಿ ಅವಳ ತೀರ್ಮಾನ ಬುಡಮೇಲು ಮಾಡಿದ್ದರು. ಆದರೆ ಇವತ್ತು ಮೊಟ್ಟ ಮೊದಲ ಬಾರಿಗೆ ಅವಳಿಗೆ ಸಾವು ಎಂಬ ಕಲ್ಪನೆ ಭಯ ಮೂಡಿಸಿತು. ಇಲ್ಲಿಂದ ಎಷ್ಟು ಸಾಧ್ಯವೋ ಅಷ್ಟು ದೂರ ಹೋಗಬೇಕೆನ್ನಿಸಿತು. ಅಲ್ಲೇನಿದೆ. ಅವಳಿಗೆ ಗೊತ್ತಿಲ್ಲ. ಆದರೆ ಜೊತೆಗೆ ಅವನಿರುತ್ತಾನೆ ಎಂಬ ಕಲ್ಪನೆ ಅವಳ ತುಟಿಯ ಮೇಲೊಂದು ನೆಮ್ಮದಿಯ ನಗೆ ಮೂಡಿಸಿತು. ಆ ನಗು ಅವನ ಕಣ್ಣಲ್ಲಿ ಬೆಳಕು ಮೂಡಿಸಿತ್ತು.

ಕತ್ತಲಾಗುವುದರೊಳಗೆ ಇಲ್ಲಿಂದ ಹೊರಡಬೇಕು. ಈಗ ಅವಳಿಗೆ ಕತ್ತಲು ಮತ್ತು ಬೆಳಕಿನ ಅನುಭವವಾಗತೊಡಗಿತು. ಬೆಳಕು ಇಷ್ಟು ಶುಭ್ರ ಮತ್ತು ಆನಂದದಾಯಕವಾಗಿರುತ್ತದೆಂದು ಅವಳು ಪುಳಕಗೊಂಡಳು. ಕತ್ತಲೆ ಎಂದರೆ ಅದೇ ಬೀದಿನಾಯಿಗಳ ಹುಚ್ಚು ಕಡಿತ, ಕೊರಡು ಕೊರಡಾಗಿ ಮಲಗುತ್ತಿದ್ದ ತನ್ನ ವರ್ತನೆ ಅಸಹ್ಯ ಎನಿಸಿತು. ಮತ್ತೆ ಕೇಳಿದಳು. 'ದೂರ ಅಂದ್ರ ಎಲ್ಲೀಗಿ ?' ಶಾಂತ ಸ್ವರದಲ್ಲಿ ಅವನು ಹೇಳಿದ ದೂರಂದ್ರ... ಅವನಿಗೂ ಗೊತ್ತಿಲ್ಲ. ಆದರೆ ಅವಳ ಕೈಯನ್ನು ತನ್ನ ಎದೆಯ ಮೇಲಿಟ್ಟುಕೊಂಡಿದ್ದ. ಅವನ ಎದೆಬಡಿತ ಅವಳ ಕೈ ತಾಕುತ್ತಿತ್ತು. ಅವಳೇ ಹೇಳಿದಳು 'ಆಯ್ತು ದೂರ ಹೋಗೂನು.' ಅವಳ ಇನ್ನೊಂದು ಕೈ ಅವನ ಮೊಂಡು ಕಾಲನ್ನು ನೇವರಿಸುತ್ತಿತ್ತು.

ರೈಲು ಬಂದು ನಿಂತದ್ದೇ ತಡ ಅವರಿಬ್ಬರು ಎದ್ದರು. ಅವರ ಹೆಜ್ಜೆ ದೃಢವಾಗಿದ್ದವು. ರೈಲು ಬೋಗಿಯ ಬಾಗಿಲ ಸಂದಿಯಲ್ಲಿ ಕುಳಿತ ಅವರು ಈ ಜಗತ್ತನ್ನೇ ಮರೆತಿದ್ದಾರೆ. ಗದ್ದಲ ಹೆಚ್ಚಿದಷ್ಟೂ ಅವರು ಹತ್ತಿರ ತೀರ ಹತ್ತಿರವಾಗುತ್ತಿದ್ದಾರೆ. ಎರಡು ದೇಹದ ಉಸಿರು ಒಂದೇ. ರೈಲು ಓಡಿದಷ್ಟೂ ಅವಳು ಪೊರೆ ಕಳಚಿದಂತಾಗುತ್ತಿದ್ದಾಳೆ. ಯಾವುದೋ ನಿಲ್ದಾಣದಲ್ಲಿ ರೈಲು ನಿಂತಾಗ ಅವನ ಎದೆಯ ಮೇಲೆ ಅವಳ ತಲೆ, ಅವಳ ತಲೆಯ ಮೇಲೆ ಅವನ ಕೈ ನವಿರಾಗಿ ಆಡುತ್ತಿದ್ದವು. ರೈಲು ನಿಂತದ್ದೇ ತಡ ಅವನು ಎದ್ದು 'ಇರು ನೀರ ತುಂಬಕೊಂಡು ಬರ್‍ತೀನಿ' ಅಂದ. ಕಟ್ ಕಟ್ ಕೋಲಿನ ಸದ್ದು. ಇಳಿದುಹೋದ. ಅವನು ಸ್ಟೇಶನ್‌ದಲ್ಲಿನ ನಲ್ಲಿಯಲ್ಲಿ ನೀರು ತುಂಬುವಾಗ ರೈಲು ಸಿಳ್ಳೆ ಹಾಕಿ ನಿಧಾನವಾಗಿ ಚಲಿಸತೊಡಗಿತು. ಸಿಕ್ಕಷ್ಟೇ ನೀರು ಹಿಡಿದು ಕೋಲಿನ ಸಹಾಯದಿಂದ ಅವಳಿದ್ದ ಬೋಗಿಯಡೆಗೆ ಓಡತೊಡಗಿದ. ಆದರೆ ಒಂಟಿ ಕಾಲಿನ ಇವನ ಓಟಕ್ಕಿಂತ ನೂರು ಕಾಲಿನ ರೈಲಿನ ವೇಗ ಹೆಚ್ಚಿತು. ಅವನೂ ವೇಗ ಹೆಚ್ಚಿಸಿದ. ರೈಲು ನಿಲ್ದಾಣ ದಾಟಿತು. ಇನ್ನೂ ಓಡಲಾಗದೆ ಕೈಕೋಲು ಜಾರಿ ಕುಸಿದ.

ಅವನ ಕೋಲಿನ ಕಟ್ ಕಟ್ ಸದ್ದಿಗಾಗಿ ಕಾಯುತ್ತ ರೈಲಲ್ಲಿ ಕುಳಿತ ಅವಳ ಎದೆಬಡಿತ ರೈಲಿನ ಸದ್ದನ್ನೂ ಮೀರಿತ್ತು. ಅವನ್ಯಾಕೆ ಬರಲಿಲ್ಲ. ಅವನಾರು, ಹೆಸರೇನು, ವಿಳಾಸ ಊಹೂಂ... ಒಂದೂ ಗೊತ್ತಿಲ್ಲ. ರೈಲು ಓಡುತ್ತ ದೂರ ದೂರ ಸಾಗಿತ್ತು. ರೈಲು ನಿಂತಾಗ ಅಧಿಕಾರಿಯೊಬ್ಬ ಬಂದು ಅವಳನ್ನು ಕೆಳಗೆ ದಬ್ಬಿದ. ಅವಳಿಗೆ ಮತ್ತೆ ಕತ್ತಲೆ ಕಾಣಿಸಿತು. ಆದರೂ ಆ ಕಟ್ ಕಟ್ ಕೋಲಿನ ಸದ್ದಿಗಾಗಿ ಕಾಯುತ್ತಲೇ ಕುಳಿತಳು, ಬೆಳಕು ಬಂದೇ ಬರುತ್ತದೆಂದು.


**ಶ್ರೀಸುಮಿತ್ರಾಸುತ ಅಗಸಬಾಳ**
ಅಗಸಬಾಳ, ಮುದ್ದೇಬಿಹಾಳ ತಾಲ್ಲೂಕು, ವಿಜಯಪುರ ಜಿಲ್ಲೆ






# ಯಾವುದು ರಾಷ್ಟ್ರಪ್ರೇಮ? ರಾಷ್ಟ್ರದ್ರೋಹ?

ಭಾರತದಲ್ಲಿ ಭಾಜಪ ಬಹುಮತ ಪಡೆದುಕೊಂಡು ಅಧಿಕಾರಕ್ಕೆ ಬಂದಮೇಲೆ ಆಗಾಗ್ಗೆ ಕ್ರಮಬದ್ಧವಾದ ರೀತಿಯಲ್ಲಿ ಒಂದಲ್ಲ ಒಂದು ಅಹಿತಕರ ಘಟನೆಗಳು ಸಂಭವಿಸುತ್ತಿವೆ. ಈ ಎಲ್ಲ ವಿದ್ಯಮಾನಗಳೂ ನಿಗದಿತ ಮಾದರಿಯಲ್ಲಿದ್ದು ಸ್ವತಂತ್ರವಾಗಿ ಆಲೋಚಿಸುವವರನ್ನು ಆತಂಕಕ್ಕೀಡು ಮಾಡಿದೆ. ನಮ್ಮ ಸಂವಿಧಾನಕ್ಕೆ ಪ್ರಜಾಪ್ರಭುತ್ವಕ್ಕೆ, ಜಾತ್ಯತೀತ ಬಹುಸಂಸ್ಕೃತಿ ವ್ಯವಸ್ಥೆಗೆ ಸವಾಲೊಡ್ಡುತ್ತಿವೆ, ಆಡಂಬರದಿಂದ ಅಧಿಕಾರಕ್ಕೇರಿದ ಮೋದಿ ಸರಕಾರ ನೆಲೆಯೂರುತ್ತಿದ್ದಂತೆ ಸಂಘಪರಿವಾರದ ಅಂಗಸಂಸ್ಥೆಗಳು ಹೊಸ ಹುರುಪಿನಿಂದ ಹಿಂದುತ್ವವಾದಿ ವಿಚಾರಗಳನ್ನು ಹೊರಿಸಲು ಸನ್ನದ್ಧವಾದವು. ಅಲ್ಪಸಂಖ್ಯಾತರು, ದಲಿತರು, ಬುದ್ಧಿಜೀವಿಗಳು, ಬರಹಗಾರರು, ಕಲಾವಿದರು, ಎಡಪಂಥೀಯರು, ವಿಚಾರವಾದಿಗಳು ಮೊದಲಾದವರ ಮೇಲೆ ದಾಳಿ ನಡೆಸಲಾರಂಭಿಸಿದರು. ಆರೆಸ್ಸೆಸ್ ನಾಯಕ ಮೋಹನ್ ಭಾಗವತ್‌ರಿಂದ ಹಿಡಿದು, ಮೋದಿ ಸರಕಾರದ ಸಚಿವರುಗಳು, ಪಾರ್ಲಿಮೆಂಟ್ ಸದಸ್ಯರು, ಸ್ಥಳೀಯ ಭಾಜಪ ನಾಯಕರುಗಳು ಬಹಿರಂಗವಾಗಿಯೇ ಹಿಂದುತ್ವ ಅಜೆಂಡಾವನ್ನು ಮೆರೆದು ಎದುರಾಳಿಗಳಿಗೆ ಎಚ್ಚರಿಕೆ ನೀಡಿದರು. ಹೊಸ ರಾಜಕೀಯ ಪರಿಭಾಷೆಯಲ್ಲಿ 'ಅಂಚು' ಎನಿಸಿಕೊಂಡ ವ್ಯಕ್ತಿಗಳು ನಾಲಿಗೆ ಹರಿಯಬಿಟ್ಟರು, ಹಿಂಸಾಚಾರದಲ್ಲೂ ತೊಡಗಿದರು. ಯಾರು ಏನು ಯೋಚಿಸಬೇಕು, ಏನು ಬರೆಯಬೇಕು ಎನ್ನುವುದರಿಂದ ಪ್ರಾರಂಭಿಸಿ, ಯಾರು ಏನು ತಿನ್ನಬೇಕು ಎನ್ನುವವರೆಗೆ ನಿರ್ಬಂಧಗಳನ್ನು ಹೇರುತ್ತಿದ್ದು, ಉಸಿರುಕಟ್ಟುವಂಥ ವಾತಾವರಣ ನಿರ್ಮಾಣವಾಗಿದೆ. ನಡೆದಿರುವ ಘಟನೆಗಳನ್ನೆಲ್ಲ ಇಲ್ಲಿ ಪಟ್ಟಿಮಾಡುವುದು ಅನವಶ್ಯಕ. ಆದರೆ ಒಂದೊಂದು ವಿದ್ಯಮಾನವನ್ನೂ ಕಾಣದ ಕೈಯೊಂದು ನಿಯಂತ್ರಿಸುತ್ತಿರುವುದು ವೇದ್ಯವಾಗುತ್ತಿದೆ. ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ದೇಶಪ್ರೇಮದ ಹೆಸರಿನಲ್ಲಿ ದಬ್ಬಾಳಿಕೆಗೆ ಪ್ರೋತ್ಸಾಹ ನೀಡಲಾಗುತ್ತಿದೆ. ಅದಕ್ಕೆ ಇತ್ತೀಚಿನ ಉದಾಹರಣೆ ಎಂದರೆ ಹೈದರಾಬಾದ್ ವಿಶ್ವವಿದ್ಯಾನಿಲಯದ ವಿದ್ಯಾರ್ಥಿ ರೋಹಿತ್ ವೇಮುಲ ಆತ್ಮಹತ್ಯೆ ಪ್ರಕರಣ ಮತ್ತು ದೆಹಲಿಯ ಜವಹರಲಾಲ್ ವಿಶ್ವವಿದ್ಯಾನಿಲಯದ ವಿದ್ಯಮಾನಗಳು.

ಈ ಎರಡೂ ಘಟನೆಗಳು ಹಲವಾರು ಪ್ರಶ್ನೆಗಳನ್ನು ಎತ್ತಿವೆ. ಪತ್ರಿಕೆಗಳಲ್ಲಿ, ಮಾಧ್ಯಮಗಳಲ್ಲಿ ಸಾಕಷ್ಟು ಬಿರುಸಿನ ಚರ್ಚೆಗಳೂ ನಡೆಯುತ್ತಿವೆ. ದೇಶದಲ್ಲಿ ಇಷ್ಟೆಲ್ಲ ಅವಾಂತರಗಳು ಸಂಭವಿಸುತ್ತಿದ್ದು ಆತಂಕಕಾರಿ ವಾತಾವರಣ ಸೃಷ್ಟಿಯಾಗಿದ್ದರೂ ಪ್ರಧಾನಿ ನರೇಂದ್ರ ಮೋದಿ ಮೌನಸಮ್ಮತಿ ತೋರುತ್ತಿದ್ದಾರೆ. ಯಾವೊಂದು ಘಟನೆಯನ್ನೂ ಕುರಿತು ಸೊಲ್ಲೆತ್ತದೆ ಪ್ರಧಾನಿ ದೇಶಪ್ರೇಮ ಕುರಿತು ಉಪದೇಶ ಮಾಡುತ್ತಾರೆ, ಪ್ರಜಾತಂತ್ರದ ಕುರಿತು, ಸಂವಿಧಾನ ಕುರಿತು ವ್ಯಾಖ್ಯಾನಿಸುತ್ತಾರೆ; ತಮಗೆ ಪ್ರಿಯವಾದ ಅಭಿವೃದ್ಧಿ ಮಂತ್ರ ಜಪಿಸುತ್ತ ಹೊಸ ಹೊಸ ಘೋಷಣೆಗಳನ್ನು ಹೊಸೆಯುತ್ತಿದ್ದಾರೆ. ದೇಶದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಸಂಭವಿಸುತ್ತಿರುವ ಘಟನೆಗಳನ್ನು ಕುರಿತು ಪರಾಮರ್ಶಿಸಿ ಪರಿಹಾರ ನೀಡುವುದಕ್ಕೆ ಪ್ರತಿಯಾಗಿ ಮಾನವ ಸಂಪನ್ಮೂಲ ಸಚಿವೆ ಸ್ಮೃತಿ ಇರಾನಿ ವಿದ್ಯಾರ್ಥಿಗಳಲ್ಲಿ ದೇಶಪ್ರೇಮ ಉಕ್ಕಿಸಲು ರಾಷ್ಟ್ರಧ್ವಜವನ್ನು ಕಟ್ಟಡಗಳ ಮೇಲೆ ಹಾರಿಸುವುದನ್ನು ಕಡ್ಡಾಯವಾಗಿಸಿದ್ದಾರೆ. ಆರೆಸ್ಸೆಸ್ ಸರಸಂಘ ಚಾಲಕ ಮೋಹನ್ ಭಾಗವತ್ ಕೆಲವರಿಗೆ 'ಭಾರತ ಮಾತಾಕಿ ಜೈ' ಎನ್ನುವುದನ್ನು ಕಲಿಸಬೇಕಾಗಿದೆ ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ವಿದ್ಯಾರ್ಥಿಗಳ ಮೇಲೆ 'ರಾಷ್ಟ್ರದ್ರೋಹ'ದ ಆಪಾದನೆ ಹೊರಿಸಿ ಕಾರಾಗೃಹಕ್ಕೆ ದೂಡಲಾಯಿತು. ಸ್ವತಂತ್ರ ವಿಚಾರಧಾರೆಯ ವಿದ್ಯಾರ್ಥಿ ಸಂಘಟನೆಗಳ ಮೇಲೆ ಸಂಘಪರಿವಾರ ಸಮರಸಾರಿದೆ. ತನ್ನ ಅಂಗಸಂಸ್ಥೆ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತನ್ನು ಈ ದಿಶೆಯಲ್ಲಿ ಮುಂದಳ ದಲ್ಲಿರಿಸಿದೆ. ದಲಿತ ಸಂಘಟನೆಗಳು, ಎಡಪಂಥೀಯ ವಿಚಾರದ ಸಂಸ್ಥೆಗಳು, ಹಿಂದುತ್ವ ವಿಚಾರಗಳನ್ನು ಒಪ್ಪದ ಸ್ವತಂತ್ರ ಗುಂಪುಗಳು ಆಡಳಿತಾರೂಢ ಪಕ್ಷದ ಕೆಂಗಣ್ಣಿಗೆ ಗುರಿಯಾಗಿವೆ.

ಸಿ. ಆರ್. ಕೃಷ್ಣರಾವ್

ಈ ಎಲ್ಲ ಪ್ರಕರಣಗಳು ಭಾರತದ ಮೇಲೆ ಹಿಂದುತ್ವವಾದಿ ಸಿದ್ಧಾಂತವನ್ನು ಹೊರಿಸುವ ಹುನ್ನಾರ. ಎಲ್ಲವನ್ನೂ ರಾಷ್ಟ್ರೀಯತೆ, ರಾಷ್ಟ್ರಪ್ರೇಮದ ಹೆಸರಿನಲ್ಲಿ ನಡೆಸಲಾಗುತ್ತಿದೆ. ರಾಷ್ಟ್ರೀಯತೆ ಎಂದರೆ ಅದು ಭಾರತದಲ್ಲಿ ಹಿಂದೂಗಳಿಗೆ ಮಾತ್ರ ಪರಮಾಧಿಕಾರ ನೀಡುತ್ತದೆ ಎಂದೇನಲ್ಲ. ಭಿನ್ನತೆಯಲ್ಲಿ ಏಕತೆ ಭಾರತದ ಪರಂಪರೆ. ಇಲ್ಲಿ ಎಲ್ಲ ಮತಧರ್ಮೀಯರೂ ಸಂವಿಧಾನದ ಪ್ರಕಾರ ಸಮಾನ ಹಕ್ಕು ಉಳ್ಳವರಾಗಿದ್ದಾರೆ. ರಾಷ್ಟ್ರಪ್ರೇಮ ಎಂದರೆ ಅದು ಯಾರೊಬ್ಬರ ಸ್ವತ್ತೂ ಅಲ್ಲ. ರಾಷ್ಟ್ರೀಯತೆ ಎನ್ನುವುದು ಸರಕಾರಿ ಕಚೇರಿಗಳ ಮೇಲೆ ರಾಷ್ಟ್ರಧ್ವಜ ಹಾರಿಸುವುದಕ್ಕಾಗಲಿ, ಭಾರತಮಾತೆಯ ಕುರಿತು ಹಾಡಿ ಹೊಗಳುವುದಕ್ಕಾಗಲಿ ಸೀಮಿತವಲ್ಲ. ಅದು ಜನತೆಯ ಅಸ್ಮಿತೆಯ ಪ್ರತೀಕ ಎಂಬುದಾಗಿ

ವಿಖ್ಯಾತ ಇತಿಹಾಸ ತಜ್ಞೆ ರೊಮಿಲಾ ಥಾಪರ್ ಒಂದುಕಡೆ ಒತ್ತಿ ಹೇಳಿದ್ದಾರೆ. ಇತ್ತೀಚೆಗೆ ನೀಡಿದ ಸಂದರ್ಶನವೊಂದರಲ್ಲಿ ಅವರು ಹೀಗೆ ಹೇಳಿದ್ದಾರೆ : "ಭಾರತದ ನಾಗರಿಕನಾಗಿರುವುದೇ ಪ್ರಧಾನ ಅಸ್ಮಿತೆ. ಉಳಿದೆಲ್ಲವೂ ಎಂದರೆ ಧಾರ್ಮಿಕ, ಜಾತಿ, ಭಾಷೆಯ ಅಸ್ಮಿತೆಗಳೆಲ್ಲವೂ ತದನಂತರ. ಭಾರತದಲ್ಲಿ ಹಿಂದೂಗಳಿಗಾಗಲಿ, ಪಾಕಿಸ್ತಾನದಲ್ಲಿ ಮುಸಲ್ಮಾನರಿಗಾಗಲಿ ರಾಷ್ಟ್ರೀಯತೆ ಶ್ರೇಷ್ಠತೆಯನ್ನು ನೀಡುವುದಿಲ್ಲ. ಧಾರ್ಮಿಕ ಬಹುಸಂಖ್ಯಾತರಾಗಿದ್ದರೂ ಅದು ವಿಶೇಷ ಸವಲತ್ತುಗಳನ್ನೇನೂ ಕೊಡುವುದಿಲ್ಲ. ಹಿಂದೂಗಳು, ಮುಸಲ್ಮಾನರು, ಕ್ರಿಶ್ಚಿಯನ್ನರು, ದಲಿತರು, ಆದಿವಾಸಿಗಳು ಎಲ್ಲರೂ ಸಮಾನ ಹಕ್ಕುಗಳನ್ನು ಅನುಭವಿಸುವ ನಾಗರಿಕರು."

ಭಾರತದ ರಾಷ್ಟ್ರೀಯತೆಯ ಪರಿಕಲ್ಪನೆ ಹಿಂದಿನಿಂದ ಬಂದದ್ದು. ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ವಸಾಹತು ಆಳ್ವಿಕೆಯನ್ನು ಅಂತ್ಯಗೊಳಿಸಲು ಎಲ್ಲ ಧರ್ಮೀಯರು ಒಂದೇ ಗುರಿಯಿಂದ ಭಾಗವಹಿಸಿದ್ದಾರೆ. ಬಹುಮುಖಿ, ಬಹುಸಂಸ್ಕೃತಿ, ಬಹುಧರ್ಮೀಯ ಈ ನಾಡು ಭಿನ್ನತೆಯಲ್ಲಿ ಏಕತೆ ಎನ್ನುವ ಪರಿಪಾಠವನ್ನು ಹಿಂದಿನಿಂದ ನಡೆಸಿಕೊಂಡು ಬಂದಿದೆ. ಭಿನ್ನಮತಕ್ಕೆ ಯಾವತ್ತೂ ಅವಕಾಶ ನೀಡಿದೆ. ಇತಿಹಾಸದಲ್ಲಿ ಅದಕ್ಕೆ ಅನೇಕ ಉದಾಹರಣೆಗಳಿವೆ. ಭಿನ್ನಾಭಿಪ್ರಾಯ ಅಥವಾ ಆಡಳಿತದಲ್ಲಿರುವ ಸರಕಾರದ ನೀತಿಗಳಿಗೆ ವಿರೋಧ ಎಂದಿಗೂ ರಾಷ್ಟ್ರದ್ರೋಹವಲ್ಲ. ಪ್ರಜಾಪ್ರಭುತ್ವದಲ್ಲಿ ಭಿನ್ನಾಭಿಪ್ರಾಯಕ್ಕೆ ಯಾವತ್ತೂ ಮನ್ನಣೆ ಇದೆ. ಭಾರತದ ಸಂವಿಧಾನದಲ್ಲಿ ನೀಡಿರುವ ಎಲ್ಲ ಹಕ್ಕುಗಳು ಎಲ್ಲರಿಗೂ ಸಮಾನವಾಗಿ ಲಭ್ಯ. ರಾಷ್ಟ್ರಪ್ರೇಮ ಎಂದರೆ ಪ್ರಭುತ್ವದ ಎಲ್ಲ ಕ್ರಮಗಳಿಗೂ ಸಮ್ಮತಿಸುವುದೇನಲ್ಲ. ಅವನ್ನು ಪ್ರಶ್ನಿಸುವ, ಟೀಕಿಸುವ, ಖಂಡಿಸುವ ಹಕ್ಕು ಪ್ರತಿ ನಾಗರಿಕನಿಗೂ ಇದೆ. ಈ ಕುರಿತು ಗಾಂಧೀಜಿಯವರ ಪರಿಕಲ್ಪನೆ ಏನಿತ್ತು ನೋಡೋಣ.

ರಾಷ್ಟ್ರೀಯತೆ ಕುರಿತು ಮಹಾತ್ಮ ಗಾಂಧಿಯವರ ಪರಿಕಲ್ಪನೆ ಸ್ಪಷ್ಟವಾಗಿತ್ತು. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಅವರು ಅದನ್ನು ಕುರಿತು ಹೀಗೆ ವಿವರಿಸಿದ್ದಾರೆ : "ಈ ದೇಶದಲ್ಲಿ ಹಲವು ಮತಧರ್ಮಗಳು ಇವೆ ಎಂದಮಾತ್ರಕ್ಕೆ ಇಂಡಿಯ ಎಂಬ ರಾಷ್ಟ್ರ ಇಲ್ಲವೆಂದಾಗುವುದಿಲ್ಲ. ವಿದೇಶೀಯರ ಪ್ರವೇಶ ಒಂದು ರಾಷ್ಟ್ರವನ್ನು ಹಾಳುಗೆಡವಲೇ ಬೇಕೆನ್ನುವುದೇನೂ ಅನಿವಾರ್ಯವಲ್ಲ. ಬಂದವರೂ ಅದರೊಳಗೆ ವಿಲೀನವಾಗುತ್ತಾರೆ. ಆ ರೀತಿ ಸಾಧ್ಯವಾದಾಗಲೇ ಅದು ಒಂದು ದೇಶ ಎನಿಸಿಕೊಳ್ಳುವುದು. ಭಾರತ ಯಾವಾಗಲೂ ಅಂಥ ಒಂದು ದೇಶವಾಗಿಯೇ ಮುಂದುವರಿದಿದೆ. ಹಿಂದೂಗಳು ಇಂಡಿಯಾದಲ್ಲಿ ಕೇವಲ ಹಿಂದೂಗಳು ಮಾತ್ರ ಇರಬೇಕೆಂದು ಭಾವಿಸಿದರೆ ಅದು ಕೇವಲ ಕನಸಿನ ಲೋಕವಷ್ಟೆ. ಹಿಂದೂಗಳು, ಮಹಮ್ಮದೀಯರು, ಪಾರ್ಸಿಗಳು, ಕ್ರಿಶ್ಚಿಯನ್ನರು, ಇವರೆಲ್ಲ ಇಂಡಿಯವನ್ನು ತಮ್ಮ ವಾಸಸ್ಥಳವನ್ನಾಗಿ ಮಾಡಿಕೊಂಡವರು ಮತ್ತು ಇವರೆಲ್ಲ ನಮ್ಮ ದೇಶ ಬಾಂಧವರು. ತಮ್ಮ ಪರಸ್ಪರ ಹಿತಾಸಕ್ತಿಗಳ ರಕ್ಷಣೆಗಾಗಿ ಇವರೆಲ್ಲ ಒಗ್ಗಟ್ಟಿನಿಂದ ವಾಸಿಸಬೇಕು. ಇಂಡಿಯದಲ್ಲೇ ಆಗಲಿ, ಜಗತ್ತಿನ ಬೇರಾವ ದೇಶಗಳಲ್ಲೇ ಆಗಲಿ ಒಂದು ರಾಷ್ಟ್ರವೆಂದರೆ ಅಲ್ಲಿಯ ಜನರೆಲ್ಲ ಒಂದೇ ಮತಧರ್ಮಕ್ಕೆ ಸೇರಿದವರು ಎಂದಲ್ಲ" (ಭಾರತದ ರಾಷ್ಟ್ರೀಯತೆಯ ಪರಿಕಲ್ಪನೆ, ಲೇ. : ಪ್ರೊ॥ ಕೆ. ಎನ್. ಪಣಿಕ್ಕರ್, ಪು.೧೮).

ಚುನಾವಣೆಯಲ್ಲಿ ಬಹುಮತ ಗಳಿಸಿದ ಮಾತ್ರಕ್ಕೆ ತನ್ನ ಸಿದ್ಧಾಂತಗಳನ್ನು, ವಿಚಾರಗಳನ್ನು ಭಾಜಪ ರಾಷ್ಟ್ರದ ಪ್ರಜೆಗಳ ಮೇಲೆ ಹೊರಿಸಲು ನೋಡುತ್ತಿದೆ. ಭಾಜಪ ನಾಯಕ ವಾಜಪೇಯಿ ನೇತೃತ್ವದಲ್ಲಿ ಮೊದಲ ಬಾರಿ ಎನ್‌ಡಿಎ ಅಧಿಕಾರಕ್ಕೆ ಬಂದಾಗಲೇ ಕೇಸರೀಕರಣದ ಭರಾಟೆ ಪ್ರಾರಂಭವಾಗಿತ್ತು. ಆದರೆ ಅದು ಈಗಿನಂತೆ ಅಷ್ಟು ಬಿರುಸಾಗಿರಲಿಲ್ಲ. ಸಂಘ ಪರಿವಾರ ಯಾವತ್ತೂ ಎಳೆವಯಸ್ಸಿನವರನ್ನು, ವಿದ್ಯಾರ್ಥಿಗಳನ್ನು ಆಕರ್ಷಿಸುತ್ತ ಬಂದಿದೆ. ಕಿರಿ ವಯಸ್ಸಿನಲ್ಲೇ ಹಿಂದುತ್ವ ವಿಚಾರಗಳನ್ನು ಬೋಧಿಸುವುದು ಅದರ ಉದ್ದೇಶ. ಅಖಂಡ ಭಾರತದ, ಹಿಂದೂ ಧರ್ಮದ ಶ್ರೇಷ್ಠತೆಯನ್ನು ಅದು ಎಳೆಯರ ಮನಸ್ಸಿನಲ್ಲಿ ಬೇರೂರಿಸುತ್ತದೆ. ಶಿಕ್ಷಣದ ಕೇಸರೀಕರಣ ಅದರ ಮೂಲ ಉದ್ದೇಶಗಳಲ್ಲೊಂದು. ವಾಜಪೇಯಿ ಮಂತ್ರಿಮಂಡಲದಲ್ಲಿ ಮಾನವ ಸಂಪನ್ಮೂಲ ಸಚಿವರಾಗಿದ್ದ ಮುರಳಿ ಮನೋಹರ ಜೋಶಿ ಶಿಕ್ಷಣ ಕ್ಷೇತ್ರವನ್ನು ಕೇಸರೀಕರಣಗೊಳಿಸಲು ಸಾಕಷ್ಟು ಕ್ರಮಕೈಗೊಂಡರು. ಪಠ್ಯಪುಸ್ತಕಗಳನ್ನು ಬದಲಿಸಿದರು, ಆಯಕಟ್ಟಿನ ಕ್ಷೇತ್ರಗಳಲ್ಲಿ ಸಂಘಪರಿವಾರದವರನ್ನು ನೇಮಕ ಮಾಡಿದರು, ಸ್ವತಂತ್ರವಾಗಿ ಆಲೋಚಿಸುವ ಇತಿಹಾಸಕಾರರು ಅವರ ಕೆಂಗಣ್ಣಿಗೆ ಗುರಿಯಾದರು. ಈಗ ಮೋದಿ ಸರಕಾರದಲ್ಲಿ ಸಚಿವೆಯಾಗಿರುವ ಸ್ಮೃತಿ ಇರಾನಿ ಹೆಚ್ಚು ಉಗ್ರವಾಗಿ ಶಿಕ್ಷಣ ಕ್ಷೇತ್ರವನ್ನು ಕೇಸರೀಕರಣಗೊಳಿಸಲು ಹೊರಟಿದ್ದಾರೆ. ಅದಕ್ಕೆ ಗುರಿಯಾಗಿರುವುದು ದೇಶದ ಉನ್ನತ ಶಿಕ್ಷಣ ಸಂಸ್ಥೆಗಳು. ಈ ಸಚಿವೆಯ ವಿದ್ಯಾರ್ಹತೆಯ ಬಗ್ಗೆಯೇ ವಿವಾದ ಇದ್ದುದನ್ನು ನೆನಪಿಸಿಕೊಳ್ಳಬಹುದು. ಈಗ ಈಕೆ ವಿವಾದದ ಕೇಂದ್ರವಾಗಿದ್ದಾರೆ. ವಿಶ್ವವಿದ್ಯಾನಿಲಯಗಳು ಕೇವಲ ಜ್ಞಾನ ಕಲಿಕೆಯ, ಪಠ್ಯಗಳನ್ನು ತಯಾರಿಸುವ, ಜ್ಞಾನ ಹರಡುವ ಸಂಸ್ಥೆಗಳು ಮಾತ್ರವಲ್ಲ, ಆ ಸಂಸ್ಥೆಯ ಆವರಣದಲ್ಲಿ ರಾಷ್ಟ್ರೀಯತೆಯ ಪರಿಕರಗಳು ನಿರ್ಮಾಣವಾಗುತ್ತವೆ; ಅಸ್ಮಿತೆಯು ರಚಿಸಲ್ಪಡುತ್ತವೆ. ಈ ವಿಚಾರವನ್ನು ಅವರು ಒಪ್ಪುವುದಿಲ್ಲ. ಬದಲಾಗಿ ಅವನ್ನು ಸರಕಾರದ ಹದ್ದುಬಸ್ತಿನಲ್ಲಿರಿಸಿಕೊಳ್ಳಲು, ವಿದ್ಯಾರ್ಥಿಗಳ ಸ್ವತಂತ್ರ ಚಿಂತನೆಯನ್ನು ಹರಣ ಮಾಡಲು ಈ ಸಂಸ್ಥೆಗಳ ಮೇಲಿನ ಸಂಘ ಪರಿವಾರದ ಅನುಯಾಯಿಗಳನ್ನು ಕೂರಿಸಲು ನೋಡುತ್ತಿದ್ದಾರೆ. ಪೂನಾದ ಫಿಲಂ ಇನ್‌ಸ್ಟಿಟ್ಯೂಟಿನಿಂದ ಹಿಡಿದು ಅಲಹಾಬಾದ್ ವಿಶ್ವವಿದ್ಯಾನಿಲಯದವರೆಗೆ, ದೇಶದ ಪ್ರತಿಷ್ಠಿತ ವಿದ್ಯಾಸಂಸ್ಥೆಗಳಾದ ಐಐಟಿ, ಐಐಎಂ.ಗಳ ಸ್ವಾಯತ್ತತೆಯನ್ನು ಕಸಿದುಕೊಳ್ಳಲು ಸರಕಾರ ಹವಣಿಸುತ್ತಿದೆ. ವಿದ್ಯಾರ್ಥಿಗಳ ಸ್ವತಂತ್ರ ಚಿಂತನೆಯನ್ನು ಧ್ವಂಸಮಾಡಿ, ವೈಚಾರಿಕ, ಪ್ರಗತಿಪರ ವಿದ್ಯಾರ್ಥಿ ಸಂಘಟನೆಗಳನ್ನು ಮೂಲೆಗೊತ್ತಿ, ಸಂಘ ಪರಿವಾರದ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತಿಗೆ ಆದ್ಯತೆ ನೀಡಲು ನೋಡುತ್ತಿದೆ. ಹೈದರಾಬಾದ್ ವಿಶ್ವವಿದ್ಯಾನಿಲಯದ ದಲಿತ ಪಿಎಚ್‌ಡಿ ವಿದ್ಯಾರ್ಥಿ ರೋಹಿತ್ ವೇಮುಲ ಆತ್ಮಹತ್ಯೆ ಪ್ರಕರಣ, ಜವಹರಲಾಲ್ ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘಟನೆಯ ನಾಯಕ ಕನ್ಹಯ್ಯ ಕುಮಾರ್ ಮತ್ತು ಇತರರ ಮೇಲೆ ರಾಷ್ಟ್ರದ್ರೋಹದ ಆಪಾದನೆ ಹೊರಿಸಿ ಬಂಧನದಲ್ಲಿರಿಸಿದ್ದು ಸರಕಾರ ಯಾವ ದಿಶೆಯಲ್ಲಿ ಹೊರಟಿದೆ ಎಂಬುದನ್ನು ಹೊರಗೆಡಹಿದೆ. ಸ್ವತಂತ್ರ ವಿಚಾರಧಾರೆಯನ್ನು ಸಂಪೂರ್ಣವಾಗಿ ತೊಡೆದು ಹಾಕುವ ಫ್ಯಾಸಿಸ್ಟ್ ಪ್ರವೃತ್ತಿಯನ್ನು ಅದು ತೋರುತ್ತಿದೆ. ಸಂಘಪರಿವಾರದ ಹಿಂದುತ್ವ ಸಿದ್ಧಾಂತವನ್ನು ಬಲವಂತವಾಗಿ ಹೊರಿಸುವ ಪ್ರವೃತ್ತಿ ಬೆಳೆಯುತ್ತಿವೆ. ಸಚಿವೆ ಸ್ಮೃತಿ ಇರಾನಿ ಪಾರ್ಲಿಮೆಂಟಿನಲ್ಲಿ ಈ ಘಟನೆಗಳನ್ನು ಕುರಿತು ಸರಕಾರದ ಕ್ರಮವನ್ನು ಆರ್ಭಟದಿಂದ ಸಮರ್ಥಿಸಿಕೊಂಡಿದ್ದು ಮತ್ತಷ್ಟು ಪೊಳ್ಳುತನವನ್ನು ಹೊರಗೆಡಹಿದೆ. ಪ್ರಧಾನಿ ಮಾತ್ರ ಇವು ಯಾವುದಕ್ಕೂ ಪ್ರತಿಕ್ರಿಯಿಸದಿರುವುದು ಖಂಡನೀಯ.

ರಾಷ್ಟ್ರದ್ರೋಹದ ಆಪಾದನೆ ಹೊರಿಸಿ ವಿದ್ಯಾರ್ಥಿಗಳನ್ನು ಬಂಧನದಲ್ಲಿರಿಸಿದ್ದು ಇದಕ್ಕೆ ಸಂಬಂಧಿಸಿದ ಕ್ರಿಮಿನಲ್ ಪ್ರೊಸೀಜರ್ ಕೋಡ್‌ನ ವಿಧಿಯ ಅಗತ್ಯ, ಮುಂದುವರಿಕೆಯ ಬಗ್ಗೆ ವಿವಾದವನ್ನು ಸೃಷ್ಟಿಸಿದೆ. ಯಾವುದು ರಾಷ್ಟ್ರಪ್ರೇಮ, ಯಾವುದು ರಾಷ್ಟ್ರದ್ರೋಹ ಎನ್ನುವ ಪರಿಕಲ್ಪನೆ ಬಗ್ಗೆ ತೀವ್ರ ಚರ್ಚೆ ನಡೆದಿದೆ. ವಸಾಹತುಶಾಹಿ ಆಡಳಿತ ಕಾಲದಲ್ಲಿ ರೂಪಿಸಲಾದ ರಾಷ್ಟ್ರದ್ರೋಹದ ವಿಧಿಯನ್ನು ಕಿತ್ತುಹಾಕಬೇಕು ಎಂಬ ವಿಚಾರ ಪ್ರಬಲವಾಗಿದೆ. ಕೇವಲ ಘೋಷಣೆ ಕೂಗಿದರೆಂದು ಆಪಾದಿಸಿ ರಾಷ್ಟ್ರದ್ರೋಹದ ಹಣೆಪಟ್ಟಿ ನೀಡುವುದು ಮೂರ್ಖತನದ ಪರಮಾವಧಿ. ಯಾವುದೇ ಸಾಕ್ಷ್ಯಾಧಾರವಿಲ್ಲದೆ, ಟೆಲಿವಿಷನ್ ಸುದ್ದಿ ಸಂಸ್ಥೆಗಳು ಒದಗಿಸಿದ ಚಿತ್ರೀಕರಣದ ತುಣುಕುಗಳನ್ನು ಆಧರಿಸಿ ಪೊಲೀಸರು ಕ್ರಮಕೈಗೊಂಡದ್ದು ಸರಕಾರದ ವಕ್ರದೃಷ್ಟಿಯನ್ನು ಪ್ರದರ್ಶಿಸಿದೆ. ಒಟ್ಟಿನಲ್ಲಿ ಭಾಜಪ ಸರಕಾರ ಹಿಂದುತ್ವ ವಿಚಾರದ ರಾಷ್ಟ್ರಪ್ರೇಮದ ಪರಿಕಲ್ಪನೆಯನ್ನು ಹೊರಿಸಲು ಹೊರಟಿರುವುದು ಸ್ಪಷ್ಟವಾಗಿದೆ. ಅದಕ್ಕೆ ಮೊದಲು ಬಲಿಯಾಗಿರುವುದು ವಿಶ್ವವಿದ್ಯಾನಿಲಗಳು, ವಿದ್ಯಾರ್ಥಿಗಳು ಮತ್ತು ಅವರ ಸ್ವತಂತ್ರ ವಿಚಾರದ ಸಂಘಟನೆಗಳು.

**ಸಿ. ಆರ್. ಕೃಷ್ಣರಾವ್**
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

**ಬುದ್ಧಿಜೀವಿ**

"ಬುದ್ಧಿಜೀವಿ"ಯೆಂದು
ನೀ ಬಿಟ್ಟ ಗಡ್ಡದಲಿ
"ಬುದ್ಧಿ" ಇರದಿದ್ದರೂ
"ಜೀವಿ"ಗಳಂತೂ
ಬೇಕಾದಷ್ಟಿವೆ !

**ಶೋಭಾ ಪ್ರಮೋದ್**
ರಾಯಗಢ

ಮನೆಯಲ್ಲಿ ಯಾರಾದರೂ ಸ್ವಲ್ಪ ಬುದ್ಧಿವಂತಿಕೆಯ ಮಾತಾಡಿದರೆ, ಅವನ ಸುತ್ತಲಿನ ಜನ, "ಏನಯ್ಯಾ ನೀನೇನು ಐನ್‌ಸ್ಟೈನ್‌ನ ಮರಿ ಅಂದ್ಕೊಂಡಿದ್ದೀಯಾ ?" ಎಂದು ಲೇವಡಿ ಮಾಡುತ್ತಿದ್ದದ್ದು ಸರ್ವೇಸಾಧಾರಣದ ಮಾತಾಗಿತ್ತು. ಐನ್‌ಸ್ಟೈನ್ ಒಬ್ಬ ಮಹಾ ಮೇಧಾವಿ ಎನ್ನುವುದು ಎಲ್ಲರಿಗೂ ತಿಳಿದಿದ್ದ ವಿಚಾರವಾದರೂ, ಅವನು ವಿಜ್ಞಾನಕ್ಕೆ ಇತ್ತ ಕೊಡುಗೆಯೇನು ಎನ್ನುವುದು ಬಹಳಷ್ಟು ಮಂದಿಗೆ ಬಹುಶಃ ತಿಳಿದಿರಲಾರದು. ಆದರೂ, ಬುದ್ಧಿವಂತಿಕೆಯ ಮತ್ತೊಂದು ಹೆಸರೇ ಐನ್‌ಸ್ಟೈನ್ ಎನ್ನುವುದು ಸಾಮಾನ್ಯ ಜ್ಞಾನವಲ್ಲವೇ ! ಈ ಮೇಧಾವಿ ಈಗ ೧೦೧ ವರ್ಷಗಳ ಹಿಂದೆ ಮಂಡಿಸಿದ, ಭೌತಶಾಸ್ತ್ರದ ಅತ್ಯಂತ ಪ್ರಮುಖ ಸಿದ್ಧಾಂತ ವೆನಿಸಿದ "ಸಾಮಾನ್ಯ ಸಾಪೇಕ್ಷತಾ ಸಿದ್ಧಾಂತ"ವು ನಮ್ಮ ವಿಶ್ವದ ಆಗುಹೋಗುಗಳ ಬಗ್ಗೆ, ಅದರ ಹಿಂದಿನ ರಹಸ್ಯಗಳ ಬಗ್ಗೆ, ಅನೇಕ ಪ್ರಮುಖ ಅಂಶಗಳನ್ನು ನಿಖರವಾಗಿ ಪ್ರತಿಪಾದಿಸುತ್ತದೆ. ಆ ಸಿದ್ಧಾಂತದಲ್ಲಿ ಆತ ಪ್ರಸ್ತಾಪಿಸಿ, ನುಡಿದ ಅಂತಿಮ ಭವಿಷ್ಯವಾಣಿಯೇ ಗುರುತ್ವಾಕರ್ಷಣ ತರಂಗಗಳ ಅಸ್ತಿತ್ವವಾಗಿದೆ.

ಗುರುತ್ವಾಕರ್ಷಣೆಯ ತರಂಗಗಳೆಂದರೇನು ? ಇವು ಎಲ್ಲಿವೆ ? ಎಲ್ಲಿಂದ ಬರುತ್ತಿವೆ ? ಇವುಗಳ ಉಗಮ ಸ್ಥಾನ ಯಾವುದು ? ಇದರಿಂದ ಮಾನವ ಸಂಕುಲಕ್ಕೇನು ಪ್ರಯೋಜನ ? ಇಂತಹ ಹಲವು ಹತ್ತು ಪ್ರಶ್ನೆಗಳು ನಮ್ಮ ಮನದಲ್ಲೇಳುವುದು ಸಹಜವೇ ! ಭೌತವಿಜ್ಞಾನಿಗಳು ಈ ಗುರುತ್ವಾಕರ್ಷಣ ತರಂಗಗಳನ್ನು ವೀಕ್ಷಿಸುವುದಕ್ಕೆ ಮುಂಚೆ, ನಮಗೆ ಈಗಾಗಲೇ ಪರಿಚಿತವಿರುವ ಇತರ ಮೂಲಭೂತ ತರಂಗಗಳೆನಿಸಿದ ಬೆಳಕು, ರೇಡಿಯೋ, ಕ್ಷ–ಕಿರಣ ಮತ್ತು ಗ್ಯಾಮಾ–ಕಿರಣಗಳ ತರಂಗಗಳೆಲ್ಲವೂ, ವಿವಿಧ ಆವರ್ತನಗಳ ವಿದ್ಯುತ್ಕಾಂತೀಯ ತರಂಗಗಳಾಗಿದ್ದು, ಅವುಗಳ ಸೈದ್ಧಾಂತಿಕ ಪ್ರತಿಪಾದನೆಯನ್ನು ಸುಮಾರು ೧೫೦ ವರ್ಷಗಳ ಹಿಂದೆಯೇ ಮಾಡಿದ್ದ ಜೇಮ್ಸ್ ಕ್ಲರ್ಕ್ ಮ್ಯಾಕ್ಸ್‌ವೆಲ್ ಎನ್ನುವವನು ಒಬ್ಬ ಪ್ರಸಿದ್ಧ ಬ್ರಿಟಿಷ್ ಭೌತವಿಜ್ಞಾನಿಯಾಗಿದ್ದು, ಈ ತರಂಗಗಳ ಇರುವಿಕೆಯನ್ನು ಅಲ್ಲಿಂದ ಮುಂದಕ್ಕೆ ೨೨ ವರ್ಷಗಳ ನಂತರ ನಿರ್ಣಾಯಕವಾಗಿ ಖಚಿತಪಡಿಸಿದ ಹೆನ್ರಿಕ್ ಹರ್ಟ್ಜ್ ಮತ್ತೊಬ್ಬ ಸುಪ್ರಸಿದ್ಧ ಜರ್ಮನ್ ಭೌತಶಾಸ್ತ್ರಜ್ಞ. ೧೯೧೬ರಲ್ಲಿ ಆಲ್ಬರ್ಟ್ ಐನ್‌ಸ್ಟೈನ್ ಈ ವಿದ್ಯುತ್ಕಾಂತೀಯ ತರಂಗಗಳನ್ನೇ ಹೋಲುವಂತಹ ಗುರುತ್ವಾಕರ್ಷಣ ತರಂಗಗಳು ಅಸ್ತಿತ್ವದಲ್ಲಿವೆ ಎನ್ನುವುದನ್ನು ಲೆಕ್ಕಾಚಾರಗಳ ಮೂಲಕ, ತನ್ನ ಗುರುತ್ವದ ಸಿದ್ಧಾಂತದಲ್ಲಿ ತೋರಿಸಿದ್ದನು. ಕಳೆದ ವಾರ ಸುಮಾರು ೧೦೦೦ ಭೌತವಿಜ್ಞಾನಿಗಳು ಮತ್ತು ಇಂಜಿನಿಯರುಗಳು ಕೂಡಿ, ಈಗ ೩೦ ವರ್ಷಗಳಿಂದ ನಡೆಸುತ್ತಿದ್ದ ಒಂದು ಭಾರಿ ಸಹಭಾಗಿತ್ವದ ಪ್ರಯೋಗದ ಮೂಲಕ ಈ ಗುರುತ್ವಾಕರ್ಷಣ ತರಂಗಗಳನ್ನು ವೀಕ್ಷಿಸಿದ್ದು, ಪ್ರಪಂಚದ ಎಲ್ಲೆಡೆಯಲ್ಲೂ, ಪತ್ರಿಕೆ, ದೂರದರ್ಶನ ಹಾಗೂ ಸಾಮಾಜಿಕ ಜಾಲಗಳಲ್ಲಿ ಭಾರಿ ಜನಪ್ರಿಯ ಸುದ್ದಿಯಾಗಿದೆ. ಜೊತೆಗೆ, ಈ ಸುದ್ದಿಯನ್ನು ವೀಕ್ಷಿಸಿದ ಎಲ್ಲ ಸಾಮಾನ್ಯ ಜನರ ಬಾಯಿಯಲ್ಲೂ, "Gravitational waves are ripples in the fabric of (Curvature of) spacetime" ಎನ್ನುವ ಒಂದು ಝೇಂಕಾರದ ಜಾಣ್ನುಡಿ ಸಲೀಸಾಗಿ ಹರಿದಾಡುತ್ತಿದೆ. ಆದರೆ ಈ ಜಾಣ್ನುಡಿಯ ಅರ್ಥವಾದರೂ ಏನು ? ಖಭೌತ ವಿಜ್ಞಾನಿಗಳ ಪ್ರಕಾರ ಗುರುತ್ವಾಕರ್ಷಣ ತರಂಗಗಳು ವ್ಯೋಮಸಮಯ ಅಥವಾ ತೆರಪು ಮತ್ತು ಸಮಯದ (ಅಥವಾ ವಕ್ರತೆಯ) ಚೌಕಟ್ಟಿನಲ್ಲಿರುವ ಕಲರವ–ತರಂಗಗಳು ಎನ್ನುವ ಅರ್ಥ ಇದೆ. ಹಾಗಾದರೆ ಈ ವ್ಯೋಮಸಮಯ ಅಥವಾ ತೆರಪು–ಸಮಯದ ವಕ್ರತೆ ಅಥವಾ ಬಾಗುವಿಕೆ ಎನ್ನುವುದರ ಅರ್ಥವೇನು?

ವ್ಯೋಮದಲ್ಲಿರುವ ಎರಡು ಸ್ಥಿರ ಬಿಂದುಗಳ ನಡುವಿನ ಅಂತರವನ್ನು, ವ್ಯೋಮಸಮಯದ ಬಾಗುವಿಕೆ ಅಥವಾ ವಕ್ರತೆ ಎಂದು ವ್ಯಾಖ್ಯಾನಿಸಲಾಗುತ್ತದೆ. ಐನ್‌ಸ್ಟೈನ್ ತನ್ನ ಲೆಕ್ಕಾಚಾರಗಳಲ್ಲಿ ಗಮನಿಸಿದ ಪ್ರಕಾರ, ಸ್ಥಿರ ಬಿಂದುಗಳ ನಡುವಿನ ಈ ಅಂತರವನ್ನು ಕ್ರಮಿಸಲು ಬೆಳಕಿನ ಕಿರಣವೊಂದಕ್ಕೆ ತಗಲುವ ಸಮಯವು, ಗುರುತ್ವಾಕರ್ಷಣ ಬಲವನ್ನು ಅವಲಂಬಿಸಿದ್ದು ಭಿನ್ನವಾಗಿರುತ್ತದೆ. ಯಾವ ಪ್ರದೇಶಗಳಲ್ಲಿ ಗುರುತ್ವಾಕರ್ಷಣ ಬಲವು ಬಹಳ ಪ್ರಬಲವಾಗಿರುತ್ತದೋ (ಉದಾಹರಣೆಗೆ, ಕೃಷ್ಣರಂಧ್ರಗಳಿಗೆ ಸಮೀಪವಾಗಿರುವ ಪ್ರದೇಶಗಳಲ್ಲಿ) ಅಂತಹ ಜಾಗಗಳಲ್ಲಿ ಬೆಳಕಿನ ಕಿರಣಗಳಿಗೆ ಒಂದು ನಿಗದಿತ ದೂರವನ್ನು ಕ್ರಮಿಸಲು ದುರ್ಬಲ ಗುರುತ್ವಾಕರ್ಷಣೆಯ ಬಲವಿರುವ ಪ್ರದೇಶಗಳಿಗಿಂತ ಬಹಳಷ್ಟು ಹೆಚ್ಚಿನ ಸಮಯ ಬೇಕಾಗುತ್ತದೆ (ಉದಾಹರಣೆಗೆ, ನಮ್ಮ ಭೂಮಿಯ ಹತ್ತಿರ). ವ್ಯೋಮಸಮಯ ವಕ್ರತೆ ಅಥವಾ ಬಾಗುವಿಕೆ, ಗುರುತ್ವಾಕರ್ಷಣೆಯ ಬಲದ ಉಪಸ್ಥಿತಿಯಲ್ಲಿ, ಗಡಿಯಾರಗಳು ನಡೆಯುವ ಲಯಬದ್ಧತೆಯ ಗತಿಯೆನ್ನಬಹುದು. ಕೃಷ್ಣರಂಧ್ರದ ಬಳಿ ಇರುವ ಒಂದು ಗಡಿಯಾರವು ಭೂಮಿಯ ಮೇಲಿರುವ ಅದೇ ರೀತಿಯ ಒಂದು ಗಡಿಯಾರಕ್ಕಿಂತಲೂ ಬಹಳ ನಿಧಾನಗತಿಯಲ್ಲಿ ತಿರುಗುತ್ತದೆ. ಕೇವಲ ಗಡಿಯಾರಗಳೇ ಅಲ್ಲ, ಕೃಷ್ಣರಂಧ್ರಗಳ ಬಳಿ ಜೀವಿಸುವ ಮನುಷ್ಯರ ವಯಸ್ಸು ,

ಇಂಗ್ಲಿಷ್ ಮೂಲ : **ಪ್ರೊ॥ ಬಿ. ಎಸ್. ಸತ್ಯಪ್ರಕಾಶ್** ✷ ಕನ್ನಡಕ್ಕೆ : **ಡಾ॥ ಉಮಾ ವೆಂಕಟೇಶ್**

# ಪತ್ತೆಯಾಗಿವೆ ಗುರುತ್ವಾಕರ್ಷಣ ತರಂಗಗಳು! ನಿಜವಾಯಿತು ಐನ್‌ಸ್ಟೈನ್‌ನ ೧೦೦ ವರ್ಷಗಳ ಹಿಂದಿನ ಭವಿಷ್ಯವಾಣಿ



ಭೂಮಿಯಲ್ಲಿರುವ ಅವರ ಸಂಬಂಧಿಗಳ ವಯಸ್ಸಿಗೆ ಹೋಲಿಸಿದರೆ, ಅವರಿಗಿಂತ ಕಡಿಮೆಯಿದ್ದು, ನಿಧಾನವಾಗಿ ಮುಪ್ಪಾಗುತ್ತಾರೆ.

ಗುರುತ್ವಾಕರ್ಷಣ ತರಂಗಗಳ ಪರಿಣಾಮವೂ, ಗುರುತ್ವಾಕರ್ಷಣೆಗಿಂತ ಭಿನ್ನವಾಗಿಲ್ಲ. ಅದನ್ನೇ ಲಿಗೊ (LIGO) ಸಹಭಾಗಿತ್ವ ಪ್ರಯೋಗದಲ್ಲಿ ಭೌತಶಾಸ್ತ್ರಜ್ಞರು ತಮ್ಮ ಪತ್ತೇಕಾರದ ಮೂಲಕ ಅದನ್ನು ಅಳತೆ ಮಾಡಲು ಪ್ರಯತ್ನಿಸಿ, ಅದರ ಮೂಲಕ ಗುರುತ್ವಾಕರ್ಷಣ ತರಂಗಗಳನ್ನು ಪತ್ತೆಹಚ್ಚುವ ಕಾರ್ಯದಲ್ಲಿ ಸಫಲರಾಗಿದ್ದಾರೆ. ಲಿಗೊ ಪತ್ತೇಕಾರದ ನಾಲ್ಕು ಕಿಲೋಮೀಟರ್ ತೋಳುಗಳಲ್ಲಿರುವ ಎರಡು ಕನ್ನಡಿಗಳನ್ನು, ವ್ಯೋಮ ಅಥವಾ ಬಾಹ್ಯಾಕಾಶದಲ್ಲಿರುವ ಎರಡು ಸ್ಥಿರ ಬಿಂದುಗಳೆಂದು ಊಹಿಸಿಕೊಳ್ಳಿ. ಗುರುತ್ವಾಕರ್ಷಣೆಯ ಗೈರುಹಾಜರಿಯಲ್ಲಿ ಈ ಎರಡು ಕನ್ನಡಿಗಳ ನಡುವಿನ ದೂರವನ್ನು, ಒಂದು ಬೆಳಕಿನ ಕಿರಣಕ್ಕೆ ಕ್ರಮಿಸಲು ಬೇಕಾಗುವ ಸಮಯ ನಿಗದಿತವಾಗಿರುತ್ತದೆ. ಗುರುತ್ವಾಕರ್ಷಣೆಯ ತರಂಗಗಳ ಉಪಸ್ಥಿತಿಯಲ್ಲಿ ಈ ದೂರ ಸ್ವಲ್ಪ ಬದಲಾಯಿಸುತ್ತದೆ ಹಾಗೂ ಒಂದು ತೋಳಿನಲ್ಲಿ ಬೆಳಕಿನ ಕಿರಣಕ್ಕೆ ಈ ದೂರವನ್ನು ಕ್ರಮಿಸಲು ಸ್ವಲ್ಪ ಹೆಚ್ಚಿನ ಸಮಯ ತೆಗೆದುಕೊಳ್ಳುತ್ತದೆ ಮತ್ತು ಇನ್ನೊಂದು ತೋಳಿನಲ್ಲಿ ಅದಕ್ಕಿಂತ ಸ್ವಲ್ಪ ಕಡಿಮೆ ಸಮಯ ತಗುಲುತ್ತದೆ. ಆದ್ದರಿಂದ ಲಿಗೊ ಪತ್ತೇಕಾರಗಳು ಗುರುತ್ವಾಕರ್ಷಣ ತರಂಗಗಳ ಇರುವಿಕೆಯನ್ನು ಪತ್ತೆಹಚ್ಚಲು ಈ ಎರಡು ಅವಧಿಗಳನ್ನು ಹೋಲಿಕೆ ಮಾಡಿನೋಡಿವೆ. ಈ ವಿವರಣೆ ಸರಳವಾಗಿ ಕಂಡರೂ ಪತ್ತೇಕಾರಗಳಲ್ಲಿರುವ ಎರಡು ಕನ್ನಡಿಗಳನ್ನು ಬಾಹ್ಯ ಪ್ರಪಂಚದ ಗದ್ದಲ ಗಲಭೆಗಳಿಂದ ಆದಷ್ಟೂ ಪ್ರತ್ಯೇಕವಾಗಿಟ್ಟು, ಅಲ್ಲಿ ಹಾಯ್ದುಹೋಗುವ ಗುರುತ್ವಾಕರ್ಷಣ ತರಂಗಗಳನ್ನು ಗ್ರಹಿಸುವಷ್ಟು ಅವುಗಳ ಸೂಕ್ಷ್ಮತೆಯನ್ನು ಕಾಪಾಡುವ ಕಾರ್ಯವು ದೊಡ್ಡ ಸವಾಲಿನ ಕಾರ್ಯವಾಗಿತ್ತು. ಆ ಸವಾಲನ್ನೇ ನಮ್ಮ ಭೌತವಿಜ್ಞಾನಿಗಳು ಯಶಸ್ವಿಯಾಗಿ ಎದುರಿಸಿ, ದುರ್ಬಲವಾದ ಈ ಗುರುತ್ವಾಕರ್ಷಣಾ ತರಂಗಗಳನ್ನು ಪತ್ತೆ ಹಚ್ಚಿದ್ದಾರೆ. ಈ ಪತ್ತೆಯಿಂದ ಗುರುತ್ವಾಕರ್ಷಣೆಯ ತರಂಗಗಳು ಅಸ್ತಿತ್ವದಲ್ಲಿವೆ ಎನ್ನುವುದು ಪ್ರಮಾಣೀಕೃತವಾಗಿದೆಯಲ್ಲದೆ, ಐನ್‌ಸ್ಟೈನ್ ೧೦೦ ವರ್ಷಗಳ ಹಿಂದೆ ತನ್ನ ಸಿದ್ಧಾಂತದಲ್ಲಿ ತೋರಿಸಿ ನುಡಿದ ಭವಿಷ್ಯವಾಣಿ ನಿಜವೆಂದು ಸಾಬೀತಾಗಿದೆ.

**ಈ ತರಂಗಗಳು ಉಗಮವಾದದ್ದಾರೂ ಎಲ್ಲಿ ?**

ನಮ್ಮಿಂದ ಬಹುದೂರದಲ್ಲಿರುವ ಮತ್ತೊಂದು ವಿಶ್ವದ ಮೂಲೆಯಲ್ಲೆಲ್ಲೋ, ಸುಮಾರು ೧.೩ ಶತಕೋಟಿ ಜ್ಯೋತಿರ್ವರ್ಷಗಳ ದೂರದಲ್ಲಿರುವ ಮಹಾವಿಪ್ಲವವೊಂದರಲ್ಲಿ ಉತ್ಪನ್ನವಾದ ಈ ತರಂಗಗಳನ್ನು ನಮ್ಮ ವಿಜ್ಞಾನಿಗಳು ಬಳಸಿದ ಪತ್ತೇಕಾರವು ಗ್ರಹಿಸಿದೆ. ಈ ಮಹಾವಿಪ್ಲವದ ಮೂಲವು ಎರಡು ವೇಗವಾಗಿ ಪರಿಭ್ರಮಿಸುವ ಕೃಷ್ಣರಂಧ್ರಗಳ ವಿಲೀನ ಪ್ರಕ್ರಿಯೆ ಎಂದು ತಿಳಿದುಬಂದಿದೆ. ಈ ಪ್ರಕ್ರಿಯೆಯಿಂದ ದೊರೆತಿರುವ ಸಂಕೇತವು ಒಂದು ಸೆಕೆಂಡಿನ ಐದನೆ ಒಂದು ಭಾಗದಷ್ಟು ಕಾಲ ಮಾತ್ರ ದೊರೆತಿದ್ದು, ಅದಕ್ಕೆ ಅಮೆರಿಕೆಯ ಲೂಸಿಯಾನಾ ರಾಜ್ಯದಲ್ಲಿರುವ, ಲಿವಿಂಗ್ಸ್ಟನ್ ಪತ್ತೇಕಾರದಿಂದ ವಾಷಿಂಗ್ಟನ್ ರಾಜ್ಯದ ಹಾನ್ಫೋರ್ಡ್ ಪತ್ತೇಕಾರಕ್ಕೆ ದಾಟಿಹೋಗಲು ಕೇವಲ ೭ ಮಿಲಿ ಸೆಕೆಂಡುಗಳ ಸಮಯ ತಗುಲಿದೆ. ಈ ಅನ್ವೇಷಣೆಯಲ್ಲಿ ಎರಡು ಬಹು ಮುಖ್ಯ ಅಂಶಗಳಿವೆ. ಅದರಲ್ಲಿ ಮೊದಲನೆಯದಾಗಿ, ಇದುವರೆಗೂ ನೇರವಾಗಿ ಯಾರೂ ವೀಕ್ಷಿಸದಿದ್ದ ಜೋಡಿ ಕೃಷ್ಣರಂಧ್ರಗಳನ್ನು ವೀಕ್ಷಿಸಲಾಗಿದೆ. ಎರಡನೆಯದಾಗಿ, ಎರಡು ಕೃಷ್ಣರಂಧ್ರಗಳು ವಿಲೀನವಾಗಿ ಹೊಸ ಕೃಷ್ಣರಂಧ್ರವೊಂದು ರಚಿತವಾಗುವ ಪ್ರಕ್ರಿಯೆಯನ್ನು ಮೊಟ್ಟಮೊದಲ ಬಾರಿಗೆ ಪತ್ತೆ ಹಚ್ಚಲಾಗಿದೆ. ಈ ಪ್ರಯೋಗದಲ್ಲಿ ನಿರತರಾದ ವಿಜ್ಞಾನಿಗಳ ನಿರ್ಣಯದ ಪ್ರಕಾರ, ಕೃಷ್ಣರಂಧ್ರಗಳು ವಿಲೀನವಾಗಿ ಹೊಸದಾದ ಭಾರಿ ಕೃಷ್ಣರಂಧ್ರವು ರಚನೆಯಾಗುವ ಅಂತಿಮ ಕ್ಷಣದ ಒಂದು ಭಾಗದಲ್ಲಿ ಈ ಗುರುತ್ವಾಕರ್ಷಣೆಯ ತರಂಗಗಳು ಉತ್ಪನ್ನವಾಗಿವೆ. ಈ ಪ್ರಯೋಗದ ಭೌತವಿಜ್ಞಾನಿಗಳು ಅಂದಾಜು ಮಾಡಿರುವ ಪ್ರಕಾರ, ಈ ಕೃಷ್ಣರಂಧ್ರಗಳ ದ್ರವ್ಯರಾಶಿಯು, ನಮ್ಮ ಸೂರ್ಯನ ದ್ರವ್ಯರಾಶಿಗಿಂತ ಸುಮಾರು ೨೯ ಮತ್ತು ೩೬ ಪಾಲು ಹೆಚ್ಚಾಗಿದ್ದು, ಇವುಗಳ ವಿಲೀನದ ನಂತರ ರಚಿತವಾಗಿರುವ ಕೃಷ್ಣರಂಧ್ರದ ದ್ರವ್ಯರಾಶಿ ನಮ್ಮ ಸೂರ್ಯನ ದ್ರವ್ಯರಾಶಿಗಿಂತ ೬೨ ಪಾಲು ಹೆಚ್ಚಾಗಿದೆ.



*ಡಾ॥ ಸಿ. ವಿ. ವಿಶ್ವೇಶ್ವರ ಈ ವಿಷಯದಲ್ಲಿ ಸಂಶೋಧನೆ ನಡೆಸಿದ ಭಾರತೀಯ ವಿಜ್ಞಾನಿ*

ಈ ಅನ್ವೇಷಣೆಯ ಫಲಿತಾಂಶಗಳು ವಿಜ್ಞಾನಿಗಳು ಐನ್‌ಸ್ಟೈನ್‌ನ ಸಾಮಾನ್ಯ ಸಾಪೇಕ್ಷತಾ ವಾದವನ್ನು ಹಿಂದೆಂದೂ ಸಾಧ್ಯವಾಗಿರದಂತಹ ರೀತಿಗಳಲ್ಲಿ ಒರೆಹಚ್ಚಿ ನೋಡಲು ಅವಕಾಶಮಾಡಿಕೊಟ್ಟಿವೆ. ಈ ಎರಡು ಕೃಷ್ಣರಂಧ್ರಗಳ ವಿಲೀನದ ಪ್ರಕ್ರಿಯೆಯಲ್ಲಿ ಬಿಡುಗಡೆಯಾಗಿರಬಹುದಾದ ಭಾರಿ ಪ್ರಮಾಣದ ಶಕ್ತಿ ಮತ್ತು ಅಂತಿಮ ಕ್ಷಣಗಳಲ್ಲಿ ಅದರಿಂದ ಉತ್ಪನ್ನವಾಗಿರುವ ಗುರುತ್ವಾಕರ್ಷಣೆಯ ತರಂಗಗಳಿಂದ ಹೊಮ್ಮಿರುವ ಪ್ರಭೆಯು, ನಮ್ಮ ಸಂಪೂರ್ಣ ವಿಶ್ವವು ಬೆಳಕಿನಲ್ಲಿ ಪ್ರಕಾಶಿಸಬಹುದಾದಷ್ಟು ತೇಜಸ್ಸಿಗೆ ೫೦ರಷ್ಟು ಹೆಚ್ಚಿನ ಪ್ರಭೆಯನ್ನು ಬೀರಿರಬೇಕು ಎಂದು ವಿಜ್ಞಾನಿಗಳು ಅಭಿಪ್ರಾಯಪಟ್ಟಿದ್ದಾರೆ. ಇದೊಂದು ಅಪೂರ್ವವಾದ ಪ್ರಕ್ರಿಯೆಯೇ ಸರಿ ! ಇದು ಮಾನವನ ಊಹೆಗೂ ಮೀರಿದ್ದಲ್ಲವೇ !

**ಈ ಸಂಶೋಧನೆಯ ಮಹತ್ವವೇನು ?**

ಪತ್ರಿಕಾ ವಲಯ ಮತ್ತು ಪ್ರಚಾರ ಮಾಧ್ಯಮದವರು ಈ ಸಂಶೋಧನೆಯನ್ನು, ೪೦೦ ವರ್ಷಗಳ ಹಿಂದೆ ಗೆಲಿಲಿಯೋ ತನ್ನ ದೂರದರ್ಶಕವನ್ನು ಗುರುಗ್ರಹದ ಉಪಗ್ರಹಗಳತ್ತ ಗುರಿಯಿಟ್ಟು ನೋಡಿದಾಗ ಸಂಭವಿಸಿದ ಪ್ರಗತಿಗೆ ಹೋಲಿಸಿ ಸ್ವಲ್ಪ ಉತ್ಪ್ರೇಕ್ಷಿಸಿದ್ದಾರೆ ಎನ್ನಬಹುದು. ಈ ಆವಿಷ್ಕಾರದ ಸತ್ಯಾಂಶವು, ಬಹುಶಃ ಉತ್ಪ್ರೇಕ್ಷೆಗಿಂತ ಬಹಳ ದೂರವೇನಿಲ್ಲ. ಮುಂದಿನ ಮೂರು ವರ್ಷಗಳಲ್ಲಿ ಲಿಗೊ ಪತ್ತೇಕಾರದ ಸೂಕ್ಷ್ಮಗ್ರಾಹಿತ್ವವನ್ನು ಉತ್ತಮಪಡಿಸಲಾಗುತ್ತದೆ, ಇದರ ಜೊತೆಗೆ ಸೇರ್ಪಡೆಯಾಗಲಿರುವ ಜಪಾನ್ ದೇಶದ ಕಾಗ್ರ, ಯೂರೋಪಿನ ವಿರ್ಗೋ ಮತ್ತು ಭಾರತದ ಲಿಗೊ–ಇಂಡಿಯಾ ಎಂಬ ಮೂರು ಹೊಸ ಶೋಧಕಗಳು ಪ್ರಸಕ್ತ ಪತ್ತೇಕಾರಕ್ಕಿಂತ ನಮ್ಮ ವಿಶ್ವದ ವೈಶಾಲ್ಯತೆಯ ಪರಿಮಾಣವನ್ನು ೩೦–೧೦೦ ಪಾಲು ಹೆಚ್ಚು ಸಮೀಕ್ಷಿಸುವ ಅವಕಾಶ ಮತ್ತು ಸಾಮರ್ಥ್ಯವನ್ನು ನಮ್ಮ ವಿಜ್ಞಾನಿಗಳಿಗೆ ನೀಡುತ್ತವೆ. ಸುಧಾರಿತಗೊಂಡ ಗುರುತ್ವಾಕರ್ಷಣ ತರಂಗಗಳ ಶೋಧಕಗಳ ಸಂಕೀರ್ಣ–ಜಾಲವ್ಯವಸ್ಥೆಯು ಪ್ರತಿ ದಿನವೂ ಈ ಮೇಲೆ ಹೆಸರಿಸಿದ ಕೃಷ್ಣರಂಧ್ರಗಳ ವಿಲೀನದಂತಹ ಒಂದು ಘಟನೆಯನ್ನು ಪತ್ತೆ ಮಾಡುವ ಸಾಧ್ಯತೆಗಳಿವೆ. ಇದರ ಜೊತೆಗೆ, ನ್ಯೂಟ್ರಾನ್ ನಕ್ಷತ್ರಗಳ ಸಂಘರ್ಷಣೆಗಳು, ಮಹಾನವ್ಯಗಳು (ಸೂಪರ್‌ನೋವಾ) ಹಾಗೂ ಇತರ ಸಮಾನರೀತಿಯ ಘಟನೆಗಳನ್ನು ಭೌತವಿಜ್ಞಾನಿಗಳು ವೀಕ್ಷಿಸಬಹುದಾದ ನಿರೀಕ್ಷೆಯಿದೆ. ಅಷ್ಟೇ ಅಲ್ಲದೆ, ನಮ್ಮ ವಿಜ್ಞಾನಿಗಳಿಗೆ ನಮ್ಮ ವಿಶ್ವದಲ್ಲಿರಬಹುದಾದ ವೈಪರೀತ್ಯ ಪರಿಸ್ಥಿತಿಗಳ ಬಗ್ಗೆ ಹೆಚ್ಚು ಆಳವಾಗಿ ಅಧ್ಯಯನ ನಡೆಸಲು ಸಹಾಯವಾಗುತ್ತದೆ. ಎಲ್ಲಕ್ಕಿಂತಲೂ ಪ್ರಮುಖವಾಗಿ, ಈ ಗುರುತ್ವಾಕರ್ಷಣೆಯ ತರಂಗಗಳು, ಮೂಲ ಭೌತಶಾಸ್ತ್ರ, ಖಭೌತಶಾಸ್ತ್ರ ಹಾಗೂ ವಿಶ್ವವಿಜ್ಞಾನಗಳ ಅಧ್ಯಯನದಲ್ಲಿ ಒಂದು ನೂತನ ಸಾಧನವಾಗುತ್ತದೆ ಎನ್ನಬಹುದು.

ಇದರ ಜೊತೆಗೆ, ಈ ಆವಿಷ್ಕಾರವು ಸಾಮಾಜಿಕವಾಗಿಯೂ ಮತ್ತು ಸಾಂಸ್ಕೃತಿಕವಾಗಿಯೂ ಒಂದು ಬಲವಾದ ಪ್ರಭಾವವನ್ನು ಬೀರುವ ಸಾಧ್ಯತೆಯಿದೆ. ಇಂದು ಚಾಲ್ತಿಯಲ್ಲಿರುವ ನಮ್ಮ ತಂತ್ರಜ್ಞಾನಗಳು ಕೇವಲ ಮೂಲಭೂತ ಭೌತಶಾಸ್ತ್ರದ ತತ್ವಗಳಿಗೆ ಸೀಮಿತವಾಗಿದೆ ಎನ್ನುವುದನ್ನು ಈ ಶೋಧನೆ ನಮಗೆ ಎತ್ತಿತೋರಿಸಿದೆ. ಆದ್ದರಿಂದ, ನಾವು ಈ ಎಲ್ಲೆಗಳನ್ನು ಮತ್ತಷ್ಟು ವಿಸ್ತರಿಸುತ್ತಾ ಮುನ್ನಡೆಯಬಹುದು. ಈ ಆವಿಷ್ಕಾರವು ವಿಜ್ಞಾನಕ್ಕೆ ಮತ್ತು ವಿಜ್ಞಾನಿಗಳು ಸಾಧಿಸಿರುವ ಒಂದು ಬೃಹತ್ ಸಾಧನೆಯಲ್ಲದೆ, ಈ ಪ್ರಯೋಗದಲ್ಲಿ ಭಾಗಿಯಾಗಿದ್ದ ಅನೇಕ ಇಂಜಿನಿಯರುಗಳು, ಗಣಕ ತಂತ್ರಜ್ಞಾನಿಗಳು ಮತ್ತು ವಸ್ತು–ವಿಜ್ಞಾನಿಗಳ ಪಾಲಿನ ಅಪೂರ್ವ ಯಶಸ್ಸಾಗಿದೆ. ಎಲ್ಲಕ್ಕೂ ಮೇಲಾಗಿ ಮುಂದಿನ ಪೀಳಿಗೆಯ ಯುವಕ, ಯುವತಿಯರಿಗೆ ವಿಜ್ಞಾನದಲ್ಲಿ ಭವಿಷ್ಯವನ್ನು ರೂಪಿಸಿ ಮುನ್ನಡೆಯಲು ಒಂದು ದೊಡ್ಡ ಪ್ರೇರಣೆಯೂ ಆಗಿದೆ. ವಿಜ್ಞಾನದಲ್ಲಿ ಪ್ರಗತಿಯ ನಡೆ ಸ್ವಲ್ಪ ನಿಧಾನವಾದರೂ, ಅದಕ್ಕೆ ಸಿಕ್ಕುವ ಫಲ ಮತ್ತು ಪುರಸ್ಕಾರಗಳು ಅಪರಿಮೇಯ. ಇದೊಂದು ಕೇವಲ ಬೌದ್ಧಿಕ ಕಸರತ್ತೇ ಅಲ್ಲ, ಒಂದು ದೊಡ್ಡ ಸಾಹಸ ಮತ್ತು ಯಾರೊಬ್ಬರೂ ತುಳಿಯದ ಹಾದಿಯಲ್ಲಿ ಪ್ರಯಾಣಿಸುವ ಒಂದು ಸುವರ್ಣ ಅವಕಾಶವೂ ಆಗಿದೆ.

ಇಂಗ್ಲಿಷ್ ಮೂಲ : **ಪ್ರೊ॥ ಬಿ. ಎಸ್. ಸತ್ಯಪ್ರಕಾಶ್**
ಭೌತಶಾಸ್ತ್ರ ಮತ್ತು ಖಗೋಳಶಾಸ್ತ್ರ ವಿಭಾಗ
ಕಾರ್ಡಿಫ್ ವಿಶ್ವವಿದ್ಯಾಲಯ, ದಿ ಪ್ಯಾರೇಡ್, ಕಾರ್ಡಿಫ್
ಸಿಎಫ್೨೪೩ಎಎ

**ಕನ್ನಡಕ್ಕೆ :** ಡಾ॥ ಉಮಾ ವೆಂಕಟೇಶ್

# ಬಂಜಾರನ್ ಜನಾಂಗದವರ ಬದುಕು

## ರೇಖಾ ಪಾಟೀಲ್

ಹಗಲು–ರಾತ್ರಿ, ಪುರುಸೊತ್ತಿಲ್ಲದೆ ಬದುಕಿನ ದಾರಿಯಲ್ಲಿ ಕಲ್ಲು–ಮುಳ್ಳಿದ್ದರೂ, ಗಡಿಯಾರದ ಮುಳ್ಳಿಗೆ ಸವಾಲೊಡ್ಡುತ್ತ, ಸಮಯ ಸಾಕಾಗದೆಂಬ ನಿಲುವಿನೊಂದಿಗೆ ಬದುಕಿನ ಅರ್ಥ ಕಳೆದುಕೊಂಡು ಮನಃಶಾಂತಿ, ಚೂರು ಪ್ರೀತಿಗಾಗಿ ಹಂಬಲಿಸಿ, ಬಿಡುವಿಲ್ಲದ ಬದುಕಲ್ಲಿ ಸಂಬಂಧಗಳನ್ನೇ ಮರೆತು, ತನಗಾಗಿ ತನ್ನವರಿಗಾಗಿ ಅಲ್ಪ–ಸ್ವಲ್ಪವೂ ಸಮಯ ನೀಡಲಾಗದೆ, ವಿವಿಧ ರೀತಿಯ ಕಾಯಿಲೆಗಳಿಗೆ ತುತ್ತಾಗಿ, ಆಯುಸ್ಸು ಮುಗಿಯುವ ಮುನ್ನ ಜೀವನಯಾತ್ರೆಯನ್ನು ಮುಗಿಸುವ, ನಾಗರಿಕರೆಂಬ ಪಟ್ಟ ಹೊತ್ತ ಸಮಾಜದಿಂದ ಬಹುದೂರದಲ್ಲಿ ಇದ್ದು, ನಿಸರ್ಗದ ಪ್ರಶಾಂತವಾದ ಮಡಿಲಲ್ಲಿ ತಮ್ಮದೇ ಆದ ನೆಮ್ಮದಿಯ ವಿಶಿಷ್ಟ ಬದುಕ ಕಟ್ಟಿಕೊಂಡವರು ಬಂಜಾರನ್ ಜನಾಂಗದವರು (ಲಂಬಾಣಿ ಜನ).

ನಮ್ಮೂರಿನಿಂದ ಕೆಲವೇ ಮೈಲು ದೂರದಲ್ಲಿರುವ ರಾಷ್ಟ್ರೀಯ ಹೆದ್ದಾರಿಗೆ ಹೊಂದಿಕೊಂಡಿರುವ ತಾಂಡಾದ ಶಾಲೆಯೊಂದರಲ್ಲಿ ನಾನು ಶಿಕ್ಷಕಿ. ಅಜ್ಜಿಯ ಊರಿನಿಂದ ಬಂದಿದ್ದ ನನಗೆ ಸುತ್ತಮುತ್ತಲ ಹಳ್ಳಿಗಳ ಬಗ್ಗೆ ಅಷ್ಟೊಂದು ಪರಿಚಯವಿರಲಿಲ್ಲ. 'ಬಂಜಾರನ್' ಎಂದಾಕ್ಷಣ ಮೊದಲಿಗೆ ಸ್ವಲ್ಪ ಭಯವಾಯಿತು. ಚಿಕ್ಕಂದಿನಲ್ಲಿ ನನ್ನಜ್ಜಿ ಮನೆಯಿಂದಾಚೆ ಹೋದರೆ, "ಯಾಡಿ ನಿನ್ನನ್ನು ಎತ್ತಿಕೊಂಡು ಅವರ ತಾಂಡಾಕ್ಕೆ ಕರೆದೊಯ್ದು ಕಷ್ಟ ಕೊಡುವಳು'' ಎಂದಿದ್ದು ನೆನಪಾಗಿ ಸಣ್ಣಗೆ ನಡುಗಿದ್ದೆ. ಅಜ್ಜಿಯ ತೋಟಕ್ಕೆ ಸುಗ್ಗಿಯ ಸಮಯದಲ್ಲಿ ಬರುತ್ತಿದ್ದ ಅವರ ವೇಷಭೂಷಣಗಳಲ್ಲಿ, ಭಾಷೆಗಳಲ್ಲಿ ವ್ಯತ್ಯಾಸವಿದ್ದುದನ್ನು ಕಂಡು ಹೆದರಿದ್ದೆ. ಆದರೆ ತಾಂಡಾಗೆ ಹೋದಾಗ ಅವರ ನಡತೆ ಕಂಡು ಮೂಕವಿಸ್ಮಿತಳಾದೆ.

ಹಬ್ಬಹರಿದಿನಗಳಲ್ಲಿ, ಸುಗ್ಗಿಯ ಕಾಲದಲ್ಲಿ ಮಾತ್ರ ಊರೊಳಗೆ ಬಂದು ಹೋಗುತ್ತಿದ್ದ ಲಂಬಾಣಿಗರು, ಹಾಗೆ ಬಂದಾಗ ಮನೆಯ ಜಗುಲಿಯ ಮುಂದೆ ಗುಂಪಿನಲ್ಲಿ ಬಂದು ವೃತ್ತಾಕಾರವಾಗಿ ನಿಂತುಕೊಂಡು 'ಯಾಡಿರೋsss ಬಾಪುರೋsss' ಎಂದೆಲ್ಲಾ ನಾವರಿಯದ ಅವರ ಭಾಷೆಯಲ್ಲಿ ಹಾಡುತ್ತಾ, ಅದರೊಂದಿಗೆ ತಾಳವೆಂಬಂತೆ ಕೈಬಳೆ–ಕಾಲ್ಗೆಜ್ಜೆಗಳನ್ನು ಧ್ವನಿಸುತ್ತಾ, ಕುಣಿಯುತ್ತಾ ಹೊಸಬೆಳೆಯ ದಾನವನ್ನು, ಹಬ್ಬದಡುಗೆಯನ್ನು ತೆಗೆದುಕೊಂಡು ಒಳ್ಳೆಯದಾಗಲಿ ಎಂದು ಹಾರೈಸಿ ಮುನ್ನಡೆಯುತ್ತಿದ್ದರು. ಇದನ್ನು ಅವರು ಸಸಿ ಹಬ್ಬವೆಂದು ಕರೆಯುತ್ತಾರೆ.

ಕಾಡುಮೇಡುಗಳಲ್ಲಿ ಮತ್ತು ಊರಿನಿಂದ ದೂರದಲ್ಲಿ ತಂಡತಂಡವಾಗಿ (ಗುಂಪಾಗಿ) ವಾಸಿಸುವ ಜನ ಇವರಾದ್ದರಿಂದ ಇವರು ವಾಸ ಮಾಡುವ ಸ್ಥಳವನ್ನು 'ತಾಂಡಾ' ಎಂದು ಕರೆಯುತ್ತಾರೆ. ಇವರು ಹೀಗೆ ಊರಿನಿಂದ ದೂರವಿರಲು ಒಂದು ಕಾರಣ ಇದೆಯಂತೆ. ಅದಕ್ಕೆ ಪೌರಾಣಿಕ ಹಿನ್ನೆಲೆ ಇದೆ ಎಂದು ಹೇಳುತ್ತಾರೆ. ಅವರ ಪ್ರಕಾರ ಈಗ ಊರಲ್ಲಿರುವ 'ಶೇಟ್‌ಜೀ' ಎಂದು ಕರೆಯಿಸಿಕೊಳ್ಳುವ 'ಗುಜ್ಜರು' ಅವರದೇ ಜನಾಂಗದವರಂತೆ ಇವರಿಬ್ಬರ ನಡುವೆ ಒಂದೊಮ್ಮೆ ವಾಗ್ವಾದ ಶುರುವಾದಾಗ ಇಬ್ಬರೂ ಸೇರಿ ಒಂದು ಒಪ್ಪಂದ ಮಾಡಿಕೊಂಡರಂತೆ. ಅದರಂತೆ ಸಗಣಿಯನ್ನು ತಿಂದವರು ಊರಲ್ಲಿ ಉಳಿಯುವುದು, ಸಜ್ಜಕಾ (ರವೆಯಿಂದ ಮಾಡಿದ ಸಿಹಿ ಕಜ್ಜಾಯ) ತಿಂದವರು ಊರಾಚೆ ಕಾಡಿಗೆ ಹೋಗುವುದು ರೂಢಿಗೆ ಬಂದಿತಂತೆ. ಪಶುಸಂಗೋಪನೆ, ಬೇಸಾಯ, ಮಸಾಲೆ ಪದಾರ್ಥದ ಮಾರಾಟ ಮತ್ತು ಸಾಗಣೆಯನ್ನು ಮೂಲ ಕಸುಬನ್ನಾಗಿ ಮಾಡಿಕೊಂಡಿದ್ದ ಪಂಗಡದ ಗಟ್ಟಿಗರು ಸಜ್ಜಕವನ್ನು ಇಷ್ಟ ಪಟ್ಟು ತಿಂದುಕೊಂಡರಂತೆ, ಆಗ ಅವರೆಲ್ಲ ಊರಾಚೆ ಬಂದರಂತೆ. ಹಾಗೆ ಬಂದ ಗುಂಪುಗಳೇ ಇಂದಿನ "ತಾಂಡೇರ್" ತಾಂಡಾದವರು.

ಇವರು ಗಟ್ಟಿಗರು. ಊರಲ್ಲಿ ಇರುವವರು ತುಂಬ ನಾಜೂಕಾದ್ದರಿಂದ ಅವರು ಉಪಜೀವನಕ್ಕಾಗಿ ಬೇಸಾಯವನ್ನು ಅವಲಂಬಿಸದೆ ವ್ಯಾಪಾರವನ್ನು ಅವಲಂಬಿಸಿದರು. ಆದ್ದರಿಂದ ವ್ಯಾಪಾರ ಅರಸಿಕೊಂಡು ಊರಿಂದ ಊರಿಗೆ, ದೇಶದಿಂದ ದೇಶಕ್ಕೆ ಅಲೆಯುತ್ತಾ ಬಂದರು.

ಇಂದು ನಮ್ಮ ದೇಶದಲ್ಲೇ ಅಲ್ಲದೆ, ಕೆಲವು ವಿದ್ವಾಂಸರ ಪ್ರಕಾರ, ೫೬ ದೇಶಗಳಲ್ಲಿ ಸುಮಾರು ಅದರರ್ಧದಷ್ಟು ಸಂಖ್ಯೆಯಲ್ಲಿ ಈ ಲಂಬಾಣಿಗರಿದ್ದಾರೆ.



ವಿದೇಶಿ ಲಂಬಾಣಿಗರಿಗೂ ಭಾರತದ ಲಂಬಾಣಿಗರಿಗೂ ಉಡುಗೆ–ತೊಡುಗೆಗಳಲ್ಲಿ ಭೇದವಿದ್ದರೂ, ಮಾತು, ಹಾಡು, ಕುಣಿತ, ಕಥೆ, ಪಂಚಾಯತಿ, ಸಾಂಸ್ಕೃತಿಕ ವಿಚಾರಗಳಲ್ಲಿ ಸಾಕಷ್ಟು ಸಾಮ್ಯವಿದೆ.

ಬೇಟೆ ಪ್ರಿಯರಾದ ಬಂಜಾರನ್ ಪುರುಷರು, ಕಾಡುಪ್ರಾಣಿಗಳನ್ನು ಬೇಟೆಯಾಡಿ ಅವುಗಳ ಶೃಂಗ, ದಂತ, ಚರ್ಮಗಳಿಂದ ಪೋಷಾಕು ತಯಾರಿಸಿ ಧರಿಸುತ್ತಿದ್ದರು. ಇವರ ಈ ಪೋಷಾಕಿನಿಂದ ಕಾಡುಮೃಗಗಳು ಹೆದರಿ ಓಡಿಹೋಗುತ್ತಿದ್ದವಂತೆ. ಬೇಸಾಯ, ಪಶುಸಂಗೋಪನೆಯ ಜೊತೆಗೆ ಇವರು ಕಟ್ಟಿಗೆ ಮತ್ತು ಮಸಾಲೆ ಪದಾರ್ಥಗಳು, ಕಾಡಿನ ಜೇನು, ಮುಂತಾದವುಗಳನ್ನು ಊರ ಜನತೆಗೆ ಮಾರಿ ಉಪಜೀವನ ಸಾಗಿಸುತ್ತಿದ್ದರು. ಕಟ್ಟಿಗೆ ಸೇರಿಸಲು ಅಥವಾ ಜೇನು ಸಂಗ್ರಹಿಸಲು ಕಾಡಿನಲ್ಲಿ ಅಲೆಯುವಾಗ ಕಾಡುಮೃಗಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು, ಸ್ತ್ರೀಯರು ತಮ್ಮ ಉಡುಗೆಗಳ ಮೇಲೆ ಗಾಜಿನ ಬಿಲ್ಲೆಗಳನ್ನು ಅಂಟಿಸುತ್ತಿದ್ದರು. ಇದರಿಂದ ಕ್ರೂರಮೃಗಗಳು ತಮ್ಮದೇ ಪ್ರತಿಬಿಂಬಕ್ಕೆ ಹೆದರಿ ಓಡಿಹೋಗುತ್ತಿದ್ದವು. ಈ ಪದ್ಧತಿ ಇನ್ನೂ ಮುಂದುವರಿದುಕೊಂಡು ಬಂದಿದೆಯಾದರೂ ಸ್ವಲ್ಪ ಮಾರ್ಪಾಡು ಗಳಾಗಿವೆ. ಬಂಜಾರನ್ ಹೆಂಗಳೆಯರು ಆಭರಣ ಪ್ರಿಯರು. ಅವರನ್ನು ನೋಡಲು ಎರಡು ಕಂಗಳು ಸಾಲದು.

ಅವರ ಉಡುಗೆ–ತೊಡುಗೆಯ ವಿಷಯಕ್ಕೆ ಬಂದಾಗ ನೀರೆಯ ಪಾದಕ್ಕೆ ಅಪ್ಪಿಕೊಂಡಂತಿರುವ ಕಸ್, ಝೂಂಜರಿ, ಕಾಲಿನ ಮಧ್ಯದ ಬೆರಳುಗಳಿಗೆ ಬಿಚವಾ ಚಟಕಿ, ಮೃದುವಾದ ಕೋಮಲ ಕೈ ಬೆರಳುಗಳಿಗೆ ಬೆಳ್ಳಿ ನಾಣ್ಯ ಬೆಸೆದು ಮಾಡಿರುವ ವಿಂಟಿ ಚಾಲಾ ವಿಂಟಿ, ಹುಬ್ಬುಗಳ ಮಧ್ಯೆ ಟಿಕಿಯಾ, ಮೂಗಿನ ತುದಿಯಲ್ಲಿ ಭೂರಿಯಾ, ಕಿವಿಯಲ್ಲಿರುವ ದೊಡ್ಡ ಓಲೆಗಳು, ಕತ್ತನ್ನು ತುಂಬಿಕೊಂಡಿರುವ ಬಣ್ಣ ಬಣ್ಣದ ಮಣಿಗಳ ಹಾರ, ಕರಿಮಣಿ ಸರ, ತೋಳುಗಳಲ್ಲಿರುವ ಕಸೋಟಿಯಾ, ಮುಂಗುರುಳಿಗೆ ಇಳಿಬಿಟ್ಟ ಘಗರಿ, ತಲೆಯ ತುರುಬಿಗೆ ಅಂಟಿಗೆ ಟೋಪ, ಕವಡಿ ಸರ, ಉಣ್ಣೆಯ ಗೊಂಡೆ ಮತ್ತು ಕವಡೆಯ ಚೋಕಡಿ, ಕಾಂಚಳಿ (ಕುಪ್ಪಸ), ಫೇಟಿಯಾ (ಲಂಗ), ಲೇಪೋ (ಸೊಂಟಪಟ್ಟಿ), ಕಾಳೋ ಫೇರೋ (ಕರಿಬಟ್ಟೆ) ರಾತಡೋ ಛಾಂಟಿಯಾ (ಕೆಂಪು ಬಟ್ಟೆ), ಪಾಟ ಪೀತಾಂಬರ (ಹಳದಿ ಬಟ್ಟೆ ಅಥವಾ ಪೀತಾಂಬರ), ಲಾವಣಿ (ಉದ್ದಪಟ್ಟಿ), ಛಾಂಟಿಯಾ (ಮೇಲು ಹೊದಿಕೆ), ಘುಂಗಟೋ (ಮೇಲು ಹೊದಿಕೆ), ಪಾಂಚಫೂಲ (ಹೊದಿಕೆಯ ಮೇಲ್ಭಾಗದಲ್ಲಿ ಎರಡೂ ಕಡೆಗಳಲ್ಲಿ ಕಸೂತಿ ಮಾಡಿ ಗೊಂಡೆ ಕಟ್ಟಿರುತ್ತಾರೆ), ಅಡಭೇಡಾ (ಕಲಾತ್ಮಕ ಕಸೂತಿ ತೆಗೆದು, ಖಿಲಣ, ಬೆಳ್ಳಿ, ಬಿಳಿ ಬಳ್ಳಿ, ಗೊಂಡೆ, ಗೆಜ್ಜೆಸರ, ಕವಡೆಗಳು, ಸಣ್ಣ ದಂತದ ಚೂಡಿ ಮತ್ತು ಬಲಿಯಾ ಹಾಕಿ ಮಾಡಿದ ಉಡುಗೆ). ... ಹೀಗೆ ವಿವಿಧ ವಿನ್ಯಾಸದ ಉಡುಗೆಗಳನ್ನು ತೊಡುತ್ತಾರೆ. ಇವರೊಮ್ಮೆ ತಲೆ ಬಾಚಿಕೊಂಡು ಕಲಾತ್ಮಕವಾಗಿ ಜಡೆ ಹೆಣೆದು ಅದಕ್ಕೆ ಆಭರಣ ತೊಡಿಸಿದರೆ ಮುಗಿಯಿತು. ತಿಂಗಳಾನು ಗಟ್ಟಲೆ ಅದರ ಅಂದ ಚೆಂದ ಕಾಪಾಡಿಕೊಂಡು ಬರುವುದು ಇವರಿಗೆ ಕರಗತವಾಗಿದೆ.





ನಿಸರ್ಗದ ಮಡಿಲಲ್ಲಿರುವ ಬಂಜಾರನ್ ನೀರೆಯರಿಗೆ ಕೆಂಪು ಬಣ್ಣ ಪಂಚಪ್ರಾಣ. ತಾವು ತೊಡುವ ಬಟ್ಟೆಗಳಲ್ಲಿ ಪ್ರಮುಖವಾಗಿ ಕೆಂಪು ಬಣ್ಣದ ಬಟ್ಟೆಗಳನ್ನು ಉಪಯೋಗಿಸುತ್ತಾರೆ. ಅಲ್ಲದೆ ಸೂಜಿ, ದಾರ, ಮುತ್ತು ಇವರಿಗೆ ಒಡನಾಡಿಗಳು. ಬೇಸಾಯ, ಪಶುಸಂಗೋಪನೆ ಮಾಡುವ ಇವರು ದನಕರುಗಳನ್ನು ಮೇಯಿಸುವಾಗ, ಮನೆಗೆಲಸ ಮುಗಿದ ಮೇಲೆ, ಇಲ್ಲವೆ ತೋಟದ ಕೆಲಸ ಮುಗಿದ ಮೇಲೆ ಕಿಂಚಿತ್ತೂ ಸಮಯ ಹಾಳು ಮಾಡದೆ ವಿವಿಧ ಬಣ್ಣದ ದಾರಗಳಿಂದ ಬಾಳಿಗಾಡ್ರೆ, ಸಾದಾಗಾಡ್ರೆ, ಕಟೇರಿಯಾ, ಚಕಚುನಿ, ಕೋತರಾರನಕ (ನಾಯಿ ಉಗುರು), ಪಿಸಾರ ಘರ್ (ನಾಣ್ಯಗಳ ಮನೆ), ಟೇಕಾ, ಕಟ್ಟಾ ಧೋಳಮಾಕಿ (ಬಿಳಿ ನೊಣ), ರೇಲಾಮಾಕಿ (ಸಾಲು ನೊಣಗಳು) ಹೀಗೆ ಬಗೆಬಗೆಯ ಸುಂದರವಾದ ಕಸೂತಿಗಳನ್ನು ಹೆಣೆಯುತ್ತಾರೆ.

ತಾಂಡಾದ ನಿವಾಸಿಗಳಿಗೆ ಆರಾಧ್ಯ ದೈವ ಸೇವಾಲಾಲ್, ಮೀನಾದೇವಿ, ಅಂಬಾ ಭವಾನಿ ಇತ್ಯಾದಿ. ಇವರಲ್ಲಿ ಕೆಲವು ಬಾರಿ ಏನಾದರೂ ಅನಿಷ್ಟ ಸಂಘಟಿಸಿದರೆ, ತಾಂಡಾದ ಜನರಿಗೆ ದೊಡ್ಡ ಕಾಯಿಲೆಗಳು ಬಂದರೆ, ದೇವಿಯ ಕೋಪವೇ ಕಾರಣ ಎಂದೂ ತಿಳಿದು ಬಲಿ ಕೊಡುತ್ತಾರೆ. ಬಲಿ ಕೊಡುವಾಗ ತಮ್ಮ ಬಂಧು ಬಾಂಧವರೊಂದಿಗೆ ಸೇರಿ ಪೂಜೆಗೈದು ನಂತರ ಬಲಿ ಕೊಟ್ಟು ಎಲ್ಲರೂ ಒಟ್ಟಿಗೆ ಸೇರಿ ಊಟ ಮಾಡುತ್ತಾರೆ.

ತಾಂಡೇರ್‌ರಲ್ಲಿ (ಬಂಜಾರನ್) ಹೆಣ್ಣು ಮಗು ಜನಿಸಿದಾಗ, ಐದನೇ ದಿನಕ್ಕೆ ದಳವಾ ಧೋಕಾಯೇರೋ (ದೇವರಿಗೆ ನಮಸ್ಕರಿಸುವುದು) ಆಚರಿಸುತ್ತಾರೆ. ಈ ಸಂದರ್ಭದಲ್ಲಿ, ಗೋಧಿ ಕಾಳುಗಳಿಂದ ಪೋಣಿಸಿದ ಸರವನ್ನು ಮಗುವಿನ ಕೈಗೆ ಕಟ್ಟಿರುತ್ತಾರೆ. ಅದರ ಮೇಲೆ ಹದಿನೈದು ದಿನಗಳವರೆಗೆ ತೆಳುವಾದ ಬಟ್ಟೆ ಹೊದಿಸಿ ನಂತರ ಛಾಂಟಿಯಾ ತಂದು ಮೇಕಳ್ಯಾ (ಅಂಗಿ) ಮತ್ತು ಟೋಪಿ ಉಡಿಸುತ್ತಾರೆ. ಕೈಯಲ್ಲಿ ಉಣ್ಣೆಯ ಬಳೆ, ಬಿಳಿ ಲಾಳ್ದಿ (ಮಣಿ ಸರ), ಪಾರಿ (ತಗಡು), ಕಾಲಲ್ಲಿ ನೀಲಿಮಣಿ ಸರ ಹಾಕುತ್ತಾರೆ. ಇನ್ನು ಮೂರು ವರ್ಷದಿಂದ ಋತುಮತಿ ಆಗುವವರೆಗೆ ಘಗ್ಗರಿ–ಖಲಿಯಾ ಉಡುತ್ತಾರೆ, ಋತುಮತಿಯಾಗುವ ಮುನ್ನ ಮೈಮೇಲೆ ಹಚ್ಚೆ ಹುಯ್ಯಿಸಿಕೊಳ್ಳುತ್ತಾರೆ. ತಲೆಗೂದಲನ್ನು ಹಿಂಬದಿಯಾಗಿ ತುರುಬು ಕಟ್ಟಿ , ಮೂಗಿಗೆ ಮೂಗುತಿ, ಕಿವಿಯಲ್ಲಿ ಓಲೆ, ಕೊರಳಲ್ಲಿ ವಿವಿಧ ಬಣ್ಣದ ಮಣಿಗಳ ಹಾರ, ಕೈಯಲ್ಲಿ ಬಳೆ, ಕಾಲಲ್ಲಿ ಝೂಂಜರಾ, ಹಾಕುತ್ತಾರೆ.

ಈ ಪಂಗಡದಲ್ಲಿ ಹೆಣ್ಣು ಋತುಮತಿಯಾದಾಗ ಅವಳಿಗೆ ಮನೆಯ ಹೊರಗೆ ತೆಂಗಿನ ಚಪ್ಪರ ಹಾಕಿ ಐದು ದಿನಗಳ ಕಾಲ ಸೂತಕವೆಂದು ಅವಳಿಗೆ ತಟ್ಟೆ, ಲೋಟ, ಹೊದೆಯಲು ಹಾಸಿಗೆ ಕೊಟ್ಟು ಪ್ರತ್ಯೇಕವಾಗಿ ಇರಿಸುತ್ತಾರೆ. ಐದನೆಯ ದಿನ ಗೋ ಮೂತ್ರ ಬೆರೆಸಿದ ನೀರಿನಿಂದ ಸ್ನಾನ ಮಾಡಿಸಿ ಮನೆಯೊಳಗೆ ಕರೆದುಕೊಳ್ಳುತ್ತಾರೆ.

ಇವರು ಕವಡೆಗಳನ್ನು ಲಕ್ಷ್ಮೀ ಸ್ವರೂಪವೆಂದು ಪೂಜಿಸುತ್ತಾರೆ. ಹೀಗೆ ಕವಡೆ ಗಳನ್ನು ಪೂಜಿಸಲು ಕಾರಣ ಕೇಳಿದಾಗ, ಹಿಂದೆ ಗಂಡಸರು ಕುಡುಕರಾಗಿದ್ದು, ತಮ್ಮ ಗಂಡಂದಿರ ಲೆಕ್ಕ–ಪತ್ರ ವ್ಯವಹಾರಗಳನ್ನು ನೋಡಿಕೊಳ್ಳಲು ಅವಿದ್ಯಾವಂತರಾದ ಮಹಿಳೆಯರು ಕವಡೆಗಳನ್ನು ಜೋಡಿಸಿ ಸರಗಳಂತೆ ಹಾಕುವುದರ ಮೂಲಕ ಲೆಕ್ಕ ಮಾಡುತ್ತಿದ್ದರೆಂದು ಅದಕ್ಕಾಗಿ ಅವರು ಅದನ್ನು ಪೂಜ್ಯ ಭಾವನೆಯಿಂದ ಧರಿಸುತ್ತಾರೆಂದು ತಿಳಿದುಬಂತು.

ಇನ್ನು ಮದುವೆಯ ವಿಚಾರ ಬಂದಾಗ ಇವರು ಹೆಣ್ಣಿನ ಮನೆಯ ಮುಂದೆ ಅಕ್ಷತೆ ಹಾಕುತ್ತಾರೆ. ಅಕ್ಷತೆ ಮುಗಿದು ಮದುವಣಗಿತ್ತಿಯ ದಿಬ್ಬಣ ಕಳಿಸುವ ಮುಂಚೆ ಮನೆಯ ಮುಂದೆ ಕಂಟ್ಲೆತ್ತು ತಂದು ನಿಲ್ಲಿಸುತ್ತಾರೆ. ಮದುವಣಗಿತ್ತಿಯು ಅದರ

ಮೇಲೆ ನಿಂತು ಎರಡೂ ಕೈಗಳನ್ನು ಮೇಲೆತ್ತಿಕೊಂಡು ಬಲಗೈಯಿಂದ “ಅಡಭೇಡಾ” ಹಿಡಿದು ಬಂಧು–ಬಳಗದ ಕಡೆ ಕೈ ಬೀಸುತ್ತಾ ಹವೇಲಿ (ಗುಣಗಾನ) ಮಾಡುತ್ತಾಳೆ. ಮದುವೆಯ ಬಳಿಕ ಸುಮಾರು ದಿನಗಳ ಕಾಲ ಕನಿಷ್ಠ ಒಂದು ತಿಂಗಳವರೆಗೆ ಮದುಮಗನಿಗೆ ಪೌಷ್ಟಿಕ ಆಹಾರ, ಮಾಂಸಾಹಾರ ಇತ್ಯಾದಿ ಉಣಿಸಿ (ಮೇಯಿಸುವ) ಅಂದರೆ ಅವನಿಗೆ ಚೆನ್ನಾಗಿ ಉಣ್ಣಿಸಿ ತಿನ್ನಿಸಿ ನಂತರ ತಮ್ಮ ಮಗಳನ್ನು ಆತನೊಂದಿಗೆ ಕಳುಹಿಸುತ್ತಾರೆ. ಮದುವೆಯಾಗಿ ಹೋದ ಹೆಣ್ಣು ತವರಿಗೆ ದೂರ. ಆಕೆ ಯಾವುದೇ ರೀತಿಯಿಂದ ತವರಿನ ಸಂಪರ್ಕ ಹೊಂದಿರಲಾರಳು. ಇದು ಅವರ ನಿಯಮ.

ಬಂಜಾರನ್ ಸಮುದಾಯದವರು ಕಟ್ಟಾಸಂಪ್ರದಾಯ ವಾದಿಗಳು. ಇವರು ಸಂಪ್ರದಾಯವನ್ನು ಅಷ್ಟು ಬೇಗನೆ ಮುರಿಯುವುದಿಲ್ಲ. ಒಂದು ದಿನ ನಾನು ಶಾಲೆಯಿಂದ ಮನೆಗೆ ಹೊರಟಾಗ ತಾಂಡಾದಲ್ಲಿ ಪಂಚಾಯಿತಿ ಕಟ್ಟೆಯಲ್ಲಿ ಪಂಚಾಯಿತಿ ನಡೆಯುತ್ತಿತ್ತು. ಪಂಚರು ಕೊಡುವ ತೀರ್ಪು ಇಲ್ಲಿ ಅಂತಿಮ. ಅಲ್ಲಿ ತಲೆ ತಗ್ಗಿಸಿ ನೆಲ ನೋಡುತ್ತಾ ನಿಂತಿದ್ದ ಮಧ್ಯ ವಯಸ್ಕ ಹೆಣ್ಣುಮಗಳ ಕಡೆ ಕೈ ತೋರಿಸಿ ಹೇಳುತ್ತಿದ್ದುದನ್ನು ಕೇಳಿಸಿಕೊಂಡೆ. ತಾಂಡಾಗೆ ಹೋಗಲು ಪ್ರಾರಂಭಿಸಿ ಸುಮಾರು ಆರು ತಿಂಗಳು ಕಳೆದಿದ್ದರಿಂದ ಅನ್ಯ ಭಾಷೆ ಅರಿಯದ ಅವರೊಂದಿಗೆ, ಅವರ ಭಾಷೆಯನ್ನು ಕಲಿತಿದ್ದ ನನಗೆ ಅರ್ಥವಾಗುತ್ತಿತ್ತು. ಆ ಹೆಣ್ಣುಮಗಳು ತಲೆಯ ಮೇಲಿನ ಹೊದಿಕೆಯನ್ನು ತೆಗೆದಿದ್ದಕ್ಕೆ ಅವಳನ್ನು “ಉಗಡಿ ಕಾಂಯಿ ಒಗಾಡ ಹಿಂಸರಿ (ಲಜ್ಜೆಗೆಟ್ಟವಳು, ಸೆರಗಿಲ್ಲದೆ ತಿರುಗುತ್ತಾಳೆ) ಎಂದು ಗದರುತ್ತಿದ್ದರು. ಹೆಣ್ಣುಮಕ್ಕಳು ಸ್ನಾನ ಮಾಡುವಾಗ ಮತ್ತು ಮಲಗುವಾಗ ಬಿಟ್ಟರೆ ಮತ್ತೆ ಯಾವ ಕಾರಣಕ್ಕಾಗಿಯೂ ಸೆರಗನ್ನು ತೆಗೆಯುವಂತಿಲ್ಲ. ಅದು ಅವರಿಗೆ ಗೌರವದ ಸಂಕೇತ.

ಇವರು ತುಂಬ ಶಕ್ತಿವಂತರು. ಸಮಾಜದಲ್ಲಿ ಯಾರಲ್ಲಿಯೂ ಕೈಚಾಚದೆ ಅತ್ಯಂತ ಪ್ರಾಮಾಣಿಕವಾಗಿ ಹಾಗೂ ನಿಷ್ಠೆಯಿಂದ ಜೀವಿಸುತ್ತಾರೆ. ಸ್ವಾಭಿಮಾನಿಗಳಾದ ಇವರು ಭಿಕ್ಷೆ ಬೇಡುವುದು ತಮ್ಮ ಧರ್ಮಕ್ಕೆ ವಿರುದ್ಧವೆಂದು ಬಲವಾಗಿ ನಂಬಿದ್ದಾರೆ. ದೃಢಕಾಯವುಳ್ಳವರೂ ಆಗಿರುವುದರಿಂದ ಎಂಥ ಕೆಲಸಕ್ಕೂ ಕುಗ್ಗಿದವರಲ್ಲ. ಹೆಚ್ಚಾಗಿ ಗುಡ್ಡಗಾಡು ಪ್ರದೇಶಗಳಲ್ಲಿ ಊರಾಚೆ, ಗುಂಪುಗಳನ್ನು ಮಾಡಿಕೊಂಡು ವಾಸಿಸುತ್ತಾರೆ. ಇವರಲ್ಲಿ ಸಸ್ಯಾಹಾರಿಗಳೂ ಇದ್ದಾರೆ, ಮಾಂಸಾಹಾರಿಗಳೂ ಇದ್ದಾರೆ. ಮಾಂಸಾಹಾರದ ಅಡುಗೆ ತಯಾರಿಸುವುದರಲ್ಲಿ ನಿಪುಣರು. ಕುರಿ, ಮೇಕೆಗಳ ಕರುಳಿನಿಂದ ತಯಾರಿಸುವ ‘ಸಳೋಯಿ’ ಎಂಬ ವಿಶಿಷ್ಟ ಪದಾರ್ಥ ಬಲು ರುಚಿ. ಇದು ಲಂಬಾಣಿಗರನ್ನು ಬಿಟ್ಟು ಬೇರೆ ಯಾವ ಜನಾಂಗದವರೂ ತಯಾರಿಸುವುದಿಲ್ಲ. ಇವರು ಕೊಳೆತ ಹಣ್ಣುಗಳು ಮತ್ತು ಹಳೆಯ ಬೆಲ್ಲವನ್ನು ಬಳಸಿ ಹಾಗೂ ಈಚಲ ಮರದಿಂದ ಮದ್ಯವನ್ನು ಸ್ವತಃ ತಯಾರಿಸಿ ಕುಡಿಯುತ್ತಾರೆ. ಹೆಣ್ಣುಮಕ್ಕಳು ಸಹ ಹಬ್ಬ–ಹರಿದಿನಗಳಲ್ಲಿ ಒಟ್ಟಾಗಿ ಸೇರಿ ಕುಣಿತ ಮತ್ತು ಕುಡಿತದಲ್ಲಿ ಭಾಗಿಯಾಗುತ್ತಾರೆ. ಅತಿಥಿಗಳನ್ನು ಸಂತುಷ್ಟಗೊಳಿಸಿದರೆ ದೇವರು ಸಂತುಷ್ಟನಾಗುತ್ತಾನೆ ಎಂಬ ಭಾವನೆ ಹೊಂದಿದ ಇವರು ‘ಅತಿಥಿ ದೇವೋ ಭವ’ ನೀತಿಯನ್ನು ಪಾಲಿಸುತ್ತಾರೆ.

ಮೃದು ಮನಸ್ಸಿನ ಕಠಿಣ ದೃಢಕಾಯ ಹೊಂದಿದ ಸಾಹಸ ಜೀವಿಗಳು ತಾಂಡೇರರು (ಬಂಜಾರನ್ ಜನರು). ಅವರು ಸೇವಾಲಾಲ್‌ರ ಕುರಿತಾಗಿ ಹಾಡುವ ಒಂದು ತುಣುಕು ಇನ್ನೂ ನನ್ನ ಕಿವಿಗಳಲ್ಲಿ ಮಾರ್ದನಿಸುತ್ತದೆ. “ಅವತಾರ್ ಕಳೋ ಕೋನಿ ತಾರೋ ದುನಿಯಾಮಯಿ ನಮ ಚಲಾರೋ, ಪೆಲೋ ಅವತಾರ ಧರಣ ಗಾಮೇಮ ದತ್ತರಾಜಾ ಗವಳಿ ಘರೇಮ ಓ ಸತ್ಯವತಿರ ಉದರೇಮ. ದುಸರೋ ಅವತಾರ ಸಬಜಲಪುರೇಮ ಸೂರ್ಯವಂಶ ರಾಜಾ ಘರೇಮ ಮಾತಾ ದೇವಕಿರ ಉದರೇಮ” ಎಂದು ಹಾಡುತ್ತ ಸುಮಾರು ೯೦೦ ವರ್ಷಗಳ ಹಿಂದೆ ಮಾನವೀಯತೆ ಮೆರೆದ ನಾಯಕ ಸೇವಾಲಾಲ್ ಮಹಾಸಂತರು ದನಕರುಗಳನ್ನು, ಮನುಷ್ಯರನ್ನು ಪ್ರೀತಿ ವಾತ್ಸಲ್ಯದಿಂದ ಕಂಡ ನಾಯಕರನ್ನು ನೆನಪಿಸಿಕೊಳ್ಳುತ್ತಾರೆ. ಅವರ ಮೇಲಿನ ಪ್ರೀತಿಯೇ ಈ ಹಾಡಿನ ಮೂಲ ಸೆಲೆ.

ಒಟ್ಟಾರೆಯಾಗಿ, ಮನುಷ್ಯನನ್ನು ಮನುಷ್ಯನನ್ನಾಗಿ ಕಾಣುವ ಉದಾರ ಮನೋಭಾವ, ಕಷ್ಟದಲ್ಲಿರುವವರಿಗೆ ಸಹಾಯ ಮಾಡುವ ಉದಾರ ಗುಣ, ಪರಸ್ಪರರು ಪ್ರೀತಿ–ವಿಶ್ವಾಸದಿಂದ ಒಗ್ಗಟ್ಟಿನಿಂದ ಇರುವ ಇವರ ಜೀವನ ನಾಗರಿಕರು ಎಂದು ಪರದೆ ಹಾಕಿಕೊಂಡು ಮಾನವೀಯತೆ ಮರೆತ ನಮಗೆ ಅವರ ಜೀವನ ಕ್ರಮ ಮಾದರಿ.

ಲಂಬಾಣಿಗಳ ಉಡುಗೆ–ತೊಡುಗೆಗಳು ಕಲಾ ಸಂತೆಯಲ್ಲಿ ಸಾಂಪ್ರದಾಯಿಕ (ಫ್ಯಾಷನ್) ಉಡುಗೆಯಾಗಿ ಮಾರಾಟಗೊಳ್ಳುತ್ತಿವೆ. ಭಾರತೀಯ ಚಿತ್ರರಂಗದ ಅನೇಕ ಚಿತ್ರಗಳಲ್ಲಿ ಲಂಬಾಣಿ ತರುಣಿಯರ ಪಾತ್ರಗಳು ಜೀವ ತಳೆದಿವೆ. ಹೇಮಾಮಾಲಿನಿ, ಕಲ್ಪನಾ, ಶ್ರೀದೇವಿ, ಭಾರತಿ, ಇತ್ತೀಚಿನ ರಮ್ಯಾ, ಪೂಜಾ ಗಾಂಧಿ, ಅನೇಕ ನಟಿಯರು ಬಂಜಾರನ್ ಶೈಲಿಯ ಪಾತ್ರದಲ್ಲಿ ಕಾಣಿಸಿಕೊಂಡಿದ್ದು ವಿಶೇಷ.

**ರೇಣುಕಾಗಿರಿ (ರೇಖಾ ಪಾಟೀಲ್)**
ಪತ್ರಿಕೋದ್ಯಮ ಮತ್ತು ಸಮೂಹ ಸಂವಹನ ವಿಭಾಗ
ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ



ಕಾವ್ಯಲೋಕ

# ಹದ್ದು ಹಾವು ಸಾವು !

ಹೆಡೆ ಬಿಚ್ಚಿರಲಿಲ್ಲ ಹಾವು !
ಆದರೂ ಹರಿದಿತ್ತ ಕಟವಾಯಿ ರಕುತ
ಬಂದವರು ಬಂದಂತೆ ಕೈಮಗಿದು ಬಾಯ್ಬಿಡದೆ
ಸಾವಿಲ್ಲದಿಹ ಸಾವಿನದ್ಭುತಕೆ ಬೆವತು !

ಹಿಡಿಯಿರೋ ತಡೆಯಿರೋ ಎನ್ನದಲೆ ಎದ್ದೋದೆ;
ನೀರಾಯ್ತು ಅರುಣಜಲ ಕರಳು ಕರಗಿ
ಬರಲೇ ಇಲ್ಲ ಕರೆ ಬಿಕ್ಕಳಿಕೆ ಸುಳಿವಿಲ್ಲ
ತುಂಬಿ ಚೆಲ್ಲುವ ಜಲವು ನಿಲ್ಲಲಿಲ್ಲ.

ನಗುತ್ತಿದ್ದೆಯಲ್ಲವ್ವ ನಡುರಾತ್ರಿ ಜಾರಿದರೂ
ಯಾರು ಕಿತ್ತರು ನಿನ್ನ ಬೆಳಕ ತಂತಿ ?...
ಉಡುಗಿತೊ ಅಡಗಿತೊ ನಂಬಲಾಗುತಲಿಲ್ಲ
ಕಿರುಲೇಪದಾತಂಕದೆಸರೂ ಇಲ್ಲ.

ಹದ್ದು ಮರಿಯನು ಎತ್ತಿ ಹಾರಿ ಹೋಗಿಹ ಭಾಸ
ದಣಿದು ಶರಣಾದೆಯಾ ಯಾರ ಮೋಸ ?...

**ವಿಷ್ಣು ನಾಯ್ಕ,** ‘ಪರಿಮಳ’, ಅಂಬಾರಕೊಡ್ಲ, ಅಂಕೋಲ – ೫೮೧ ೩೧೪






**ಬಣ್ಣದ ಹನಿಗಳು**

**(ಕಥಾ ಸಂಕಲನ)**

ಎಸ್. ಬಿ. ಜೋಗುರ

**ಪುಟ :** ೧೧೨ + ೪ = ೧೧೬

**ಬೆಲೆ : ರೂ.** ೧೦೦

**ಸಹಿಷ್ಣು ಪ್ರಕಾಶನ**

ಧಾರವಾಡ – ೫೮೦ ೦೦೩

*ಕಥೆಗಳು ಬದುಕಿನ ಪಡಿಯಚ್ಚುಗಳು. ಪ್ರತಿಯೊಬ್ಬರ ಬದುಕೂ ಭಿನ್ನವಾಗಿದ್ದು, ಅಲ್ಲಿ ನಡೆಯುವ ಎಲ್ಲವೂ ಕಥೆಗಳಿಗೆ ಪೂರಕವಾಗಿದ್ದು, ಹಲವು ಬಣ್ಣಗಳಿಂದ ಕೂಡಿರುತ್ತದೆ. ಬಣ್ಣವೆಂದರೆ ಬದುಕಿನ ಬಣ್ಣ! ಇಲ್ಲಿನ ಕಥೆಗಳಲ್ಲಿ ಆಧುನಿಕ ಗ್ರಾಮ್ಯ ಜೀವನದ ದಟ್ಟ ಛಾಯೆ ಮೂಡಿಬಂದಿದೆ. ಹಿಂದೆ ಬಾಳಿದ ಹಳ್ಳಿಯ ಮಣ್ಣಿನ ಮಕ್ಕಳ ಜೀವನ ಗತಿ ಗುರುತು ಸಿಗದಷ್ಟು ಬದಲಾಗಿದೆ. ಹಿಂದೆ ಬಂಗಾರ ಬೆಳೆಯುತ್ತಿದ್ದ ಜಮೀನು ಇಂದು ಮಾರಾಟದ ವಸ್ತುವಾಗಿ ಮಾರ್ಪಟ್ಟಿದೆ. ಮೊದಲೇ ಹೇಳಿದಂತೆ ಇಲ್ಲಿನ ಕಥೆಗಳಲ್ಲಿ ಕಣ್ಣಿಗೆ ರಾಚುವ ಬಣ್ಣಗಳಿವೆ. ಅಂತೆಯೇ ಕಂಡೂ ಕಾಣದಂತಿರುವ ಪೇಲವ ವರ್ಣಗಳೂ ಇವೆ. ಎಲ್ಲ ಅವಾಂತರಗಳ ಮಧ್ಯೆ ಸಿಕ್ಕು ಒದ್ದಾಡುವ ಬಡಜನರ ಗೋಳಿಗೆ ಮಿತಿಯಿಲ್ಲ. ದುಡ್ಡಿಗಿರುವ ಮಹತ್ವ, ಯಾರಿಗೂ ಬೇಕಿಲ್ಲದ ಅಭಿವೃದ್ಧಿ, ಏನೂ ದಕ್ಕದೆ ಇದ್ದರೂ ತೆಪ್ಪಗಿರುವ ಹಳ್ಳಿಯ ಜನ – ಹೀಗೆ ಸಂಪೂರ್ಣ ಬದಲಾದ ಚಿತ್ರಣಗಳು. ಪ್ರತಿಯೊಂದನ್ನೂ ವ್ಯವಹಾರ–ವ್ಯಾಪಾರದ ದೃಷ್ಟಿಯಿಂದ ನೋಡುತ್ತ ಮಾನವೀಯತೆಗೆ ಬೆಲೆ ನೀಡದ ಹದಗೆಟ್ಟ ಸರಕಾರೀ ಆಸ್ಪತ್ರೆಗಳ ಕಾರ್ಯವೈಖರಿ ವ್ಯವಸ್ಥೆಗೆ ಹಿಡಿದ ಕನ್ನಡಿಯಂತಿದೆ. ಇವು ಬಿಸಿಲ ಬೇಗೆಯಷ್ಟು ಪ್ರಖರ, ಒಳಮನಸ್ಸು ಕುದಿವ ಜ್ವಾಲಾಮುಖಿಯಷ್ಟೇ ತಪ್ತ. ಕಥಾಶೈಲಿ ನಿಜವನ್ನು ಮರೆಮಾಚದಷ್ಟು ಪ್ರಾಮಾಣಿಕ. ಅಂತೆಯೇ ಗ್ರಾಮೀಣ ಭಾಷೆಯೂ ಸೊಗಸಾಗಿದೆ.*

**ಚಿತ್ರ ಭಿತ್ತಿ** (ಕವನಗಳು)

*ರೂಪಶ್ರೀ ಕಲ್ಲಿಗನೂರ್*

**ಪುಟ :** ೧೧೮ **ಬೆಲೆ : ರೂ.** ೯೦

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧



*ಕವನಗಳೆಂದರೇನು? ಮನದಲ್ಲಿ ಮೂಡಿ, ಭಾವನೆಗಳೊಂದಿಗೆ ಮೆಲುಕಾಡಿ, ನಮ್ಮ ಕಣ್ಣಮುಂದೆ ಅಕ್ಷರರೂಪದಲ್ಲಿ ಗೋಚರಿಸುವ ಒಂದು ವಿಸ್ಮಯ! ಇವು ಕವಿಯ ಅಂತರಾಳದ ಅನಿಸಿಕೆಗಳೂ ಹೌದು. ಎಲ್ಲ ಕಾಲದಲ್ಲೂ ಅಂದಂದಿನ ಆಗುಹೋಗುಗಳಿಗೆ ಕವಿಗಳು ಸ್ಪಂದಿಸಿ ತನ್ನ ನಿಲುವನ್ನು ಪ್ರಕಟಿಸಿದ್ದಾರೆ. ಕಾಲ ಬದಲಾದಂತೆ ಕವಿತೆ ತನ್ನ ಬಿಂಬ, ಸ್ವರೂಪ ಮತ್ತು ಸಂದೇಶಗಳನ್ನು ಪಲ್ಲಟಗೊಳಿಸಲು ಸಿದ್ಧವಾಗಿರುತ್ತದೆ. ಸಮಾಜದಲ್ಲಿ ಸಂಭವಿಸುವ ಎಲ್ಲ ಸಂಗತಿಗಳೂ ಕಾವ್ಯಕ್ಕೆ ವಸ್ತುವಾಗಬಲ್ಲವು. ಹಾಗೇ ಪ್ರಕೃತಿಯಲ್ಲಿನ ಪ್ರತಿಯೊಂದು ವಸ್ತು, ತನ್ನ ಅನುಭವಕ್ಕೆ ನಿಲುಕುವ ಎಲ್ಲವೂ ಕಾವ್ಯಕ್ಕೆ ವಸ್ತುಗಳೇ. ಈ ಕವನಗಳು ಕೂಡ ಇಂದಿನ ಆಧುನಿಕ ಪ್ರಕಾರದ ನವ್ಯ ಕವಿತೆಗಳೇ ಆಗಿವೆ. ಕನವರಿಸುವ ಮನಸ್ಸಿನ, ಕನಸು ಕಾಣುವ ವಯಸ್ಸಿನ ಸಂಕೇತಗಳಂತೆ ಮೂಡಿಬಂದಿವೆ. ಹೇಳಬೇಕಾದುದನ್ನು ಯಾವುದೇ ಮುಲಾಜಿಲ್ಲದೆ ಹೇಳಿ ಮುಗಿಸುವಂತಹ ದಿಟ್ಟತನ ಮೆರೆದಿವೆ. ಅಲ್ಲದೆ ಜಗತ್ತಿನ ನಿಜಬಣ್ಣವೂ ಕಣ್ಣಿಗೆ ರಾಚುವಂತೆ ತೆರೆದಿಟ್ಟಿದೆ. ಮಾನವ ಸಹಜವಾದ ಆಸೆ–ಆಕಾಂಕ್ಷೆಗಳು, ಮುಗಿಲ ಎತ್ತರಕ್ಕೆ ಏರಿ ಕೈಗೆಟುಕದ ಬಯಕೆಗಳು ಕೆಲವೊಮ್ಮೆ ಶಾಶ್ವತವಾದ ದುಃಖ–ನೋವು ತರುತ್ತವೆ ಎಂದು ನಮ್ಮ ಕಣ್ತೆರೆಸಿವೆ. ವಿಭಾ ಸಾಹಿತ್ಯ ಪ್ರಶಸ್ತಿಯನ್ನು ತನ್ನದಾಗಿಸಿಕೊಂಡ ಕವನ ಸಂಕಲನದ ಕವಯಿತ್ರಿ ಇನ್ನಷ್ಟು ಪ್ರಬುದ್ಧತೆ ಮೆರೆಯಲಿ.*



**ಶತಮಾನಪುರುಷ ಐನ್‌ಸ್ಟೈನ್**

*ಪಾಲಹಳ್ಳಿ ವಿಶ್ವನಾಥ್*

**ಪುಟ : ಜಜ** + ೧೬೬ **ಬೆಲೆ : ರೂ.** ೧೫೦

**ಇಂಡಿಗೋ ಮಲ್ಟಿಮೀಡಿಯಾ,** ನಂ. ೧೦/೧, ೧೧ನೇ ಮುಖ್ಯರಸ್ತೆ, ಪ್ರಕಾಶನಗರ, ಬೆಂಗಳೂರು – ೫೬೦ ೦೨೧

*ಆಲ್ಬರ್ಟ್ ಐನ್‌ಸ್ಟೈನ್ ವಿಜ್ಞಾನಕ್ಷೇತ್ರದಲ್ಲಿ ಅಳಿಸಲಾಗದ ಹೆಸರು. ಸಾಪೇಕ್ಷತಾ ಸಿದ್ಧಾಂತ ಬಹಳ ಪ್ರಸಿದ್ಧವಾದರೂ ಅವರು ವಿಜ್ಞಾನದ ಇನ್ನಿತರ ಶಾಖೆಗಳಲ್ಲೂ ಗುರುತು ಮೂಡಿಸಿದವರು. ಕೇವಲ ವಿಜ್ಞಾನಿ ಮಾತ್ರವಲ್ಲ ಮಾನವತಾವಾದಿ, ಸಮಾಜವಾದಿ ಹಾಗೂ ಮೂಢನಂಬಿಕೆಗಳ ಕಡು ವಿರೋಧಿಯೂ ಆಗಿದ್ದರು. ಈ ಪುಸ್ತಕ ಅವರ ಬಹುಮುಖ ವ್ಯಕ್ತಿತ್ವವನ್ನು ಅವರ ಜೀವನದ ಆಗುಹೋಗುಗಳನ್ನು ವಿವರಿಸುತ್ತದೆ. ಎರಡನೇ ಮಹಾಯುದ್ಧ ಕಾಲದಲ್ಲಿ ಯೆಹೂದಿ ಎಂಬ ಕಾರಣಕ್ಕೆ ಹಿಟ್ಲರ್ ಬಣಗಳಿಂದ ಸಾಕಷ್ಟು ಕಿರುಕುಳ ಅನುಭವಿಸಿ ಐನ್‌ಸ್ಟೈನ್ ಅಮೆರಿಕಾ ದೇಶಕ್ಕೆ ವಲಸೆ ಹೋದರು. ಅಂದಿನ ಸಮಕಾಲೀನ ವಿಜ್ಞಾನಿಗಳಿಂದಲೂ ಅವರಿಗೆ ಸಿಗಬೇಕಾದಷ್ಟು ಮನ್ನಣೆ ಸಿಕ್ಕಿರಲಿಲ್ಲ. ಮುಂದೆ ಜಗತ್ತೇ ಗೌರವಿಸಿ ಗುರುತಿಸಿದ ವಿಜ್ಞಾನಿಯಾದದ್ದು ಅರ್ಹತೆ ಮತ್ತು ಬುದ್ಧಿಮತ್ತೆಯಿಂದ ಮಾತ್ರ. ವಿಜ್ಞಾನ ಕ್ಷೇತ್ರದಲ್ಲಿನ ಸಂಶೋಧನೆಯಿಂದಾಗಿ ಬಾಂಬ್ ತಯಾರಿಸಲು ಸರಕಾರಗಳು ಮುಂದಾದಾಗ ಹಲವಾರು ವಿಜ್ಞಾನಿಗಳಿಗೆ ತಮ್ಮ ತಪ್ಪಿನ ಅರಿವಾಗಿತ್ತು. ಹಿರೋಷಿಮಾ, ನಾಗಸಾಕಿ ನಿರ್ನಾಮವಾದವು. ಮುಂದೆ ಬಾಂಬ್ ವಿರೋಧಿ ವಿಜ್ಞಾನಿ ಜೋಸೆಫ್ ರೋಟ್ ಬ್ಲಾಟ್ ರಸೆಲ್‌ರೊಂದಿಗೆ ವಿಶ್ವಶಾಂತಿಗಾಗಿ ರಸೆಲ್ – ಐನ್‌ಸ್ಟೈನ್ ಮ್ಯಾನಿಫೆಸ್ಟೊ ಮೂಲಕ ದೇಶಗಳನ್ನು ವಿನಂತಿ ಮಾಡಿಕೊಂಡರು. ಹಲವು ವಿಜ್ಞಾನಿಗಳ ಚಿತ್ರಗಳಿರುವ ಈ ಕೃತಿ ಐನ್‌ಸ್ಟೈನ್ ಎಂತಹ ವಿಜ್ಞಾನಿ ಎಂದು ತಿಳಿದುಕೊಳ್ಳಲು ಸಹಾಯಕ.*

**ಜಾನಪದ ವರ್ತಮಾನ**

*ಅರುಣ್ ಜೋಳದಕೂಡ್ಲಿಗಿ*

**ಪುಟ : ಡಜ್ಞ** + ೨೦೮ **ಬೆಲೆ : ರೂ.** ೧೫೦

**ದೇಸಿ ಪುಸ್ತಕ,** ನಂ. ೧೨೧, ೧೩ನೇ ಮುಖ್ಯರಸ್ತೆ, ಎಮ್.ಸಿ. ಲೇಔಟ್, ವಿಜಯನಗರ, ಬೆಂಗಳೂರು – ೫೬೦ ೦೪೦



*ಜಾನಪದ ಎಂಬುದು ಬಹು ಅರ್ಥವಿಸ್ತಾರವುಳ್ಳ ಪದ. ಅದು ಹಳೆಯಕಾಲದ ಸಂಸ್ಕೃತಿ ಎನ್ನುವ ನಂಬಿಕೆಯನ್ನು ಬದಲಿಸಬೇಕಾಗಿದೆ. ಜನರ ಮಧ್ಯದಿಂದ ಎದ್ದು ಬಂದುದು ಹಾಗೂ ಆಯಾಕಾಲಕ್ಕೆ ಸಂದರ್ಭೋಚಿತವಾದುದೆಂಬ ವ್ಯಾಖ್ಯೆ ಸರಿಯಾಗಬಹುದೇನೋ! ಯಾಕೆಂದರೆ ಜನ ಅಂದೂ ಇದ್ದರು, ಇಂದೂ ಇದ್ದಾರೆ. ಇಂದಿನ ವರ್ತಮಾನಕ್ಕೆ ಬಂದರೆ ಅದು ವೆಬ್‌ಸೈಟ್ – ನೆಟ್‌ನಲ್ಲೂ ವಿಜೃಂಭಿಸುತ್ತಿದೆ. ಅಲ್ಲದೆ ಪ್ರಾಚೀನಕಾಲದಿಂದಲೂ ಬಳಕೆಯಲ್ಲಿರುವುದನ್ನು ಅಲ್ಪಸ್ವಲ್ಪ ಬದಲಾಯಿಸಿಕೊಂಡು ಆಧುನೀಕರಣಗೊಂಡಿದೆ. ಎಲ್ಲದರಲ್ಲೂ ನಾನಿದ್ದೇನೆ ಎನ್ನುತ್ತ ಜನರಿಗೆ ಹತ್ತಿರವಾಗಿದೆ. ಒಂದು ರೀತಿಯ ಹಳೆಬೇರು ಹೊಸಚಿಗುರು ಎನ್ನುವಷ್ಟು ಆತ್ಮೀಯವಾಗಿದೆ. ಜಾನಪದದ ಹೊಸ ನಡಿಗೆಯ ಗುರುತುಗಳನ್ನು ಸ್ಪಷ್ಟವಾಗಿ ಗುರುತಿಸಿದ ಈ ಲೇಖನಗಳು ಅಧ್ಯಯನಯೋಗ್ಯ ಮತ್ತು ಕಣ್ಣುತೆರೆಸುವ ಆಕರಗಳು. ಆಧುನಿಕತೆ ಮತ್ತು ನಗರೀಕರಣ ಹೆಚ್ಚಿದಂತೆಲ್ಲಾ ಅವಗಣನೆಗೆ ಗುರಿಯಾದ ವಿವಿಧ ಜಾನಪದ ಚಟುವಟಿಕೆಗಳು ಹೊಸ ರೂಪದಲ್ಲಿ ಜನರ ಮುಂದೆ ಜನರಿಗಾಗಿ ಪರಿಚಯವಾಗಿವೆ. ಹೀಗೆ ವರ್ತಮಾನದಲ್ಲಿನ ಜಾನಪದ ಸ್ವರೂಪದ ವಿಶೇಷತೆಯೆಂದರೆ ಇಂದಿನ ಯುವ ಜನತೆಗೆ ಬೇಕಿರುವುದನ್ನು ಉಳಿಸಿ ಅಪ್ರಸ್ತುತವಾದ್ದನ್ನು ಕಳಚುವುದು. ಜಾನಪದ ವಿದ್ವಾಂಸರು ಹೊಸ ಸಂಶೋಧನೆಗೆ ಅಣಿಯಾಗಲಿ.*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು – ೨೨*

ತಾನು ಆಫೀಸಿನಿಂದ ಮನೆಗೆ ಬಂದ ಕೂಡಲೇ ಮಾತಿಲ್ಲದೆ ಒಳಗೆ ಹೋಗಿ ಕಾಫಿ-ತಿಂಡಿ ತಂದುಕೊಡುತ್ತಾಳೆ. ತಾನು ಆಫೀಸಿನಲ್ಲಿ ನಡೆದ ಘಟನೆಗಳ ಬಗ್ಗೆ, ಸಹೋದ್ಯೋಗಿಗಳ ಬಗ್ಗೆ, ತನ್ನ ಬಾಸ್ ಲಂಚ ತೆಗೆದುಕೊಂಡು ಶ್ರೀಮಂತನಾದ ಬಗ್ಗೆ, ತನಗೂ ಬತ್ತಿ ಸಿಕ್ಕಿ ಒಂದು ದಿನ ತಾನೂ ಅದೇ ರೀತಿ ಗಣ್ಯವ್ಯಕ್ತಿಯಾಗುವ ಕನಸುಗಳ ಬಗ್ಗೆ ಮಾತನಾಡಿದಾಗಲೆಲ್ಲ ಎಲ್ಲದಕ್ಕೂ ಹೂಂಗುಡುತ್ತಿದ್ದ ಜಾನಕಿಯನ್ನು ನೋಡಿ ತನ್ನ ಹೆಂಡತಿ ಎಷ್ಟೊಂದು ಅನುಸರಣಶೀಲೆಯೆಂದು ರಾಘವ ಹೆಮ್ಮೆಪಟ್ಟಿದ್ದ. ಆದರೆ ಈಕೆಯೊಳಗಿನ "ಜೀನಿಯಸ್"ನ್ನು ಕಂಡುಹಿಡಿದು ರಂಗನಾಥ ಗೆಳೆಯನನ್ನು ಆಘಾತಕ್ಕೀಡುಮಾಡಿದ್ದ.

# ಜೀನಿಯಸ್ ಹೆಂಡತಿ

**ಡಾ॥ ಪಾರ್ವತಿ ಜಿ. ಐತಾಳ್**

ಕಂದಾಯ ಇಲಾಖೆಯಲ್ಲಿ ಗುಮಾಸ್ತನಾಗಿ ಕೆಲಸ ಸಿಕ್ಕಿದಾಗ ಸ್ವರ್ಗಕ್ಕೆ ಮೂರೇ ಗೇಣು ಉಳಿದಿದೆ ಎಂದು ರಾಘವ ಹಿರಿಹಿಗ್ಗಿದ್ದ. ತನ್ನ ಹತ್ತಿರ ಅರ್ಥಶಾಸ್ತ್ರ ಎಂ.ಎ. ಪದವಿ ಇದೆ. ಒಂದೆರಡು ವರ್ಷದೊಳಗೆ ಅಧಿಕಾರಿಯಾಗಿ ಬಡ್ತಿ ಸಿಕ್ಕೇ ಸಿಗುತ್ತದೆ. ಆಗ ಬೇಕಾದಷ್ಟು ಹಣ ಮಾಡಬಹುದು. ಕಂದಾಯ ಇಲಾಖೆ ಎಂದ ಮೇಲೆ ಸರಕಾರದಿಂದ ನ್ಯಾಯಯುತವಾಗಿ ಬರುವ ಸಂಬಳ ಏನೇನೂ ಅಲ್ಲ. ಹಣ ರಾಶಿ ಕೂಡಿಸಲು ನೂರಾರು ದಾರಿಗಳಿವೆ. ತಾನು, ತನ್ನ ಹೆಂಡತಿ, ಇಬ್ಬರು ಮಕ್ಕಳು, ಸ್ವಂತ ಬಂಗಲೆ, ಕಾರು, ಐಷಾರಾಮಿ ಬದುಕು ಎಂದು ಕನಸು ಕಟ್ಟಿದ್ದ ರಾಘವ. ಬದುಕಿನಲ್ಲಿ ಇನ್ನೇನು ಬೇಕು ?

ಅಂದು ಗೆಳೆಯ ರಂಗನಾಥ ಮನೆಗೆ ಬಂದಿದ್ದ. ಅವನೂ ಗುಮಾಸ್ತನೇ. ಆದರೆ ಅವನ ಸ್ವಭಾವ ರಾಘವನಿಗೆ ತದ್ವಿರುದ್ಧ. ಆತ ಸಾಹಿತ್ಯ ಪ್ರೇಮಿ. ಸದಾ ಓದಿನಲ್ಲಿ ತಲ್ಲೀನನಾಗಿರುತ್ತಾನೆ. ಬಡ್ತಿಯ ಬಗ್ಗೆ, ಭವಿಷ್ಯದ ಬಗ್ಗೆ ಎಂದೂ ತಲೆಕೆಡಿಸಿಕೊಂಡವನಲ್ಲ. ಮಿತವ್ಯಯ, ಸರಳ ಬದುಕು, ಸ್ನೇಹಬಂಧಗಳಲ್ಲೇ ಸಂತೋಷ ಕಾಣುವವನು. ಅಂದು ಟೀಪಾಯ್ ಮೇಲೆ ಜಾನಕಿಯ ಹೆಸರಿದ್ದ ಒಂದು ನೋಟುಬುಕ್‌ನಲ್ಲಿ ಮುದ್ದಾದ ಅಕ್ಷರಗಳಲ್ಲಿ ಬರೆದಿದ್ದ ಕೆಲವು ವಾಕ್ಯಗಳು ಅವನ ಗಮನ ಸೆಳೆದವು.

"ಸತ್ಯ ಮತ್ತು ಸೌಂದರ್ಯಗಳ ಅನ್ವೇಷಣೆಯೇ ಬದುಕು. ಮನೆಯ ಮುಂದಿನ ಗುಲಾಬಿ ಗಿಡಗಳಲ್ಲಿ ನಿತ್ಯವೂ ಅರಳುವ ಗುಲಾಬಿಗಳು, ಬಾನಲ್ಲಿ ಮೂಡುವ ಮತ್ತು ಮುಳುಗುವ ಸೂರ್ಯ, ಆಕಾಶದ ಶುಭ್ರತೆ, ಸಾಗರದ ವೈಶಾಲ್ಯ, ನಿಸರ್ಗದ ರುದ್ರರಮಣೀಯತೆಯಗಳು, ಸತ್ಯ ಮತ್ತು ಸೌಂದರ್ಯಗಳು ಹೇಗೆ ಒಂದೇ ನಾಣ್ಯದ ಎರಡು ಮುಖಗಳು ಎಂಬುದನ್ನು ಸಾರಿ ಹೇಳುತ್ತವೆ..."

"...ಹಣ ಕೂಡಿಡುವ ಬುದ್ಧಿ ತುಂಬ ಅಪಾಯಕಾರಿ. ಲಕ್ಷ್ಮಿ ಚಂಚಲೆ. ತಾನು ಸ್ವತಃ ಚಂಚಲೆಯಾಗಿರುವುದಲ್ಲದೆ ತನ್ನನ್ನು ನಂಬಿದವರನ್ನೂ ದೌರ್ಬಲ್ಯಗಳ ದಾಸರನ್ನಾಗಿಸುತ್ತಾಳೆ. ಒಂದು ನಿರ್ದಿಷ್ಟ ಮಿತಿಗಿಂತ ಹೆಚ್ಚು ಅವಳನ್ನು ನೆಚ್ಚಿಕೊಂಡರೆ ಸ್ನೇಹ-ಸಂಬಂಧ, ಸಂವೇದನೆಗಳೆಲ್ಲ ಬರಿದಾಗಿ ಮನುಷ್ಯ ರಾಕ್ಷಸನಾಗುತ್ತಾನೆ. ಆದ್ದರಿಂದ ಬದುಕಲು ಎಷ್ಟು ಹಣ ಬೇಕೋ ಅಷ್ಟು ಸಿಕ್ಕಿದರೆ ಸಾಕು. ಅದುವೇ ಬದುಕಾಗಬಾರದು..."



ನೋಟುಬುಕ್ಕಿನ ಇನ್ನಷ್ಟು ಪುಟಗಳಲ್ಲಿ ಇಂಥ ಚಿಂತನೆಗಳೇ ತುಂಬಿಕೊಂಡಿದ್ದವು. ಓದಿ ಅಚ್ಚರಿಗೊಂಡ ರಂಗನಾಥ "ಲೋ ರಾಘವಾ, ಎಂಥ ಜೀನಿಯಸ್ ಕಣೋ ನಿನ್ನ ಹೆಂಡತಿ ! ಆಕೆ ಇಷ್ಟು ಚೆನ್ನಾಗಿ ಆಲೋಚಿಸ್ತಾರೆ, ಬರೀತಾರೆ ಅಂದರೆ ನಂಬಲಿಕ್ಕೇ ಆಗುವುದಿಲ್ಲ. ಬರೆದು ಪ್ರಕಟಿಸುವ ಅಭ್ಯಾಸ ಬೆಳೆಸಿಕೊಂಡರೆ ಪ್ರಸಿದ್ಧ ಲೇಖಕಿಯಾದಾರು ಅನ್ನುವುದರಲ್ಲಿ ಸಂಶಯವೇ ಇಲ್ಲ" ಎಂದ.

ರಂಗನಾಥ ಹೋದ ನಂತರ ಆತ ಹೇಳಿದ ಮಾತುಗಳು ರಾಘವನನ್ನು ಕೀಟದಂತೆ ಕೊರೆಯ ತೊಡಗಿದವು. "ನಿನ್ನ ಹೆಂಡತಿ ಜೀನಿಯಸ್ !" ಅವನಿದನ್ನು ಎಂದೂ ನಿರೀಕ್ಷಿಸಿರಲೇ ಇಲ್ಲ. ಹೆಂಡತಿ ಜೀನಿಯಸ್ ಆಗಿರಬೇಕೆಂದು ರಾಘವ ಬಯಸಿರಲಿಲ್ಲ. ಮದುವೆಗೆ ಮುಂಚಿನ ಅವನ ಕನಸಿನಲ್ಲಿ ಬಂದ ಹೆಂಡತಿ ನೋಡಲು ಮೈಕೈ ತುಂಬಿ ಲಕ್ಷಣವಾಗಿ, ಆಕರ್ಷಕವಾಗಿದ್ದಳು. ಅವನು ನೋಡಿದ್ದ ಸಿನಿಮಾಗಳಲ್ಲಿರುವಂತೆ ಅಚ್ಚುಕಟ್ಟಾಗಿ ಮನೆಗೆಲಸ ಮಾಡಿಕೊಂಡು, ಗಂಡ-ಮಕ್ಕಳಿಗೆ ಬೇಕು ಬೇಕಾದ್ದನ್ನೆಲ್ಲ ಮಾಡಿಕೊಟ್ಟು, ಗಂಡನನ್ನು ಯಾವ ರೀತಿಯಿಂದಲೂ ಅತೃಪ್ತಿಗೊಳಿಸದೆ, ಆತ ಹೇಳಿದ್ದಕ್ಕೆಲ್ಲ ಒಪ್ಪಿಕೊಂಡು ಅನುಸರಿಸಿಕೊಂಡು ಹೋಗುವವಳಾಗಿದ್ದಳು. ಅವನ ಕನಸಿನ ಮನೆಯ ಸುಖ-ಸೌಕರ್ಯಗಳಲ್ಲಿ ನಗುಮುಖದ ಆಕೆ

ಒಂದು ಅವಿಭಾಜ್ಯ ಅಂಗವಾಗಿದ್ದಳು. ಬುದ್ಧಿವಂತಿಕೆ ಉಪಯೋಗಿಸಿ ಹಣ ಸಂಪಾದಿಸಿ ಕೌಟುಂಬಿಕ ಅಗತ್ಯಗಳನ್ನು ಪೂರೈಸಿಕೊಡಲು ಗಂಡನಿರುವಾಗ ಹೆಂಡತಿ ಜೀನಿಯಸ್ ಆಗಿರುವ ಅಗತ್ಯವಿದೆಯೆ ?

ಮದುವೆಯಾಗಿ ಜಾನಕಿ ಅವನ ಮನೆಗೆ ಬಂದಾಗ ಆಕೆ ಎಲ್ಲ ರೀತಿಯಿಂದಲೂ ತಾನು ಬಯಸಿದ ಹೆಣ್ಣೆಂದೇ ಆತ ಭಾವಿಸಿದ್ದ. ಜಾನಕಿ ಹೆಚ್ಚು ಮಾತನಾಡುವ ಸ್ವಭಾವದವಳಾಗಿರಲಿಲ್ಲ. ಹಾಗೆಂದು ಸಿಡುಕುಮುಖದವಳೂ ಅಲ್ಲ. ಪ್ರಸನ್ನಚಿತ್ತಳೂ ಸಮಾಧಾನದ ನಡೆನುಡಿಯವಳೂ ಆಗಿದ್ದು, ರಾಘವನ ಎಲ್ಲ ಮಾತುಗಳನ್ನೂ ಸಹನೆಯಿಂದ ಆಲಿಸುತ್ತಿದ್ದಳು. ಆದ್ದರಿಂದ ರಾಘವ ಅವಳ ಬಗ್ಗೆ ಸಂತುಷ್ಟ ನಾಗಿಯೇ ಇದ್ದ. ಆದರೆ ಈಗ ರಂಗನಾಥನ ಮಾತು ಕೇಳಿದ ನಂತರ ಅವನಿಗೆ ಚಿಂತೆಯಾಗತೊಡಗಿತು. ಅವನು ಆ ನೋಟುಬುಕ್ಕಿನಲ್ಲಿದ್ದ ಸಾಲುಗಳನ್ನು ಜಾನಕಿಯ ಕಣ್ಣುತಪ್ಪಿಸಿ ಒಮ್ಮೆ ಓದಿ ನೋಡಿದ. ಸತ್ಯ–ಸೌಂದರ್ಯಗಳ ತತ್ವಶಾಸ್ತ್ರ ಅವನಿಗೆ ಸ್ವಲ್ಪವೂ ಅರ್ಥವಾಗಲಿಲ್ಲ. “ಇವಳಿಗೆಲ್ಲೋ ಹುಚ್ಚಿರಬೇಕು” ಅಂದುಕೊಂಡ. ಹಣದ ಬಗ್ಗೆ ಅವಳು ಬರೆದದ್ದನ್ನು ನೋಡಿ ಅವನಿಗೆ ಅಸಾಧ್ಯ ಸಿಟ್ಟು ಬಂತು.

ಕಾಲೇಜಿನಲ್ಲಿ ನಡೆಯುತ್ತಿದ್ದ ಚರ್ಚಾಕೂಟಗಳಲ್ಲಿ ಏನೇನೂ ಆಸಕ್ತಿ ಇಲ್ಲದಿದ್ದರೂ ಕಡ್ಡಾಯವಾಗಿ ಹಾಜರಿರಲೇಬೇಕೆಂದು ವಿಧಿಸಿದಾಗ ರಾಘವ ಹೋಗುವುದಿತ್ತು. ಭ್ರಷ್ಟಾಚಾರ ಎಂಬ ವಿಷಯದ ಮೇಲೆ ನಡೆದ ಚರ್ಚೆಯಲ್ಲಿ “ಪುರುಷರು ಲಂಚ ತೆಗೆದುಕೊಳ್ಳುವುದು ಅವರ ಪತ್ನಿಯಿಂದ ಪ್ರೇರಿತರಾಗಿ ಮಾತ್ರ. ಹೆಂಡತಿಯರನ್ನು ತೃಪ್ತಿಪಡಿಸುವುದಕ್ಕೋಸ್ಕರ ಮನಸ್ಸಿಲ್ಲದಿದ್ದರೂ ಲಂಚ ತೆಗೆದುಕೊಳ್ಳಬೇಕಾಗುತ್ತದೆ” ಎಂದು ಹಲವರು ವಾದಿಸಿದ್ದರು. ಆದರೆ ಈಗ ಅಂಥ ಸ್ತ್ರೀಯರ ಸ್ವಭಾವಕ್ಕೆ ತದ್ವಿರುದ್ಧವಾಗಿ ತನ್ನ ಹೆಂಡತಿ ಜಾನಕಿ ‘ಸರಳ ಬದುಕೇ ಚಂದ’ ಅನ್ನುತ್ತಿದ್ದಾಳೆ. ಈ ಅಭಿಪ್ರಾಯಗಳನ್ನು ಆಕೆ ತನ್ನಲ್ಲೆಂದೂ ನೇರವಾಗಿ ಬಾಯಿಬಿಟ್ಟು ಹೇಳಿಲ್ಲ. ತಾನು ಆಫೀಸಿನಿಂದ ಮನೆಗೆ ಬಂದ ಕೂಡಲೇ ಮಾತಿಲ್ಲದೆ ಒಳಗೆ ಹೋಗಿ ಕಾಫಿ–ತಿಂಡಿ ತಂದುಕೊಡುತ್ತಾಳೆ. ತಾನು ಆಫೀಸಿನಲ್ಲಿ ನಡೆದ ಘಟನೆಗಳ ಬಗ್ಗೆ, ಸಹೋದ್ಯೋಗಿಗಳ ಬಗ್ಗೆ, ತನ್ನ ಬಾಸ್ ಲಂಚ ತೆಗೆದುಕೊಂಡು ಶ್ರೀಮಂತನಾದ ಬಗ್ಗೆ, ತನಗೂ ಬಡ್ತಿ ಸಿಕ್ಕಿ ಒಂದು ದಿನ ತಾನೂ ಅದೇ ರೀತಿ ಗಣ್ಯವ್ಯಕ್ತಿಯಾಗುವ ಕನಸುಗಳ ಬಗ್ಗೆ ಮಾತನಾಡಿದಾಗಲೆಲ್ಲ ಎಲ್ಲದಕ್ಕೂ ಹೂಂಗುಡುತ್ತಿದ್ದ ಜಾನಕಿಯನ್ನು ನೋಡಿ ತನ್ನ ಹೆಂಡತಿ ಎಷ್ಟೊಂದು ಅನುಸರಣಶೀಲೆಯೆಂದು ರಾಘವ ಹೆಮ್ಮೆಪಟ್ಟಿದ್ದ. ಆದರೆ ಈಕೆಯೊಳಗಿನ “ಜೀನಿಯಸ್”ನ್ನು ಕಂಡುಹಿಡಿದು ರಂಗನಾಥ ಗೆಳೆಯನನ್ನು ಆಘಾತಕ್ಕೀಡುಮಾಡಿದ್ದ.

ಈಗೇನೋ ಆಕೆ ಮೌನವಾಗಿದ್ದಾಳೆ. ಆದರೆ ಅವಳ ಪ್ರತಿಭೆ ಬೆಳಕಿಗೆ ಬಂದು ಎಲ್ಲರೂ ಅವಳನ್ನು ಗುರುತಿಸಿದರೆ ತನ್ನ ಆಶಯಗಳ ವಿರುದ್ಧ ಅವಳು ಗಟ್ಟಿಯಾಗಿ ಮಾತನಾಡಲಾರಳೇ ? ರಾಘವ ಚಿಂತಿತನಾದ. ತನಗೆ ಎದುರಾಡುವ ಜಾನಕಿಯನ್ನು ಅವನು ಊಹಿಸದಾದ. “ಇಲ್ಲ ಅದು ಸಾಧ್ಯವಿಲ್ಲ. ಜಾನಕಿಯೊಳಗಿನ ಜೀನಿಯಸ್ ಹೊರಗೆ ಬರದಂತೆ ಆಕೆಯನ್ನು ತನ್ನ ಹದ್ದಿನಲ್ಲಿಟ್ಟುಕೊಂಡರೆ ಎಲ್ಲವೂ ಸರಿಹೋಗುತ್ತದೆ” ಎಂದು ನಿರಾಳನಾದ ರಾಘವನ ಮೀಸೆಯಂಚಿನಲ್ಲಿ ಕುತ್ಸಿತ ನಗುವೊಂದು ಕಾಣಿಸಿಕೊಂಡಿತು.

**ಡಾ॥ ಪಾರ್ವತಿ ಜಿ. ಐತಾಳ್**
‘ಸುರಗಂಗ’, ಬಸ್ರೂರು ಕ್ರಾಸ್ ರಸ್ತೆ, ಕುಂದಾಪುರ – ೫೭೬ ೨೦೧

# ರಸ್ತೆಯಲಿ ರಕ್ತ ಹರಿಯುತ್ತಿದೆ




ನಾನು ಸುಂದರ ಹಕ್ಕಿಗಳ ಬಗ್ಗೆ ಬರೆಯುವುದಿಲ್ಲ
ಏಕೆಂದರೆ, ರಸ್ತೆಯಲಿ ರಕ್ತ ಹರಿಯುತ್ತಿದೆ.
ನಾನು ಸುಂದರ ಹೆಣ್ಣುಗಳ ಬಗ್ಗೆ ಬರೆಯುವುದಿಲ್ಲ
ಏಕೆಂದರೆ, ರಸ್ತೆಯಲಿ ರಕ್ತ ಹರಿಯುತ್ತಿದೆ
ನಾನು ಸುಂದರ ಹೂವುಗಳ ಬಗ್ಗೆ ಬರೆಯುವುದಿಲ್ಲ
ಏಕೆಂದರೆ, ರಸ್ತೆಯಲಿ ರಕ್ತ ಹರಿಯತ್ತಿದೆ.
ನಾನು ಮಗುವಿನ ಮುಗ್ಧತೆಯ ಬಗ್ಗೆ ಬರೆಯುವುದಿಲ್ಲ
ಏಕೆಂದರೆ, ರಸ್ತೆಯಲಿ ರಕ್ತ ಹರಿಯುತ್ತಿದೆ.
ನಾನು ಮಗುವಿನ ಮುಗ್ಧತೆಯ ಬಗ್ಗೆ ಬರೆಯುವುದಿಲ್ಲ
ಏಕೆಂದರೆ, ರಸ್ತೆಯಲಿ ರಕ್ತ ಹರಿಯುತ್ತಿದೆ
ಕಾನು, ಜೇನು, ಬಾನು, ಹೊನ್ನು ನನ್ನ ಕಾಡುವುದಿಲ್ಲ
ಏಕೆಂದರೆ, ರಸ್ತೆಯಲಿ ರಕ್ತ ಹರಿಯುತ್ತಿದೆ.
ಮನುಷ್ಯನ ಆರ್ದ್ರತೆಯ ಬಗ್ಗೆ ನಾನು ಬರೆಯುವುದಿಲ್ಲ
ಏಕೆಂದರೆ, ವಿಚಾರವಾದಿಗಳ ಗುಂಡಿಕ್ಕಿ ಕೊಲ್ಲುತ್ತಿದ್ದಾರೆ
ಧರ್ಮದ ಪಾರಮ್ಯದ ಬಗ್ಗೆ ನಾನು ಬರೆಯುವುದಿಲ್ಲ
ಏಕೆಂದರೆ, ಮೂಲಭೂತವಾದಿಗಳು ಮಸೀದಿ ಧರೆಗುರುಳಿಸಿದ್ದಾರೆ
ನ್ಯಾಯದೇವತೆಯ ನಿಷ್ಠುರತೆಯ ಬಗ್ಗೆ ನಾನು ಬರೆಯುವುದಿಲ್ಲ
ಏಕೆಂದರೆ, ನ್ಯಾಯಪಾಲಕರು ಬ್ರಹ್ಮಾಂಡ ಭ್ರಷ್ಟಾಚಾರದಲ್ಲಿ ತೊಡಗಿದ್ದಾರೆ

ಹೇ ಭಗವಂತ,
ನಿನ್ನ ಕರುಣೆ, ಪರಿಪಾಲನೆಯ ಬಗ್ಗೆ ನಾನು ಬರೆಯುವುದಿಲ್ಲ
ಏಕೆಂದರೆ,
ಹಾದಿಯಲ್ಲಿ ಹೆಣಗಳು ಬಿದ್ದಿವೆ
ರಸ್ತೆಯಲಿ ರಕ್ತ ಹರಿಯುತ್ತಿದೆ.



**ಎಸ್. ಮಾಲತಿ**
‘ಮಹಾಲಸ’ ನಿಲಯ, ಜೋಗರಸ್ತೆ
ಸಾಗರ – ೫೭೭ ೪೦೧ ಶಿವಮೊಗ್ಗ ಜಿಲ್ಲೆ

೧೯೩೮ರಲ್ಲಿ ದೆಹಲಿಯಲ್ಲಿ ಜನಿಸಿದ ಪ್ರೊಫೆಸರ್ ಉಮಾ ಚಕ್ರವರ್ತಿ ದೆಹಲಿ ವಿಶ್ವವಿದ್ಯಾಲಯದ ಮಿರಾಂಡ ಹೌಸ್‌ನಲ್ಲಿ ಚರಿತ್ರೆಯ ಶಿಕ್ಷಕಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ೧೯೭೦ರಿಂದ ಮಹಿಳಾ ಚಳುವಳಿ ಮತ್ತು ಪ್ರಜಾಸತ್ತಾತ್ಮಕ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಕೊಂಡಿರುವ ಇವರ ಕೊಡುಗೆ ಭಾರತದ ಸ್ತ್ರೀವಾದಿ ಚರಿತ್ರೆಯ ಲೋಕಕ್ಕೆ ಅಮೂಲ್ಯವಾದದ್ದು. ಮಾನವ ಹಕ್ಕುಗಳ ಉಲ್ಲಂಘನೆ, ಕೋಮುಗಲಭೆ ಮತ್ತು ಸರ್ಕಾರದ ದಬ್ಬಾಳಿಕೆಯ ಸಂದರ್ಭಗಳಲ್ಲಿ ಸತ್ಯ ಶೋಧಕ ಸಮಿತಿಯ ಸದಸ್ಯರಾಗಿ ಕೆಲಸ ಮಾಡಿದ್ದಾರೆ. ಜವಹರಲಾಲ್ ವಿಶ್ವವಿದ್ಯಾಲಯದ ಚರಿತ್ರಕಾರ ಕುಂಕುಮ್ ರಾಯ್ ಅವರು ಉಮಾ ಅವರ ಗೌರವಾರ್ಥ ಲೇಖನಗಳ ಸಂಗ್ರಹವನ್ನು ಸಂಪಾದಿಸಿದ್ದಾರೆ. ಇತ್ತೀಚೆಗೆ ಅವರ ಅಭಿವ್ಯಕ್ತಿಯ ಮತ್ತೊಂದು ಆಯಾಮ ದೃಶ್ಯ ಮಾಧ್ಯಮವಾಗಿದ್ದು ಸುಬ್ಬುಲಕ್ಷ್ಮಿ ಮತ್ತು ಮೈಥಿಲಿ ಶಿವರಾಮನ್ ಅವರನ್ನು ಕುರಿತು ಚಿತ್ರ ನಿರ್ದೇಶಿಸಿದ್ದಾರೆ.

**ಹೊಸತು :** ನಮಸ್ಕಾರ. ನಿಮಗೆ 'ಹೊಸತು' ಪರವಾಗಿ ಮಹಿಳಾ ದಿನದ ಶುಭಾಶಯಗಳು. ಇಂದಿನ ಸಮಕಾಲೀನ ಸಂದರ್ಭವನ್ನು ಕುರಿತಂತೆ ನಿಮ್ಮ ವಿಚಾರಗಳನ್ನು ನಮ್ಮ ಓದುಗರೊಂದಿಗೆ ಹಂಚಿಕೊಳ್ಳೋಣ ಅಂತ.

**ಉಮಾ :** ನಮಸ್ಕಾರ. ಹಾಗೇ ಆಗಲಿ.

**ಹೊಸತು :** ಮೇಡಂ, ನೀವು ದೆಹಲಿಯಲ್ಲಿ ಹುಟ್ಟಿ, ಬೆಳೆದವರಾದರೂ ನಿಮಗೂ ಬೆಂಗಳೂರಿಗೂ ಏನೋ ನಂಟಿದೆಯಲ್ಲಾ ?

**ಉಮಾ :** ಹೌದು. ಮೂಲತಃ ನಮ್ಮ ತಂದೆ ಕೇರಳದ ಪಾಲ್‌ಘಾಟ್‌ನವರಾದರೂ ನಂತರ ಉದ್ಯೋಗದ ನಿಮಿತ್ತ ೧೯೨೪ರಲ್ಲಿಯೇ ದೆಹಲಿಗೆ ಹೋಗಿ ನೆಲೆಸಿದವರು. ಹಾಗೇ ಅವರ ನೌಕರಿಯ ಕಾರಣಕ್ಕೆ ಹಲವಾರು ಊರುಗಳನ್ನು ಸುತ್ತಿದ್ದೇವೆ. ಹಾಗೆ, ನಾನು ನನ್ನ ಒಂದೆರಡು ವರ್ಷಗಳ ಶಾಲೆ ಮತ್ತು ಕಾಲೇಜು ಜೀವನವನ್ನು ಬೆಂಗಳೂರಿನಲ್ಲಿ ಕಳೆದಿದ್ದೇನೆ. ಮೌಂಟ್ ಕಾರ್ಮೆಲ್ ಕಾಲೇಜಿನಲ್ಲಿ ಬಿ.ಎ ಮತ್ತು ಸರ್ಕಾರಿ ಲಾ ಕಾಲೇಜಿನಲ್ಲಿ ಓದಿ ಕಾನೂನು ಪದವಿ ಪಡೆದವಳು. ಲಾ ಮಾಡುತ್ತಿರುವಾಗಲೇ ಬನಾರಸ್ ವಿಶ್ವವಿದ್ಯಾಲಯದಿಂದ ಚರಿತ್ರೆಯಲ್ಲಿ ಎಂ.ಎ. ಮಾಡಿದೆ. ನಾನು ಲಾಯರ್ ಆಗಬಹುದಿತ್ತು, ಆದರೆ ಚರಿತ್ರೆಯ ಶಿಕ್ಷಕಿಯಾಗಿ ಉಳಿದೆ.

**ಹೊಸತು :** ನೀವು ಕಳೆದ ನಾಲ್ಕು ದಶಕಗಳಿಂದ, ಅಂದರೆ ವಿಶ್ವ ಮಹಿಳಾ ವರ್ಷ ಘೋಷಣೆಯಾದಾಗಿನಿಂದ ಇಲ್ಲಿಯವರೆಗೆ ಭಾರತದ ಮಹಿಳಾ ಚಳವಳಿಗೆ ಸಾಕ್ಷಿಯಾಗಿದ್ದೀರ. ಅದರ ಬದಲಾದ ಸ್ವರೂಪವನ್ನು ಕುರಿತಂತೆ ನಿಮ್ಮ ವಿಶ್ಲೇಷಣೆಯನ್ನು ನಮ್ಮೊಡನೆ ಹಂಚಿಕೊಳ್ಳಿ.

**ಉಮಾ :** ನನಗೆ ೭೫ನೇ ಇಸವಿಗೂ ಹಿಂದಕ್ಕೆ ಹೋಗಿ ಹೇಳುವ ವಿಚಾರಗಳಿವೆ. ಅರವತ್ತರ ದಶಕದ ಕೊನೆಯ ಭಾಗದಲ್ಲಿ ನಾನು ದೆಹಲಿಯಲ್ಲಿ ಮಿರಾಂಡ ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದಾಗ, ನಮ್ಮ ಸುತ್ತಮುತ್ತ ಭೂಮಿಯ ಹಕ್ಕನ್ನು ಕುರಿತಂತೆ ವಿಶೇಷವಾಗಿ ಚರ್ಚೆ ನಡೆಯುತ್ತಿತ್ತು. ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಜನ ತುಂಬ ಹತಾಶರಾಗಿದ್ದರು. ಕಾಲೇಜುಗಳಲ್ಲಿ ಮುಖ್ಯವಾಗಿ ಪ್ರಜಾಸತ್ತಾತ್ಮಕ ಹಕ್ಕುಗಳ ಬಗ್ಗೆ ವಿಶೇಷ ಚರ್ಚೆ ನಡೆಯುತ್ತಿತ್ತು. ಅಂತಹ ಸಂದರ್ಭದಲ್ಲಿ ನಮ್ಮ ಕಾಲೇಜಿನಲ್ಲಿ ಸೌಂದರ್ಯ ಸ್ಪರ್ಧೆಯೊಂದನ್ನು ಏರ್ಪಡಿಸಲಾಗಿತ್ತು. ಆಗ ಅಲ್ಲಿ ವಿದ್ಯಾರ್ಥಿಗಳಾಗಿದ್ದ 'ಮಾನುಷಿ'ಯ ಮಧು ಕಿಶ್ವರ್ ಮತ್ತು ಊರ್ವಶಿ ಬುಟಾಲಿಯಾ ಮತ್ತು ಅವರ ಸ್ನೇಹಿತರು ಈ ಹೆಣ್ಣಿನ ಸೌಂದರ್ಯ ಸ್ಪರ್ಧೆಯನ್ನು ಪ್ರಬಲವಾಗಿ ಪ್ರತಿಭಟಿಸಿದರು. ಅದಕ್ಕೆಂದು ವಿದ್ಯಾರ್ಥಿಗಳನ್ನು ಸಂಘಟಿಸಿದ್ದರು. ಅಂದರೆ ಹೆಣ್ಣನ್ನು ಒಂದು ಶೋಕಿಯ ವಸ್ತುವಾಗಿ ನೋಡುವುದರ ವಿರುದ್ಧ ಅಂದೇ ಕಲಿತ ಹೆಣ್ಣುಮಕ್ಕಳು ಪ್ರತಿಭಟಿಸಿದ್ದರು.

# ಶೈಕ್ಷಣಿಕ ಕ್ರಿಯಾಶೀಲತೆಯ ಇನ್ನೊಂದು ಹೆಸರು ಉಮಾ ಚಕ್ರವರ್ತಿ




ಸಂದರ್ಶಕರು : ಡಾ|| ಎನ್. ಗಾಯತ್ರಿ

ಇನ್ನು ಆಗ ಶಿಕ್ಷಕರ ಚಳುವಳಿಯೂ ಕ್ರಿಯಾಶೀಲವಾಗಿತ್ತು. ಅದರಲ್ಲೂ ನಾನು ತೊಡಗಿಕೊಂಡಿದ್ದೆ. ಒಟ್ಟಾರೆಯಾಗಿ ಆಗ ಮಹಿಳಾ ಹಕ್ಕುಗಳನ್ನು ಪ್ರಜಾಸತ್ತಾತ್ಮಕ ಹಕ್ಕುಗಳೆಂದೇ ಭಾವಿಸಿಕೊಂಡಿದ್ದವರು ನಾವು.

**ಹೊಸತು :** ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಮಹಿಳಾ ಕ್ರಿಯಾಶೀಲತೆಗೆ ಒಂದು ಹೆಚ್ಚಿನ ಚಾಲನೆ ಸಿಕ್ಕಂತೆ ಆಯಿತಲ್ಲವೆ ?

**ಉಮಾ :** ಹೌದು, ನೀವು ಹೇಳಿದ್ದು ನಿಜ. ಲೋಹಿಯಾ ಸಮಾಜವಾದಿ ಪಕ್ಷ ತುರ್ತು ಪರಿಸ್ಥಿತಿಯನ್ನು ಪ್ರಬಲವಾಗಿ ಪ್ರತಿಭಟಿಸಿತು. ಆ ಪಕ್ಷದ ಹಲವಾರು ಕಾರ್ಯಕರ್ತರು ಪ್ರಜಾಪ್ರಭುತ್ವದ ಚಳುವಳಿಗೆ ಧುಮುಕಿದರು. ನಾನು ಕಂಡಂತೆ ಎಲ್ಲ ಸಮಾಜವಾದಿಗಳಿಗೆ ಅನ್ವಯಿಸಲಾಗದಿದ್ದರೂ ಡಾ॥ ಮನೋಹರ ಲೋಹಿಯಾ ಅವರು ಸ್ತ್ರೀಯರ ಬಗ್ಗೆ ವೈಚಾರಿಕವಾಗಿ ಮತ್ತು ಬದುಕಿನಲ್ಲಿ ಅತ್ಯಂತ ಗೌರವವನ್ನು ಇಟ್ಟುಕೊಂಡಿದ್ದರು. ಇದರಿಂದ ಸುಮಾರು ಸ್ತ್ರೀಯರು ಅವರ ತತ್ವ ಮತ್ತು ಕ್ರಿಯೆಗೆ ಆಕರ್ಷಿತರಾದರು. ತುರ್ತು ಪರಿಸ್ಥಿತಿಯ ಸಮಯದಲ್ಲಿ ಕೆಲವರು ಭೂಗತರಾಗಿದ್ದರು. ಎಮರ್ಜೆನ್ಸಿಯ ಮುಕ್ತಾಯದ ಸಂದರ್ಭ. ಆ ಸಂದರ್ಭದಲ್ಲಿ ನಾನು ಪಿ.ಯು.ಡಿ.ಆರ್. (ಪೀಪಲ್ಸ್ ಯೂನಿಯನ್ ಫಾರ್ ಡೆಮೊಕ್ರಟಿಕ್ ರೈಟ್ಸ್)ನಲ್ಲಿ ಕ್ರಿಯಾಶೀಲವಾಗಿ ತೊಡಗಿಸಿಕೊಂಡಿದ್ದೆ. ಆ ನಂತರ ನಡೆದ ರೈಲ್ವೆ ಮುಷ್ಕರದಲ್ಲಿ ಬೃಹತ್ ಸಂಖ್ಯೆಯಲ್ಲಿ ಜನ ಭಾಗವಹಿಸಿದ್ದರು. ೪೦೦೦ ಜನ ಶಿಕ್ಷಕರು ಮೆರವಣಿಗೆಯಲ್ಲಿ ಸಾಗಿದ್ದರು. ನಾನು ಪಿ.ಯು.ಡಿ.ಆರ್.ನಲ್ಲಿ ೧೯೭೭ರಿಂದ ಕೆಲಸ ಮಾಡುತ್ತಿದ್ದೇನೆ.

ಇನ್ನು ಮಹಿಳಾ ಹಕ್ಕುಗಳ ಚಳುವಳಿಯೂ ನನ್ನ ಮುಖ್ಯ ಆಸಕ್ತಿಯಾಗಿತ್ತು. ೧೯೮೦–೮೨ರ ಸಂದರ್ಭದಲ್ಲಿ ವರದಕ್ಷಿಣೆ ಪದ್ಧತಿ ಮತ್ತು ವಧು ದಹನವನ್ನು ವಿರೋಧಿಸಿ ಹಲವಾರು ಚಟುವಟಿಕೆಗಳು ನಡೆಯುತ್ತಿದ್ದವು. ನನಗಿನ್ನೂ ನೆನಪಿದೆ : ಒಂದು ವಧು ದಹನ ನಡೆದಿತ್ತು. ಆಗ ನಾವೆಲ್ಲಾ ಮೋಟಾರ್ ಮೆಕಾನಿಕ್ ಹೌಸ್‌ನ ಮುಂದೆ ಸೇರಿ ನಾಟಕ, ಪ್ರತಿಭಟನೆ – ಎಲ್ಲ ನಡೆಸಿದ್ದೆವು. ಇದೇ ಸಂದರ್ಭದಲ್ಲಿ ದೆಹಲಿಯಲ್ಲಿ ಮಹಿಳಾ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಒಂದು ದೊಡ್ಡ ಸೆಮಿನಾರ್ ನಡೆಯಿತು. ಅದರಲ್ಲಿ ಅಂದಿನ ಮಹಿಳಾ ಚಿಂತಕಿಯರು ಮತ್ತು ಕಾರ್ಯಕರ್ತರು ಭಾಗವಹಿಸಿದ್ದರು. ಇಲ್ಲಿನ ಚರ್ಚೆಗಳ ನಂತರ ಅಖಿಲ ಭಾರತ ಮಹಿಳಾ ಅಧ್ಯಯನ ಸಂಘ ಹುಟ್ಟಿಕೊಂಡಿತು. ಹೀಗೆ ಮೊದಲಿನಿಂದಲೂ ಅದರ ಜೊತೆ ಸಂಬಂಧ ಇಟ್ಟುಕೊಂಡಿದ್ದೀನಿ. ಈ ದಿಕ್ಕಿನಲ್ಲಿಯೇ ನನ್ನ ಅಧ್ಯಯನ ಮತ್ತು ಬರಹ ನಡೆದಿದೆ.

**ಹೊಸತು :** ನಿಮ್ಮ ಪಿ.ಯು.ಡಿ.ಆರ್.ನ ಪರವಾಗಿ ಹಲವಾರು ಸತ್ಯಶೋಧಕ ಸಮಿತಿಗಳಲ್ಲಿ ನೀವು ಕೆಲಸ ಮಾಡಿದ್ದೀರಿ. ಅದನ್ನು ಕುರಿತು ಹೇಳಿ.

**ಉಮಾ :** ನಾನು ಮದುವೆಯಾದ ನಂತರ, ನನ್ನ ಪತಿ ರಾಜಸ್ಥಾನದಲ್ಲಿ ಪಿಎಚ್.ಡಿ.ಗಾಗಿ ಕ್ಷೇತ್ರಾಧ್ಯಯನ ಮಾಡುತ್ತಿದ್ದ ಹಳ್ಳಿಗೆ ಹೋದೆ. ಆ ಹಳ್ಳಿಯಲ್ಲಿ ನಡೆಯುತ್ತಿದ್ದ ಅಧ್ಯಯನ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಯನ್ನು ಕುರಿತದ್ದಾಗಿತ್ತು. ಅಧ್ಯಯನದ ಜೊತೆಗೆ ಆ ಹಳ್ಳಿಯ ಬದಲಾವಣೆಗೂ ಕೆಲಸ ಮಾಡುವುದು ನನ್ನ ಉದ್ದೇಶವಾಗಿತ್ತು. ಸುಮಾರು ಒಂದು ವರ್ಷ ಆ ಹಳ್ಳಿಯಲ್ಲಿ ಕಳೆದ ಮೇಲೆ, ಅಲ್ಲಿ ಯಾವುದೇ ರಚನಾತ್ಮಕ ಬದಲಾವಣೆ ಸಾಧ್ಯವಿಲ್ಲ ಎಂಬ ತೀರ್ಮಾನಕ್ಕೆ ಬಂದೆವು. ನಾನು ಮತ್ತು ನನ್ನ ಪತಿ ಆನಂದ್ ಚಕ್ರವರ್ತಿ ಇಬ್ಬರೂ ಮುಂದೆ ಹಲವಾರು ಸತ್ಯಶೋಧಕ ಸಮಿತಿಗಳಲ್ಲಿ ಕೆಲಸ ಮಾಡಿದ್ದೇವೆ.



*ಉಮಾ ಚಕ್ರವರ್ತಿಯವರ ಜೊತೆ ಸಂದರ್ಶಕಿ ಡಾ॥ ಎನ್. ಗಾಯತ್ರಿ*

ಮೊದಲಿಗೆ ಹೇಳಬೇಕೆಂದರೆ ದೇಶ ವಿಭಜನೆಯಾದಾಗ ನಾನಿನ್ನೂ ಆರು ವರ್ಷಗಳ ಹುಡುಗಿ. ದೆಹಲಿಯಲ್ಲೇ ಇದ್ದ ನನಗೆ ಅಂದಿನ ಕೋಮುಗಲಭೆಯ ರಕ್ತಸಿಕ್ತ ದೃಶ್ಯಗಳು ಕಣ್ಣಿಗೆ ಕಟ್ಟಿದಂತೆ ಇವೆ. ಅದು ನನ್ನ ಕನಸಿನಲ್ಲೂ ಆಗಾಗ ಕಾಡುತ್ತಿತ್ತು. ಹೀಗಿರುವಾಗ, ೧೯೮೪ರಲ್ಲಿ ಸಿಖ್ಖರ ಮೇಲೆ ನಡೆದ ಹತ್ಯಾಕಾಂಡಕ್ಕೆ ನಾನು ಪ್ರತ್ಯಕ್ಷದರ್ಶಿಯಾಗಿದ್ದೆ. ೧೭ ದಿನಗಳ ಕಾಲ ನಡೆದ ಈ ನಿರಂತರ ಕೊಲೆ, ಸುಲಿಗೆಯನ್ನು ನೋಡಿದ ಮೇಲೆ ನನಗಿನ್ನೂ ಹೊಟ್ಟೆಯಲ್ಲಿ ಕಲಕಿದಂತಾಗುತ್ತದೆ. ಆ ನಂತರ ಆಘಾತಕ್ಕೆ ಒಳಗಾದ ಜನರನ್ನು ಭೇಟಿ ಮಾಡಿ, ಅವರೊಂದಿಗೆ ಮಾತಾಡಿ ಸಂಗ್ರಹಿಸಿದ ಅಪಾರ ಮಾಹಿತಿಯೇ 'ದೆಹಲಿ ದಂಗೆಗಳು : ದೇಶದ ಬದುಕಿನಲ್ಲಿ ಮೂರು ದಿನಗಳು'. ಸುಮಾರು ೬೫೮ ಪುಟಗಳಿರುವ ಈ ಪುಸ್ತಕವನ್ನು ನಂದಿತಾ ಹಕ್ಸರ್ ಜೊತೆಗೂಡಿ ರಚಿಸಿದ್ದೇನೆ. ೧೯೯೩ರಲ್ಲಿ ಬಿಹಾರದ ಭಾಗಲ್ಪುರದಲ್ಲಿ ನಡೆದ ಹತ್ಯಾಕಾಂಡದಲ್ಲೂ ಆ ಸ್ಥಳಕ್ಕೆ ಭೇಟಿ ನೀಡಿ ಸತ್ಯಾಂಶಗಳನ್ನು ಸಂಗ್ರಹಿಸಿ ವರದಿ ಮಾಡಿದ್ದೇವೆ. ಮತ್ತೆ, ಕುಖ್ಯಾತಿಯ ಗುಜರಾತ್ ಹತ್ಯಾಕಾಂಡದ ಸಂದರ್ಭದಲ್ಲೂ ನಮ್ಮ ತಂಡದಿಂದ ತೊಂದರೆಗೀಡಾದ ಸ್ಥಳಕ್ಕೆ ಭೇಟಿ ನೀಡಿ ಪ್ರತ್ಯಕ್ಷ ಅನುಭಗಳನ್ನು ದಾಖಲಿಸಿದ್ದೇವೆ.

**ಹೊಸತು :** ನಿಮ್ಮ ಬರಹಗಳು ನಿಮ್ಮ ಕ್ರಿಯಾಶೀಲತೆಯ ಭಾಗವಾಗಿಯೇ ಮೂಡಿಬಂದಿವೆಯೇ ?

**ಉಮಾ :** ಪಾಂಡಿತ್ಯ ಕ್ರಿಯಾಶೀಲವಾಗಿರಬೇಕು. ಇಲ್ಲದಿದ್ದರೆ ಅದಕ್ಕೇನು ಬೆಲೆ ? ಎಪ್ಪತ್ತು, ಎಂಭತ್ತರ ದಶಕಗಳಲ್ಲಿ ದೆಹಲಿ ವಿಶ್ವವಿದ್ಯಾಲಯ ಹಲವಾರು ಚಟುವಟಿಕೆಗಳ ಆಗರವಾಗಿತ್ತು. ಚರಿತ್ರೆಯ ವಿದ್ಯಾರ್ಥಿನಿಯಾಗಿ ಮೊದಲಿಗೆ ಮಹಿಳಾ ಶೋಷಣೆಗೂ ನಮ್ಮ ಸಂಸ್ಕೃತಿ, ಪರಂಪರೆಗೂ ಇರುವ ಸಂಬಂಧ ಕುರಿತ ಬರವಣಿಗೆ ನಡೆಸಿದೆ. 'ಪುರಾಣ ಮತ್ತು ಸಾಹಿತ್ಯದಲ್ಲಿ ಸೀತೆ' ನನ್ನ ಮೊದಲ ಲೇಖನವಾಗಿತ್ತು. ನಂತರ ಬೌದ್ಧ ಧರ್ಮದಲ್ಲಿ ಹೆಣ್ಣಿನ ಸ್ಥಾನಮಾನ ಕುರಿತ ನನ್ನ ಲೇಖನ ಪ್ರಕಟ ಮಾಡಲಾಯಿತು. ನಂತರ ನನ್ನ ಬರಹಗಳು ವಿಶೇಷವಾಗಿ ಲಿಂಗ, ಜಾತಿ ಮತ್ತು ವರ್ಗದ ವಿಶ್ಲೇಷಣೆಯತ್ತ ಕೇಂದ್ರೀಕರಿಸಿದವು. ೧೯೮೮ರಲ್ಲಿ ಪಂಡಿತಾ ರಮಾಬಾಯಿಯ ಬದುಕಿನ ವಿಶ್ಲೇಷಣೆಯ ಕೃತಿ ಹೊರಬಂತು. ನನ್ನ ಕುಟುಂಬದಲ್ಲೇ ಇದ್ದ ವಿಧವೆಯರ ಜೀವನ ನನ್ನ ಮನಸ್ಸನ್ನು ತಟ್ಟಿತ್ತು. 'ವಿಧವತ್ವವನ್ನು ಕುರಿತ ಬರಹಗಳು' ೨೦೦೦ದಲ್ಲಿ ಹೊರಬಂತು. 'ಸ್ತ್ರೀವಾದಿ ಕಣ್ಣಿನಿಂದ ಲಿಂಗ ಮತ್ತು ಜಾತಿ'ಯನ್ನು ೨೦೦೪ರಲ್ಲಿ ಪ್ರಕಟ ಮಾಡಲಾಯಿತು. ಇದಕ್ಕೂ ಮುಂಚೆಯೇ ೧೯೮೭ರಲ್ಲಿಯೇ 'ಪ್ರಾಚೀನ ಬೌದ್ಧ ಧರ್ಮದ ಸಾಮಾಜಿಕ ಆಯಾಮಗಳು' – ಎಂಬ ನನ್ನ ಪುಸ್ತಕ ಪ್ರಕಟವಾಗಿತ್ತು.

**ಹೊಸತು :** ಮಹಿಳಾ ಚಳುವಳಿಗೆ ಸಂಬಂಧಿಸಿದಂತೆ ನನ್ನದೊಂದು ಮುಖ್ಯ ಪ್ರಶ್ನೆ : ತೊಂಭತ್ತರ ದಶಕದ ನಂತರ ಐಡೆಂಟಿಟಿ ರಾಜಕೀಯ ಹೆಚ್ಚು ಮುನ್ನೆಲೆಗೆ ಬಂದಿದೆ. ಹಾಗೆಯೇ ಕಳೆದ ದಶಕಗಳಿಂದೀಚೆಗೆ ನಾವು ಹೆಚ್ಚು ಹೆಚ್ಚು ಒಳಗೊಳ್ಳುವ ರಾಜಕೀಯದತ್ತಲೂ ಮಾತನಾಡುತ್ತಿದ್ದೇವೆ. ಈ ಎರಡೂ ಪರಿಕಲ್ಪನೆಗಳು ಪೂರಕವಾಗಿ ಕೆಲಸ ಮಾಡಬಲ್ಲವೆ ?

**ಉಮಾ :** ಅನುಮಾನ ಏಕೆ ? ನಿಮ್ಮ ಪ್ರಶ್ನೆಯಲ್ಲೇ ಉತ್ತರ ಇದೆ. ನಾವು ಮಹಿಳಾ ಚಳುವಳಿಯಲ್ಲಿ ಕ್ರಿಯಾಶೀಲವಾಗಿದ್ದಾಗಲೂ ಆರಂಭದಲ್ಲಿ ಇಲ್ಲದ ಹಲವಾರು ಗುಂಪುಗಳು ತಮ್ಮ ಅಸ್ಮಿತೆಗಾಗಿ ಹೋರಾಡುತ್ತಿದ್ದವು. ತಿಳುವಳಿಕೆ ಹೆಚ್ಚಿದಂತೆ, ದಲಿತ, ಬುಡಕಟ್ಟು, ಅಲ್ಪಸಂಖ್ಯಾತ ಮಹಿಳೆಯರಿಂದ ಹಿಡಿದು ಭಿನ್ನ ಲಿಂಗಿಯರು ಮತ್ತಿತರರು ತಮ್ಮ ಅಸ್ಮಿತೆಗೆ ಮತ್ತು ಹಕ್ಕುಗಳಿಗಾಗಿ ಹೋರಾಟ ನಡೆಸಿರುವುದರಿಂದಲೇ ಮಹಿಳಾ ಚಳುವಳಿಯ ವ್ಯಾಪ್ತಿ ಹಿಗ್ಗಿದೆ, ಸಮಾಜದ ನಿಜ ಪ್ರತಿನಿಧಿಯಾಗಹೊರಟಿದೆ. ಆದ್ದರಿಂದ ಇದು ಸ್ವಾಗತಾರ್ಹ ಬದಲಾವಣೆಯೇ.

ಸಾಮಾಜಿಕ ಒಳಗೊಳ್ಳುವಿಕೆಯ ವಿಷಯದಲ್ಲೂ ಇದನ್ನೇ ಹೇಳಬಹುದು. ೧೯೮೪ರಲ್ಲಿ ಗುಜರಾತ್‌ನಲ್ಲಿ ನಡೆದ ಕೊಲೆ ಸುಲಿಗೆಯಲ್ಲಿ ಜಾಡಮಾಲಿಗಳನ್ನು ಮೇಲು ಜಾತಿಯವರು ಬಳಸಿಕೊಂಡಿದ್ದರು, ಎಂದು ಹೇಳುವ ಸಂಭ್ರಮದಲ್ಲಿ ಮೇಲು ಜಾತಿಯವರು ಸ್ವತಃ ಕೊಲೆ, ಸುಲಿಗೆಗಳನ್ನು ಮಾಡಿದ್ದರು, ಅದನ್ನು ಹೇಳುವುದೇ ಇಲ್ಲ. ಇಲ್ಲಿ ಮಾಡಿಸಿದವರು ಮರೆಯಾಗಿ ಬಿಡುತ್ತಾರೆ. ಭಾಗಲ್ಪುರದಲ್ಲೂ ಅಷ್ಟೇ, ಇತರ ಹಿಂದುಳಿದ ವರ್ಗದವರನ್ನು ಸಂಘಟಿಸಿ

## ನಿನ್ನ ವಿರಹದ

ಬೇಗೆಯ ಶಕೆ
ಬಿಸಿಲಿಗು ಇಲ್ಲ
ಬೆಂಕಿಗು ಇಲ್ಲ
ಕಾಯ್ದ ಯಾವ ಸೀಸಕ್ಕೂ
ಇಲ್ಲ ಆದರೆ
ಅದನ್ನು ಆರಿಸಲು
ಮಾತ್ರ ಪ್ರೀತಿಯ
ನಿನ್ನ ಹೂನಗೆಯೊಂದು
ಸಾಕು.

ಎಂ. ಜಿ. ದೇಶಪಾಂಡೆ
ಬೀದರ್ – ೩

ಕೊಲೆ ಸುಲಿಗೆಯನ್ನು ಮಾಡಲು ಬಳಸಿಕೊಳ್ಳಲಾಗಿತ್ತು ಎಂದು ಹೇಳುವಾಗ ಭೂಮಿಯನ್ನು ಕಬಳಿಸಿಕೊಳ್ಳಲು ಮೇಲು ಜಾತಿಯವರು ನಡೆಸಿದ ಹುನ್ನಾರವನ್ನು ಮುಚ್ಚಲಾಗುತ್ತದೆ. ಹೌದು, ಒಳಗೊಳ್ಳುವ ಪ್ರಕ್ರಿಯೆಯ ಬಗ್ಗೆ ನಾವು ಮಾತನಾಡುವ ಭಾಷೆಯ ಬಗ್ಗೆ ಎಚ್ಚರದಿಂದ ಇರಬೇಕಾಗುತ್ತದೆ. ಹಾಗೆಯೇ ದಲಿತರ ನೋವನ್ನು ಅರ್ಥ ಮಾಡಿಕೊಳ್ಳದೆ ಬೀಸು ಹೇಳಿಕೆಗಳನ್ನು ನೀಡಬಾರದು. ಶರ್ಮಿಳಾ ರೇಗಿ ದಲಿತ ಮೀಮಾಂಸೆಯ ಬಗ್ಗೆ ಬರೆದ ಲೇಖನವನ್ನು ಗಮನಿಸಿ. ಮೇಲು ಜಾತಿಯವರು ತಾವು ಇದುವರೆಗೂ ಅನುಭವಿಸುತ್ತಿರುವ ಸವಲತ್ತುಗಳನ್ನು ತ್ಯಾಗ ಮಾಡಬೇಕು.

ಇವತ್ತು ಹೈದರಾಬಾದ್ ಅಥವಾ ಜವಹರಲಾಲ್ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ವಿದ್ಯಮಾನವನ್ನು ಗಮನಿಸಿ. ಕನ್ಹಯ್ಯನ ಮಾತುಗಳನ್ನು ಕೇಳಿ. ಅದೊಂದು ಕ್ಲಾಸಿಕ್ ಉದಾಹರಣೆ. ಕೆಂಪು ಮತ್ತು ನೀಲಿಯನ್ನು ಹತ್ತಿರ ತರಬೇಕಾದದ್ದು ಇಂದಿನ ತುರ್ತು.

**ಹೊಸತು :** ಮೇಡಂ, ನೀವು ಈಗ ಜೆ.ಎನ್.ಯು.ನಲ್ಲಿ ಅತಿಥಿ ಉಪನ್ಯಾಸಕರಾಗಿ ಕೆಲಸ ಮಾಡುತ್ತಿದ್ದೀರಿ. ಆ ಘಟನೆ ನಡೆದಾಗ ನಿಮ್ಮ ಅನುಭವವೇನು ?

**ಉಮಾ :** ಹೌದು, ಇದ್ದೆವು. ಆ ಹುಡುಗರೆಲ್ಲಾ ನಮ್ಮ ಮುಂದೆಯೇ ಓಡಾಡುತ್ತಿದ್ದವರಲ್ಲಾ. ಆದರೂ ನಡೆದದ್ದು ತುಂಬಾ ಅನ್ಯಾಯ. ಒಂದು ರೀತಿಯಲ್ಲಿ ಇದು ಅಘೋಷಿತ ಎಮರ್ಜೆನ್ಸಿ. ಈ ವಿಶ್ವವಿದ್ಯಾಲಯಗಳು ನಿಜವಾಗಿಯೂ ಒಳಗೊಳ್ಳುವ ರಾಜಕೀಯಕ್ಕೆ ಉತ್ತಮ ಉದಾಹರಣೆಗಳು.

**ಹೊಸತು :** ಮೇಡಂ, ಕೊನೆಯ ಪ್ರಶ್ನೆ. ಸಾಮಾನ್ಯನ ದೃಷ್ಟಿಯಲ್ಲಿ ಜಾಗತಿಕ ಸಮ್ಮೇಳನಗಳಿಗೆ ಅರ್ಥ ತುಂಬುವುದು ಹೇಗೆ ?

**ಉಮಾ :** ತಕ್ಷಣಕ್ಕೆ ನೋಡಿದಾಗ ಸಾಮಾನ್ಯಕ್ಕೆ ಇವೆಲ್ಲಾ ಅರ್ಥಹೀನ ಎನಿಸಬಹುದು. ಆದರೆ, ಲಿಂಗಕ್ಕೆ ಸಂಬಂಧಪಟ್ಟ ಹಿಂಸೆ ಜಾಗತಿಕವಾದುದಲ್ಲವಾ? ಉದಾಹರಣೆಗೆ ಸೀಡಾ (CEDA) ಸಮ್ಮೇಳನದ ತೀರ್ಮಾನಗಳು ಪ್ರತಿಯೊಬ್ಬ ಪ್ರಜೆಗೂ ಪರಿಹಾರವನ್ನು ನೀಡುವಂತಹುದೇ. ಹೀಗೆ ಗುಜರಾತ್ ಹತ್ಯಾಕಾಂಡದ ಸಂದರ್ಭದಲ್ಲೂ ಅಂತರರಾಷ್ಟ್ರೀಯ ನ್ಯಾಯಾಲಯಕ್ಕೂ ಈ ವಿಷಯವನ್ನು ಕೊಂಡೊಯ್ಯಲಾಯಿತು.

**ಮೇಡಂ :** ಈಗ ಸಮಯ ಹನ್ನೊಂದುವರೆ. ನಿಮ್ಮನ್ನು ಇಷ್ಟರವರೆಗೆ ನಿಲ್ಲಿಸಿಕೊಂಡದ್ದಕ್ಕೆ ಕ್ಷಮೆಯಿರಲಿ. ಶುಭರಾತ್ರಿ.

ನಮ್ಮ ಮಾತುಕತೆ ಮುಗಿದಾಗ ರಾತ್ರಿ ಹನ್ನೊಂದುವರೆ ಆಗಿತ್ತು. ಇಡೀ ದಿನ ಬಿಡುವಿಲ್ಲದೆ ಕ್ರಿಯಾಶೀಲವಾಗಿದ್ದ ಎಪ್ಪತ್ತೈದರ ವಸಂತದ ಈ ಮಹಿಳೆಯ ಚೈತನ್ಯಕ್ಕೆ ದಣಿವೇ ಇರಲಿಲ್ಲ. ನಾನು ಮತ್ತು ನನ್ನ ಜೊತೆಗಿದ್ದ ಡಾ॥ ರತಿ ರಾವ್ ಇಬ್ಬರೂ ಅವರಿಗೆ ವಂದಿಸಿ ಕೊಠಡಿಯಿಂದ ಹೊರಬಿದ್ದೆವು.

*ಕರ್ನಾಟಕ ಮಹಿಳಾ ದೌರ್ಜನ್ಯ ವಿರೋಧಿ ಒಕ್ಕೂಟವು ಮಾರ್ಚ್ ೮–೯ರಂದು ಬಿಜಾಪುರದಲ್ಲಿ ಅಂತರರಾಷ್ಟ್ರೀಯ ದಿನವನ್ನು ಆಚರಿಸಿತು. ಮಾರ್ಚ್–೮ರಂದು ಆಯೋಜಿಸಿದ್ದ "ಮಹಿಳೆ ಮತ್ತು ಸಮಕಾಲೀನ ಬಿಕ್ಕಟ್ಟು" ಎಂಬ ರಾಷ್ಟ್ರೀಯ ವಿಚಾರ ಸಂಕಿರಣವನ್ನು ಉದ್ಘಾಟಿಸಲು ದೆಹಲಿಯಿಂದ ಡಾ॥ ಉಮಾ ಚಕ್ರವರ್ತಿಯವರು ಆಗಮಿಸಿದ್ದರು. ಇದೇ ಸಂದರ್ಭದಲ್ಲಿ ಅವರನ್ನು ಹೊಸತುಗಾಗಿ ಎನ್. ಗಾಯತ್ರಿಯವರು ಸಂದರ್ಶಿಸಿದ್ದಾರೆ.*

ಸಂದರ್ಶಕರು : **ಡಾ॥ ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್, ಕೆಂಪೇಗೌಡ ನಗರ
ಗವೀಪುರಂ, ಬೆಂಗಳೂರು – ೫೬೦ ೦೧೯

## ಶೌರ್ಯ – ಕ್ರೌರ್ಯ




ಶತ್ರು ಸಂಹಾರದಲಿ
ದೇಶ ರಕ್ಷಣೆಯಲಿ
ಶತ್ರುಗಳ ಕೊಂದರೂ
ವೈರಿಗಳಿಂದ ಕೊಲ್ಲಲ್ಪಟ್ಟರೂ
ಅದು ಸಾಹಸ ಶೌರ್ಯ....

ಅನಂತ ಗಡಿಗಳ ಹುಟ್ಟಿಸಿ
ಅಭೇದ್ಯ ಬೇಲಿಗಳ ಸೃಷ್ಟಿಸಿ
ವಿನಾಶಿ ಅಸ್ತ್ರಗಳುತ್ಪಾದಿಸಿ
ಮಾರಣಹೋಮ ಮಾಡುವುದು
ಮನುಕುಲದ ಮಹಾ ಕ್ರೌರ್ಯ...

ಧರ್ಮ ಭಕ್ತಿಯ ಅಫೀಮಿನಮಲಿನಲಿ
ದೇಶಭಕ್ತಿಯ ಅದಮ್ಯ ಆವೇಶದಲಿ
ಯಾರು ಯಾರನ್ನೇ ಕೊಂದರೂ
ಸತ್ತವರಂತೂ ಅಸಲಿ ಮನುಷ್ಯರು
ರಕ್ತಪಾತ ಮೆಚ್ಚುವನೇ ನಿಮ್ಮ ದೇವರು...

ದೇಶವಾಳುವವರು ಸಕಲ ಸುಖಾನುಭವಿಗಳು
ದೇಶಕಾಯುವವರು ಸಾವಿನ ಮನೆ ಅತಿಥಿಗಳು
ಗಡಿಕಾಯುವವರು ದೇಶವಾಳಲಿ
ದೇಶವಾಳುವವರು ಗಡಿಕಾಯಲಿ
ಆಳುವವರಿಗೆ ಅಮಾಯಕರ ಸಂಕಟ ಅರಿವಾಗಲಿ...

ಶಸ್ತ್ರಗಳು ಸರ್ವನಾಶವಾಗುವವರೆಗೂ
ಎಲ್ಲಾ ದೇಶಗಳಿಗೂ ನೆಮ್ಮದಿಯೆಂಬುದೆಲ್ಲಿ...
ಹಿಂಸೋತ್ಪಾದಕ ಧರ್ಮಗಳು ಅಳಿಯುವವರೆಗೂ
ಸುಖ ಶಾಂತಿಯೆಂಬುದು ಬರೀ ಕನಸಲ್ಲಿ...

ಬುದ್ಧ ಬಂದ ಶಾಂತಿ ಎಂದ
ಏಸು ಬಂದ ಸಹನೆ ಎಂದ
ಗಾಂಧಿ ಬಂದ ಅಹಿಂಸೆ ಎಂದ
ಬುದ್ಧ ಏಸು ಗಾಂಧಿಗಳ ಕೊಂದು
ಅಸಹನೆ ಬಿತ್ತಿ ಬೆಳೆವ ಜಗದಿ ನೆಮ್ಮದಿಯೆಲ್ಲಿ...

**ಶಶಿಕಾಂತ ಯಡಹಳ್ಳಿ**
'ಪ್ರಗತಿ ನಿವಾಸ', ನಂ. ೧೩೧, ಶ್ರೀರಾಮ ದೇವಸ್ಥಾನದ ರಸ್ತೆ
ದೊಮ್ಮಲೂರು, ಬೆಂಗಳೂರು – ೫೬೦ ೦೭೧



ಕರ್ನಾಟಕ ಸರ್ಕಾರ

ಸಾರ್ವಜನಿಕ ಗ್ರಂಥಾಲಯ ಇಲಾಖೆ

# ನಗರ ಕೇಂದ್ರ ಗ್ರಂಥಾಲಯ

ಪಶ್ಚಿಮ ವಲಯ, ಹಂಪಿನಗರ, ಬೆಂಗಳೂರು-560104

ದೂರವಾಣಿ : 23209691



## ಸದಸ್ಯತ್ವ ಅಭಿಯಾನ

ಮಾನ್ಯರೇ,

ಬೆಂಗಳೂರು ನಗರ ಕೇಂದ್ರ ಗ್ರಂಥಾಲಯ, ಪಶ್ಚಿಮ ವಲಯ ವ್ಯಾಪ್ತಿಯ ವಿವಿಧ ಬಡಾವಣೆಗಳಲ್ಲಿ 21 ಶಾಖಾ ಗ್ರಂಥಾಲಯಗಳು / 12 ವಾಚನಾಲಯಗಳು / 08 ಗ್ರಾಮ ಪಂಚಾಯತಿ ಗ್ರಂಥಾಲಯಗಳು ಕೆಲಸ ನಿರ್ವಹಿಸುತ್ತಿವೆ. ಇದಲ್ಲದೇ ಹಂಪಿನಗರದ "ಶ್ರೀ ವಿದ್ಯಾರಣ್ಯ ಭವನ" ಸುಸಜ್ಜಿತ ಗ್ರಂಥಾಲಯ ಕಟ್ಟಡದಲ್ಲಿ ವಿವಿಧ ಆಧುನಿಕ ಸೌಲಭ್ಯದೊಂದಿಗೆ ಮಕ್ಕಳಿಗಾಗಿ ಪ್ರತ್ಯೇಕ ಮಕ್ಕಳ ವಿಭಾಗ ತೆರೆಯಲಾಗಿದೆ. ಉಚಿತ ಅಂತರಜಾಲ (Wi-fi) ಸೌಲಭ್ಯವು ಸಹ ಇದ್ದು ಸಾರ್ವಜನಿಕ ಓದುಗರು ಇದರ ಉಪಯೋಗ ಪಡೆಯುತ್ತಿದ್ದಾರೆ.

IAS / KASಪರೀಕ್ಷಾರ್ಥಿಗಳಿಗೆ ಎಂ. ಸಿ. ಲೇಔಟ್, ವಿಜಯನಗರ ಇಲ್ಲಿ ಡಾ॥ ವಿಷ್ಣುವರ್ಧನ್ ಸ್ಪರ್ಧಾತ್ಮಕ ಪರೀಕ್ಷೆಗಳ ಅಧ್ಯಯನ ಕೇಂದ್ರವನ್ನು ತೆರೆಯಲಾಗಿದೆ. ಸದರಿ ಕೇಂದ್ರವನ್ನು ಉಪಯೋಗಿಸಿಕೊಂಡು ಹಲವಾರು ಪರೀಕ್ಷಾರ್ಥಿಗಳು IAS / KAS ಪೂರ್ವಭಾವಿ ಹಾಗೂ ಮುಖ್ಯ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುತ್ತಾರೆ.

ಈ ಕೆಳಕಂಡ ಶಾಖಾ ಗ್ರಂಥಾಲಯಗಳಲ್ಲಿ ಓದುಗರ ಅನುಕೂಲಕ್ಕಾಗಿ ಉಚಿತ ಅಂತರಜಾಲ (Wi-fi) ಸೌಲಭ್ಯವನ್ನು ಒದಗಿಸಲಾಗಿದೆ.

| | |
|---|---|
| 1. | ಹಂಪಿನಗರ ಶಾಖೆ |
| 2. | ವಿಜಯನಗರ ಶಾಖೆ |
| 3. | ಡಾ॥ ವಿಷ್ಣುವರ್ಧನ್ ಸ್ಪರ್ಧಾತ್ಮಕ ಪರೀಕ್ಷೆಗಳ ಅಧ್ಯಯನ ಕೇಂದ್ರ ಎಂ. ಸಿ. ಲೇಔಟ್ |
| 4. | ಡಾ॥ ಅಂಬೇಡ್ಕರ್ ಕ್ರೀಡಾಂಗಣ ಆವರಣ ಶಾಖೆ, ಬಸವೇಶ್ವರ ನಗರ |
| 5. | ಮಾಗಡಿ ರಸ್ತೆ, ಪೊಲೀಸ್ ಕಾಲೋನಿ ಶಾಖೆ (ಟೋಲ್ ಗೇಟ್ ಹತ್ತಿರ) |

ಓದಿನ ಜೊತೆಗೆ ಪ್ರತಿ ತಿಂಗಳು 11ನೇ ತಾರೀಖಿಗೆ ಹಂಪಿನಗರದ "ಗ್ರಂಥಾಂಗಣ"ದಲ್ಲಿ ನಗರ ಕೇಂದ್ರ ಗ್ರಂಥಾಲಯ, ಪಶ್ಚಿಮ ವಲಯ ಹಾಗೂ ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್ ಇವರ ಸಹಯೋಗದೊಂದಿಗೆ "ಓದಿನರಮನೆಯಲ್ಲಿ ತಿಂಗಳ ಒನಪು" ಎಂಬ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಿ ಓದುಗರಿಗೆ ಸಾಂಸ್ಕೃತಿಕ ರಸದೌತಣ ನೀಡಲಾಗುತ್ತಿದೆ.

ಗ್ರಂಥಾಲಯದಲ್ಲಿ ಓದುಗರಿಗೆ ಹೆಚ್ಚಿನ ಸೌಲಭ್ಯ ಒದಗಿಸುವಲ್ಲಿ ಗ್ರಂಥಾಲಯದ ಪಿತಾಮಹರಾದ ಡಾ॥ ಎಸ್. ಆರ್. ರಂಗನಾಥನ್ ಅವರ ಪಂಚಸೂತ್ರಗಳನ್ನು ಅಳವಡಿಸಲಾಗಿದೆ.

### ಗ್ರಂಥಾಲಯದ ಪಂಚಸೂತ್ರಗಳು

1. ಗ್ರಂಥಗಳು ಉಪಯೋಗಕ್ಕಾಗಿ
2. ಪ್ರತಿಯೊಂದು ಪುಸ್ತಕಕ್ಕೆ ಅದರ ಓದುಗ
3. ಪ್ರತಿಯೊಬ್ಬ ಓದುಗನಿಗೆ ಅವನ ಪುಸ್ತಕ
4. ಓದುಗನ ಸಮಯ ಉಳಿಸಿ
5. ಗ್ರಂಥಾಲಯ ಒಂದು ಬೆಳೆಯುವ ಸಂಸ್ಥೆ

### ಸಾರ್ವಜನಿಕ ಗ್ರಂಥಾಲಯ ಜನಸಾಮಾನ್ಯರ ವಿಶ್ವವಿದ್ಯಾಲಯ

ಸಾರ್ವಜನಿಕರಿಗೆ ಓದುವ ಸೌಲಭ್ಯಗಳನ್ನು ಒದಗಿಸಲು ಕರ್ನಾಟಕ ಸರ್ಕಾರವು 1965ರಲ್ಲಿ ಸಾರ್ವಜನಿಕ ಗ್ರಂಥಾಲಯಗಳ ಕಾಯ್ದೆಯನ್ನು ಜಾರಿಗೊಳಿಸಿದೆ. ಈ ಕಾಯ್ದೆಯಂತೆ ಸಾರ್ವಜನಿಕರು ಗ್ರಂಥಾಲಯಗಳಲ್ಲಿ ಉಚಿತವಾಗಿ ಪುಸ್ತಕ, ದಿನಪತ್ರಿಕೆ ಮತ್ತು ನಿಯತಕಾಲಿಕೆಗಳನ್ನು ಓದುವ ಅವಕಾಶ ಕಲ್ಪಿಸಲಾಗಿದೆ.

ರಾಜ್ಯಮಟ್ಟದಲ್ಲಿ ರಾಜ್ಯ ಗ್ರಂಥಾಲಯ ಪ್ರಾಧಿಕಾರವನ್ನು ನಗರಗಳಲ್ಲಿ ನಗರ ಗ್ರಂಥಾಲಯ ಪ್ರಾಧಿಕಾರವನ್ನು ಪ್ರತಿಯೊಂದು ಜಿಲ್ಲೆಯಲ್ಲಿ ಜಿಲ್ಲಾ ಗ್ರಂಥಾಲಯ ಪ್ರಾಧಿಕಾರವನ್ನು ರಚಿಸಲಾಗಿದೆ.

ರಾಜ್ಯ ಕೇಂದ್ರ ಗ್ರಂಥಾಲಯವು ಬೆಂಗಳೂರಿನ ಕಬ್ಬನ್‌ಪಾರ್ಕ್‌ನಲ್ಲಿರುವ ಶೇಷಾದ್ರಿ ಅಯ್ಯರ್ ಭವನದಲ್ಲಿ ಸೇವೆ ಸಲ್ಲಿಸುತ್ತಿದೆ. ಇಲ್ಲಿ ಪ್ರೆಸ್ ಅಂಡ್ ರಿಜಿಸ್ಟ್ರೇಷನ್ ಆಫ್ ಬುಕ್ ಆ್ಯಕ್ಟ್ 1867ರ ಅಡಿಯಲ್ಲಿ ಸ್ವೀಕರಿಸಲಾದ ಪುಸ್ತಕದ ಒಂದು ಪ್ರತಿಯನ್ನು ಶೇಖರಿಸಲಾಗುತ್ತಿದೆ.

ಗ್ರಂಥಾಲಯದ ಆವರಣದೊಳಗೆ ನೀವು ಗ್ರಂಥ ಹಾಗೂ ದಿನಪತ್ರಿಕೆ / ನಿಯತಕಾಲಿಕೆಗಳನ್ನು ಉಚಿತವಾಗಿ ಓದಬಹುದು, ನೀವು ಮನೆಗೆ ಗ್ರಂಥಗಳನ್ನು ಎರವಲು ಪಡೆಯಲು ಇಚ್ಛಿಸುವಿರಾದರೆ ಕೇವಲ ಅಲ್ಪ ಮೊತ್ತದ ಠೇವಣಿ ಮಾಡಿ ಸದಸ್ಯತ್ವ ಪಡೆಯಬೇಕು. ನೀವು ನಿಮ್ಮ ಸದಸ್ಯತ್ವ ರದ್ದು ಮಾಡಿದರೆ ಠೇವಣಿ ಇಟ್ಟ ಪೂರ್ಣ ಹಣವನ್ನು ಮರುಪಾವತಿ ಮಾಡಲಾಗುವುದು. ಪ್ರಸ್ತುತ ಈ ಕಛೇರಿ ವ್ಯಾಪ್ತಿಯ ಗ್ರಂಥಾಲಯಗಳಲ್ಲಿ ಒಟ್ಟು 48,461 ಸದಸ್ಯರಿದ್ದಾರೆ.

**ಸಾರ್ವಜನಿಕರು ಹೆಚ್ಚಿನ ಸಂಖ್ಯೆಯಲ್ಲಿ ನಮ್ಮ ವಲಯ ವ್ಯಾಪ್ತಿಯ ಶಾಖಾ ಗ್ರಂಥಾಲಯ, ವಾಚನಾಲಯಗಳು ಹಾಗೂ ಗ್ರಾಮ ಪಂಚಾಯಿತಿ ಗ್ರಂಥಾಲಯಗಳಿಗೆ ಭೇಟಿ ನೀಡಿ. ಗ್ರಂಥಾಲಯದ ಸದಸ್ಯರಾಗಿ ಗ್ರಂಥಾಲಯದ ಸೇವೆಯನ್ನು ಸದುಪಯೋಗ ಪಡೆಯಬೇಕಾಗಿ ವಿನಂತಿ.**

*ವಿ.ಸೂ. : ಎಲ್ಲಾ ಶಾಖೆಗಳಲ್ಲೂ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರ ಗ್ರಂಥಗಳನ್ನು ಹಾಗೂ ಎಸ್. ಎಲ್. ಭೈರಪ್ಪ ಅವರ ಸಮಗ್ರ ಕೃತಿಗಳನ್ನು ವಿಶೇಷ ಐಡಿ ಕಾರ್ಡ್ ನೀಡಿ, ಉಚಿತವಾಗಿ ಪಡೆಯಬಹುದು.*

**ಸಿ. ಪಾರ್ವತಮ್ಮ**
ಉಪನಿರ್ದೇಶಕರು (ಪ್ರ)
ನಗರ ಕೇಂದ್ರ ಗ್ರಂಥಾಲಯ, ಪಶ್ಚಿಮ ವಲಯ
ಹಂಪಿನಗರ, ಬೆಂಗಳೂರು

# ಸಂಸ್ಕೃತಿ – ಕಲೆಯು ಅಭಿವೃದ್ಧಿಯೇ?

ಎಂ. ಎಚ್. ಕೃಷ್ಣಯ್ಯ

ರವೀಂದ್ರ ಕಲಾಕ್ಷೇತ್ರದಲ್ಲಿ ಫೆಬ್ರವರಿ ೨೧ರಂದು ಗ್ರಂಥ ಬಿಡುಗಡೆಯ ಕಾರ್ಯಕ್ರಮ. ಉದಯಭಾನು ಕಲಾಸಂಘದ 'ಬೆಂಗಳೂರು ದರ್ಶನ' ಗ್ರಂಥದ ಮೂರು ಸಂಪುಟಗಳನ್ನು ಸನ್ಮಾನ್ಯ ಮುಖ್ಯಮಂತ್ರಿಗಳು ಅನಾವರಣಗೊಳಿಸಿದರು. ಅದು ಬೆಂಗಳೂರು ಸಂಬಂಧಿತ ಸಮಗ್ರ ನೋಟದ ಗ್ರಂಥ. ಸಂಪಾದಕರ ಪರವಾಗಿ ನಾನು (ಡಾ॥ ವಿಜಯಾ ಮತ್ತೊಬ್ಬ ಸಂಪಾದಕರು), ಗ್ರಂಥ ಪರಿಚಯ ಮಾಡುತ್ತ ಅಂತ್ಯದಲ್ಲಿ, ಬೆಂಗಳೂರಿನ ಇತ್ತೀಚಿನ ಬೆಳವಣಿಗೆಯಾದ, ಸಾಂಸ್ಕೃತಿಕ ಐತಿಹಾಸಿಕ ಮಹತ್ವದ ಕಟ್ಟಡಗಳನ್ನು, ಸಂಸ್ಥೆಗಳನ್ನು ಖಾಸಗಿಯವರಿಗೆ ವಹಿಸಿಕೊಡುವ ಬಗ್ಗೆ ಪ್ರಸ್ತಾಪಿಸಿದೆ. ದಯವಿಟ್ಟು ಅಂತಹ ಸಂಸ್ಥೆಗಳನ್ನು ಅಭಿವೃದ್ಧಿ ಹೆಸರಿನಲ್ಲಿ ಬದಲಾಯಿಸುವುದಾಗಲಿ ಪರಭಾರೆ ಮಾಡುವುದಾಗಲಿ ಬೇಡ, ಅವುಗಳನ್ನು ಉಳಿಸಿಕೊಳ್ಳಿ ಎಂದು ಮಾನ್ಯ ಮಂತ್ರಿಗಳಲ್ಲಿ ವಿನಂತಿಸಿಕೊಂಡೆ. ಮಾನ್ಯ ಮುಖ್ಯಮಂತ್ರಿಗಳು ತಮ್ಮ ಭಾಷಣದಲ್ಲಿ ಆ ಬಗ್ಗೆ ಏನೂ ಹೇಳದಿದ್ದುದು ನಮಗೆ ನಿರಾಶೆ ಉಂಟುಮಾಡಿತು.

ಅನಂತರ, ಸರ್ಕಾರದ ತೀರ್ಮಾನದ ಬಗ್ಗೆ ಪ್ರತಿಭಟನೆಗಳು ತೀವ್ರವಾದುವು. ಸಂಬಂಧಪಟ್ಟವರಿಂದ, ಕಲಾವಿದರಿಂದ ಈ ತೀರ್ಮಾನದ ಹಿನ್ನೆಲೆಯ ವಿವರಗಳು ಬಯಲಾದುವು, ಮಾಧ್ಯಮದವರೂ ವರದಿ ಮಾಡಿದರು. ತೀರ್ಮಾನದ ಹಿನ್ನೆಲೆಯ ಪ್ರಕ್ರಿಯೆಯೇ ವಿಚಿತ್ರ ಎನಿಸುತ್ತೆ. ಪ್ರವಾಸೋದ್ಯಮ ಇಲಾಖೆಯ ಒಂದು ಪ್ರಸ್ತಾವ ಮೂಲ ಕಾರಣ. ಬೆಂಗಳೂರನ್ನು ಪ್ರವಾಸ ಕೇಂದ್ರವಾಗಿ ಆಕರ್ಷಣೀಯವಾಗಿ ಮಾಡಲು ಕೈಗೊಳ್ಳಬೇಕಾದ ಕಾರ್ಯಗಳು. ಅದಕ್ಕಾಗಿ ಸಂಬಂಧಪಟ್ಟ ಸಚಿವರು ಒಂದು ಸಮಿತಿ ನೇಮಿಸಿದರು. ಸಮಿತಿಯ ಸದಸ್ಯರು ಐದಾರು ಉದ್ಯಮಿಗಳು. ಅವರು ನೀಡಿದ ಸಲಹೆ : ಸಾಂಸ್ಕೃತಿಕ ಸಂಸ್ಥೆಗಳನ್ನು ಖಾಸಗಿಯವರಿಗೆ ವಹಿಸಿಕೊಡುವುದು, ಅವರು ಅವುಗಳನ್ನು ಅಭಿವೃದ್ಧಿಪಡಿಸಿ ನಿರ್ವಹಿಸುವುದು, ಆಗ ಪ್ರವಾಸಿಗಳನ್ನು ಹೆಚ್ಚು ಹೆಚ್ಚು ಆಕರ್ಷಿಸಲು ಸಾಧ್ಯ ಎಂದು. ಸರ್ಕಾರ ಮತ್ತು ಇಲಾಖೆಗಳವರು ಒಪ್ಪಿದರು. ವಿಚಿತ್ರ ಎಂದರೆ, ಸಮಿತಿಯ ಸದಸ್ಯ ರಾಗಿದ್ದ ಉದ್ಯಮಿಗಳು ತಾವು ತಾವೇ ಸಂಸ್ಥೆಗಳನ್ನು ಹಂಚಿಕೊಂಡರು. ವೆಂಕಟಪ್ಪ ಚಿತ್ರಶಾಲೆ ಇವರಿಗೆ, ಸರ್ಕಾರಿ ಮ್ಯೂಸಿಯಂ ಅವರಿಗೆ, ವಿಶ್ವೇಶ್ವರಯ್ಯ ಕೈಗಾರಿಕಾ ಮತ್ತು ತಂತ್ರಜ್ಞಾನ ವಸ್ತು ಸಂಗ್ರಹಾಲಯ ಇಂಥವರಿಗೆ ಎಂದು. ಸರ್ಕಾರ ಒಪ್ಪಂದವನ್ನೂ ಮಾಡಿಕೊಂಡಿತು (ಪತ್ರಿಕೆಗಳಲ್ಲಿ ಯಾರು ಯಾರಿಗೆ ಯಾವ ಸಂಸ್ಥೆ ಎಂಬ ವಿವರ ಪ್ರಕಟವಾಗಿದೆ). ಇಡೀ ಪ್ರಕ್ರಿಯೆ, ವ್ಯವಹಾರ ಮತ್ತು ಒಪ್ಪಂದ ಹೇಗಿದೆ ಎಂದರೆ, ಅಕಾಡೆಮಿಗಳ ಸದಸ್ಯರು ಗೌರವ ಪ್ರಶಸ್ತಿಗಳನ್ನು ತಮ್ಮಲ್ಲೆ ಹಂಚಿಕೊಂಡಂತೆ! ಅಥವಾ ಪಠ್ಯಪುಸ್ತಕ ಸಮಿತಿಯವರು ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕಗಳನ್ನು ಆಯ್ಕೆಮಾಡುವಲ್ಲಿ ತಮ್ಮ ಪುಸ್ತಕಗಳನ್ನೇ ಆಯ್ಕೆಮಾಡಿಕೊಂಡಂತೇ, ಮಹಾಭಾರತ ನೆನಪಾಯಿತು, ಆದರೆ ಅದು ಅತ್ಯಂತ ಅನುಚಿತ ದೃಷ್ಟಾಂತವಾಗುತ್ತೆ.

ಸಾಂಸ್ಕೃತಿಕ, ಐತಿಹಾಸಿಕ ಮಹತ್ವದ ಸಾರ್ವಜನಿಕ ಸಂಸ್ಥೆಗಳು ಎಂದಾಗ ಸರ್ಕಾರಕ್ಕೆ ಸಾರ್ವಜನಿಕರ ಅಭಿಪ್ರಾಯವೂ ಅಗತ್ಯ ಎನಿಸಲಿಲ್ಲವೆ. ಅಥವಾ ಬೆಂಗಳೂರಿನ ಬಗ್ಗೆ ತಿಳಿದವರ, ಆಯಾ ಕ್ಷೇತ್ರಗಳಲ್ಲಿ ತಜ್ಞರಾದವರೊಡನೆ ಸಮಾಲೋಚನೆ, ಸಲಹೆ ಅಗತ್ಯ ಎಂದು ತೋರಲಿಲ್ಲವೆ. ಇಲ್ಲವೆ ಸಮಿತಿಯಲ್ಲಿ ಹಿರಿಯರಾದ ಡಾ॥ ಎ. ರವೀಂದ್ರ, ಶ್ರೀ ಚಿರಂಜೀವಿ ಸಿಂಗ್, ಶ್ರೀ ಬಿ. ಪಾರ್ಥಸಾರಥಿ, ಶ್ರೀ ಜೈರಾಜ್ ಮೊದಲಾದ ಸಾಹಿತ್ಯ ಕಲೆ ಸಂಸ್ಕೃತಿ ಮತ್ತು ಆಡಳಿತಾನುಭವ ಉಳ್ಳವರು ಸದಸ್ಯರಾಗಬಹುದಿತ್ತಲ್ಲವೆ ? ಕಲ್ಪನೆ, ದೂರದೃಷ್ಟಿ ಇದ್ದ ಉದ್ಯಮಿಗಳು ಐ.ಐ.ಎಸ್.ಸಿ. ಯಂತಹ ಸಂಸ್ಥೆಗಳನ್ನು ಸ್ಥಾಪಿಸಿ ಬೆಳೆಸಿದರು. ಅಂತಹ ದೃಷ್ಟಿ ಸಮಿತಿಯ ಸದಸ್ಯರಲ್ಲಿ ಇದ್ದಲ್ಲಿ ಸಲಹೆಗಳು ಬೇರೆ ರೀತಿಯಲ್ಲಿ ಇರುತ್ತಿದ್ದುವು, ಹಂಚಿಕೊಳ್ಳುತ್ತಿರಲಿಲ್ಲ. ಸಮರ್ಥನೆಗಳನ್ನು ನೋಡಿದರೆ ಇಂತಹ ಲಾಭಾವಕಾಶ ಬಿಡಬಾರದು ಎಂದು ಕಬಂದ ಹಿಡಿತದ ಪಟ್ಟು ಹಾಕುವಂತಿದೆ. ಹಂಚಿಕೆ ಮಾಡಿಕೊಂಡ ಸಂಸ್ಥೆಗಳ ಇತಿಹಾಸ, ಮಹತ್ವ ಯಾವ ಬಗೆಯವು ?

ಕಲಾ ತಪಸ್ವಿ ಕೆ. ವೆಂಕಟಪ್ಪ ಚಿತ್ರಶಾಲೆ ಒಂದು ಸ್ಮಾರಕ ಸಂಸ್ಥೆ. ಕಲಾ ಗ್ಯಾಲರಿ ಮಾತ್ರವಲ್ಲ, ಮಹತ್ವದ ಕಲಾ ಸಂಗ್ರಹಾಲಯ ಸಹ. ಬೆಂಗಳೂರಿನಲ್ಲಿ ಕಲಾ ಪ್ರದರ್ಶನಾಲಯ ವ್ಯವಸ್ಥೆ ಇರಲಿಲ್ಲ. ಎ.ಡಿ.ಎ. ಮತ್ತು ಅ. ನ. ಸುಬ್ಬರಾಯರು ೨೦ನೇ ಶತಮಾನದ ಆರಂಭದಲ್ಲಿ ಕಲಾ ಪ್ರದರ್ಶನ ನಡೆಸಿದರು, ಬಳೇಪೇಟೆ ಅಂಗಡಿ, ಇತ್ಯಾದಿ ಕಡೆ. ಬಹಳ ಹಿಂದೆಯೇ

ಮರೆಯಾದ ಜಿ. ವೆಂಕಟಾಚಲಂ ಅವರ ಹಲಸೂರಿನ ಥಿಯಾಸಾಫಿಕಲ್ ಸೊಸೈಟಿಯ ಫ್ರೆಡ್ ಗ್ಯಾಲರಿ ಕಲಾ ಗ್ಯಾಲರಿ ಮತ್ತು ಕಲಾ ಸಂಗ್ರಹಾಲಯವೂ ಆಗಿತ್ತು. ಜಗತ್ತಿನ ಪ್ರಸಿದ್ಧ ಕಲಾವಿದರ ಮೂಲ ಕಲಾಕೃತಿಗಳಿದ್ದುವು. ಆ ಮಾದರಿಯ ಮುಂದುವರಿಕೆ ವೆಂಕಟಪ್ಪ ಚಿತ್ರಶಾಲೆ, ಚಿತ್ರಕಲಾ ಪರಿಷತ್ತು. ಸಾರ್ವಜನಿಕ ಕಲಾ ಗ್ಯಾಲರಿಗಾಗಿ ಅನೇಕ ಚಳವಳಿಗಳಾದುವು. ಕಬ್ಬನ್ ಪಾರ್ಕ್‌ನಲ್ಲಿ ನಾವು ನಾಲ್ವರು, ಎಂ. ಜಿ. ರಸ್ತೆಯ ಪಾದಚಾರಿ ತಾಣದಲ್ಲಿ ಜಿ. ಎಸ್. ಶೆಣೈ ಮೊದಲಾದ ಕಲಾವಿದರ ಕಲಾ ಪ್ರದರ್ಶನ ಇತ್ಯಾದಿ. ಅವು ಸಾರ್ವಜನಿಕ ಸಾಂಸ್ಕೃತಿಕ ಸಂಸ್ಥೆಗಳ ಬಗ್ಗೆ ಸರ್ಕಾರದ ನಿರಾಸಕ್ತಿಯ ವಿರುದ್ಧದ ಪ್ರತಿಭಟನೆಯ ಸಂಕೇತಗಳು. ಕಲಾವಿದರ ಒತ್ತಾಯಕ್ಕೆ ಮಣಿದ ಸರ್ಕಾರ ೧೯೬೭ರಲ್ಲಿ ವೆಂಕಟಪ್ಪ ಸ್ಮಾರಕ ಚಿತ್ರಶಾಲೆಯ ಕಾರ್ಯ ಕೈಗೊಂಡು, ಕಬ್ಬನ್ ಪಾರ್ಕ್‌ನ ಪೂರ್ವಕ್ಕೆ ಮ್ಯೂಸಿಯಂ ಪಕ್ಕದಲ್ಲಿ ಕಟ್ಟಡ ನಿರ್ಮಿಸಿತು. ೧೯೭೫ರಲ್ಲಿ ಉದ್ಘಾಟನೆಯಾದ ಈ ಸ್ಮಾರಕ ಸಂಸ್ಥೆ ಸಾರ್ವಜನಿಕರ, ಕಲಾವಿದರ ಆಸಕ್ತಿ, ಅಭಿರುಚಿ, ಸೃಜನಶೀಲತೆಯ ಕೇಂದ್ರವಾಯಿತು. ನೆಲ ಅಂತಸ್ತಿನಲ್ಲಿ ಕೆ. ವೆಂಕಟಪ್ಪನವರ ಕಲಾ ಕೃತಿಗಳ ವಿಭಾಗವಿದೆ. ಅವರು ರಚಿಸಿದ ವರ್ಣಚಿತ್ರಗಳು, ಪ್ಲಾಸ್ಟರ್ ಆಫ್ ಪ್ಯಾರಿಸ್‌ನ ಉಬ್ಬು ಶಿಲ್ಪ ಫಲಕಗಳು, ಅವರು ಬಳಸುತ್ತಿದ್ದ ವೀಣೆಗಳು, ಪ್ರಶಸ್ತಿ ಪಾರಿತೋಷಕ ಕೊಡುಗೆಗಳು, ಬಳಸುತ್ತಿದ್ದ ಕಲಾ ಸಾಮಗ್ರಿಗಳಿವೆ. ಮೊದಲನೇ ಮಹಡಿಯಲ್ಲಿ ಕಲಾ ಗ್ಯಾಲರಿಗೆ ಅವಕಾಶವಲ್ಲದೆ, ಒಂದೆಡೆ ಚಪ್ಪುಡಿರ ಪೊನ್ನಪ್ಪ ರಾಜಾರಾಂ ಅವರ ಕಾಷ್ಠ ಶಿಲ್ಪ ಕಲಾಕೃತಿಗಳ ಪ್ರದರ್ಶನವಿದೆ. ಎರಡನೇ ಮಹಡಿಯಲ್ಲಿ ಕಲಾವಿದ ಕೆ. ಕೆ. ಹೆಬ್ಬಾರರ ಅಪೂರ್ವ ವರ್ಣಚಿತ್ರಗಳಿವೆ, ರೇಖಾಚಿತ್ರಗಳಿವೆ, ಪ್ರಶಸ್ತಿ ಪುರಸ್ಕಾರ ವಸ್ತುಗಳಿವೆ. ಇವು ಅವರ ಮಕ್ಕಳಾದ ಶ್ರೀಮತಿ ರೇಖಾರಾವ್ ಮತ್ತು ರಜನೀ ಪ್ರಸನ್ನ ಅವರ ಕೊಡುಗೆ, ಇವು ಶಾಶ್ವತ ಪ್ರದರ್ಶನಗಳು. ಅಲ್ಲದೆ ಸ್ಟೋರ್ ರೂಮಿನಲ್ಲಿ ಅನೇಕ ಸಮಕಾಲೀನ ಕಲಾವಿದರ ಕಲಾಕೃತಿಗಳೂ ಬೆಳಕು ಕಾಣದೆ ಇವೆ ಎಂದೂ ಕೇಳಿದ್ದೇನೆ. ಸಮಕಾಲೀನ ಕಲಾವಿದರಿಗೆ ಕಲಾಪ್ರದರ್ಶನಾವಕಾಶ, ಕೆಳಗೆ ಸಭಾಂಗಣದಲ್ಲಿ ಕಾರ್ಯಕ್ರಮಗಳಿಗೆ ಅವಕಾಶ, ಸುತ್ತಲ ವಿಶಾಲ ಸ್ಥಳದಲ್ಲಿ ಕಲಾಶಿಬಿರ, ಕಲಾರಚನೆಗಳಿಗೆ ಅವಕಾಶವಿದೆ. ಬೋಜ್‌ನಂತರ ಅಂತರರಾಷ್ಟ್ರೀಯ ಖ್ಯಾತಿಯ ಕಾರ್ಯಕ್ರಮಗಳು ಇಲ್ಲಿ ನಡೆದಿವೆ. ಇದು ಕಲಾತಪಸ್ವಿಯೊಬ್ಬರ ನೆನಪಿಗೆ ಸ್ಥಾಪಿತವಾದ ಸಾರ್ವಜನಿಕ ಕಲಾಸಂಸ್ಥೆ. ಸಾರ್ವಜನಿಕ ಸ್ವತ್ತು. ಇದನ್ನು ನಿರ್ವಹಿಸಲು ಇಡೀ ರಾಜ್ಯದ ಆಡಳಿತ ಸೂತ್ರ ಹಿಡಿದಿರುವ ಸರ್ಕಾರಕ್ಕೆ ಅಸಾಧ್ಯವೆ? ನಮ್ಮ ಅಧಿಕಾರಿಗಳೂ ಅಷ್ಟು ಅಸಮರ್ಥರೆ? ಖಾಸಗಿ ಉದ್ಯಮಿಗಳಿಗೆ ಹಸ್ತಾಂತರ ಮಾಡುವ ಒಪ್ಪಂದ ಪರೋಕ್ಷವಾಗಿ ಸರ್ಕಾರ ಒಂದು ಸಾಂಸ್ಕೃತಿಕ ಸಂಸ್ಥೆ ನಿರ್ವಹಿಸಲಾಗದಷ್ಟು ನಿಸ್ಸಹಾಯಕರು, ನಮ್ಮ ಅಧಿಕಾರಿಗಳಿಗೆ ಕಲ್ಪನೆಯಿಲ್ಲ, ವಿಷನ್ ಇಲ್ಲ, ಅಭಿವೃದ್ಧಿಗೆ ಹಣವಿಲ್ಲ ಎಂದು ಒಪ್ಪಿಕೊಂಡಂತೆ ಆಗುತ್ತದೆ. ಸಾರ್ವಜನಿಕ ಜವಾಬ್ದಾರಿಯಿಂದ ನುಣುಚಿಕೊಂಡಂತೆ ಆಗುತ್ತದೆ. ಸಂಬಂಧಿಸಿದ ಕಲಾವಿದರ, ಸಾರ್ವಜನಿಕರ ಪ್ರತಿಭಟನೆಗೆ, ವಿರೋಧಕ್ಕೆ ಸರ್ಕಾರ ಗಮನ ಕೊಡದಿದ್ದರೆ ಸಂಕಲ್ಪಶಕ್ತಿಯಿಲ್ಲ ಎಂದರ್ಥ. ಸಚಿವರು, ಇಲಾಖೆಗಳ ಅಧಿಕಾರಿಗಳು ತಮ್ಮದೇ ಆದ ಕಾರಣಗಳಿಗಾಗಿ ಹೀಗೆ ಮಾಡುತ್ತಿದ್ದಾರೆ ಎಂದರ್ಥ; ಸಾರ್ವಜನಿಕ ಹಿತದೃಷ್ಟಿಯಿಂತೂ ಅಲ್ಲ.

ಎರಡನೆಯದು, ಸರ್ಕಾರಿ ಮ್ಯೂಸಿಯಂನ ದುರಂತ. ಅದನ್ನೂ ಒಬ್ಬ ಉದ್ಯಮಿಗೆ ವಹಿಸಲು ಒಪ್ಪಂದವಾಗಿದೆ ಎಂದು ಪತ್ರಿಕೆಗಳಲ್ಲಿ ವರದಿಯಾಗಿದೆ. ಮ್ಯೂಸಿಯಂನ ಇತಿಹಾಸ, ಮಹತ್ವ ತಿಳಿದವರು ಸಮಿತಿಯಲ್ಲಿ ಇದ್ದರೆ ಎಂಬ ಅನುಮಾನವಿದೆ. ಈ

## ಸಾದರ ಸ್ವೀಕಾರ

**ವಿಷಯ ವಚನಸಂಪುಟಗಳು – ಸಂಪುಟ – ೭**
**ನಾದಬಿಂದು, ಪಂಚಾಚಾರ, ಪರಶಿವ, ಪಿಂಡ**
*ಡಾ॥ ಸಂಗಮೇಶ ಸವದತ್ತಿಮಠ*
**ಪುಟ : *xxxii* + ೯೪೮ ಬೆಲೆ : ರೂ. ೩೦೦**

**ವಿಷಯ ವಚನಸಂಪುಟಗಳು – ಸಂಪುಟ – ೮**
**ಪುರಾತನರು/ಪ್ರಮಥರು, ಪ್ರಾಣ, ಬಯಲು/ಶೂನ್ಯ, ಭಕ್ತ–ಭಕ್ತಿ** *ಡಾ॥ ಸಂಗಮೇಶ ಸವದತ್ತಿಮಠ*
**ಪುಟ : *xxxii* + ೮೧೦ ಬೆಲೆ : ರೂ. ೩೦೦**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಶ್ರೀ ಚೆನ್ನಬಸವೇಶ್ವರ ಸಂಸ್ಥಾನ ಹಿರೇಮಠ,** ಸುಕ್ಷೇತ್ರ ಹಾರಕೂಡ – ೫೮೫ ೪೩೭, ಬಸವಕಲ್ಯಾಣ ತಾಲೂಕು, ಬೀದರ ಜಿಲ್ಲೆ

**ಅಂಬಾರ ವಿಷ್ಣು ನಾಯ್ಕ ಬದುಕಿನ ಪಯಣ** (ಜೀವನ ವೃತ್ತಾಂತ) ವಿಷ್ಣು ನಾಯ್ಕ
**ಪುಟ : ೬೬೨ ಬೆಲೆ : ರೂ. ೬೫೦**
**ರಾಘವೇಂದ್ರ ಪ್ರಕಾಶನ** ಅಂಬಾರಕೊಡ್ಲ, ಅಂಕೋಲ, ಉತ್ತರ ಕನ್ನಡ ಜಿಲ್ಲೆ – ೫೮೧ ೧೩೪

**ಕರಾವಳಿಯ ಕಣ್ಮಣಿ** (ಕೆ. ಎ. ರೋಹಿಣಿ ಅಭಿನಂದನ ಗ್ರಂಥ) *ಸಂ. : ಬಿ. ಎಂ. ರೋಹಿಣಿ*
**ಪುಟ : ೧೬ + ೨೩೬ ಬೆಲೆ : ರೂ. ೧೫೦**
**ಕೆ. ಎ. ರೋಹಿಣಿ ಅಭಿನಂದನ ಸಮಿತಿ,** ಉರ್ವ ಸ್ಟೋರ್ಸ್, ಅಶೋಕನಗರ, ಮಂಗಳೂರು – ೬

**ನಾನು** (ಆತ್ಮ ಕಥನ) *ಡಾ॥ ಎಸ್. ಆರ್. ಗುಂಜಾಳ*
**ಪುಟ : *xiii* + ೨೭೮ ಬೆಲೆ : ರೂ. ೨೦೦**

**ಗ್ರಂಥಾಲಯ ವಿಜ್ಞಾನ ಪ್ರಕಾಶನ,** ನಂ. ೧೧, ಸಂತೂಬಾಯಿ ಅಪಾರ್ಟ್‌ಮೆಂಟ್, ಲೈನ್ ಬಝಾರ್, ಧಾರವಾಡ – ೫೮೦ ೦೦೧

**ಕೊಪ್ಪಳ ಜಿಲ್ಲಾ ಕ ಸಾ ಪ ಮಾಹಿತಿ ಕೋಶ**
*ಪ್ರ. ಸಂ. : ವೀರಪ್ಪ ಮ. ನಿಂಗೋಜಿ*
*ಸಂ. : ಅಕ್ಬರ್ ಸಿ. ಕಾಲಿಮಿರ್ಚಿ, ಶಿ. ಕಾ. ಬಡಿಗೇರ*
**ಪುಟ : *xii* + ೨೨೪ ಬೆಲೆ : ರೂ. ೧೫೦**

**ಶ್ರೀಕಾರ** *ಸಂ. : ಸಿದ್ಧಯ್ಯ ಪುರಾಣಿಕ್ (ಕಾವ್ಯಾನಂದ) ರಾಘವೇಂದ್ರ ಇಟಗಿ (ಇ.ರಾ.)*
**ಪುಟ : *xx* + ೯೯ ಬೆಲೆ : ರೂ. ೧೦೦**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು,** ಕೊಪ್ಪಳ

**ನಿಲ್ಲದ ನೆಲದ ನೋವು** (ಕವನ ಸಂಕಲನ)
*ಶಂಕರ ಬಿ. ಕುಕನೂರ*
**ಪುಟ : *xiv* + ೬೬ ಬೆಲೆ : ರೂ. ೬೦**
**ಸೃಷ್ಟಿ–ಪ್ರತಿಸೃಷ್ಟಿ ಸಾಹಿತ್ಯ ವೇದಿಕೆ,** ಮುಂಡರಗಿ ತಾಲ್ಲೂಕು, ಮುಂಡರಗಿ ಜಿಲ್ಲೆ, ಗದಗ

**ಗಾಳಿ ಜೋಗುಳ** (ಕವನ ಸಂಕಲನ)
*ಅಕ್ಬರ್ ಸಿ. ಕಾಲಿಮಿರ್ಚಿ*
**ಪುಟ : *xvi* + ೬೩ ಬೆಲೆ : ರೂ. ೭೦**
**ಕನ್ನಡ ಮೈತ್ರಿ ಪ್ರಕಾಶನ,** ನಂ. ೭೩೧/೩, ನಂ. ೯, ಮಂಜುನಾಥ ಬಡಾವಣೆ, ಭಾಗ್ಯನಗರ, ಕೊಪ್ಪಳ ಜಿಲ್ಲೆ – ೫೮೩ ೨೩೮

**ವೀಸಾದ ನಿರೀಕ್ಷೆಯಲ್ಲಿ ನೆನಪುಗಳು**
*ಡಾ॥ ಬಿ. ಆರ್. ಅಂಬೇಡ್ಕರ್*
*ಕನ್ನಡಕ್ಕೆ : ಸದಾಶಿವ ಮರ್ಜಿ*
**ಪುಟ : *xx* + ೯೨ ಬೆಲೆ : ರೂ. ೯೦**

**ಮನು V/s ಅಂಬೇಡ್ಕರ್** (ಪೇಜಾವರ ಶ್ರೀಗಳಿಗೊಂದು ಬಹಿರಂಗ ಪತ್ರ) *ಜಿ. ಕೆ. ಗೋವಿಂದರಾವ್*
**ಪುಟ : *xvi* + ೫೨ ಬೆಲೆ : ರೂ. ೩೦**

**ಡಾ॥ ಬಿ. ಆರ್. ಅಂಬೇಡ್ಕರ ವರ್ತಮಾನದೊಂದಿಗೆ ಮುಖಾಮುಖಿ** ಬಿ. ಯು. ಸುಮಾ
**ಪುಟ : *xiv* + ೧೭೮ ಬೆಲೆ : ರೂ. ೧೫೦**

**ಸಂತೆಯೊಳಗೊಂದು ಮನೆ** (ದಲಿತ ಸ್ತ್ರೀವಾದಿ ಚಿಂತನೆಯ ಲೇಖನಗಳು) ಬಿ. ಯು. ಸುಮಾ
**ಪುಟ : *xviii* + ೧೫೮ ಬೆಲೆ : ರೂ. ೧೪೦**

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಲಡಾಯಿ ಪ್ರಕಾಶನ,** ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ಯಕ್ಷಗಾನ ಕೈಪಿಡಿ** *ದಿ. ಕೃಷ್ಣ ಭಂಡಾರಿ, ಸೋಂದಾ*
**ಪುಟ : ೪ + ೧೩೪ ಬೆಲೆ : ರೂ. ೯೦**
**ಬಂಡಾಯ ಪ್ರಕಾಶನ,** ಸಹಯಾನ, ಕೆರೆಕೋಣ, ಅರೇಅಂಗಡಿ ಅಂಚೆ, ಹೊನ್ನಾವರ, ಉತ್ತರ ಕನ್ನಡ ಜಿಲ್ಲೆ – ೫೮೧ ೩೩೪

**ದೇಹಗಳೆರಡು ನೆತ್ತರೊಂದು** (ಸಣ್ಣ ಕಥಾ ಸಂಕಲನ)
*ಲಾಲಸಾಬ ಎಚ್. ನದಾಫ*
**ಪುಟ : *iv* + ೫೦ ಬೆಲೆ : ರೂ. ೭೫**
**ಚಾಂದಬಿ ಪ್ರಕಾಶನ,** ಸೆಕ್ಟರ್ ನಂ. ೨೯, ಪ್ಲಾಟ್ ನಂ. ೩೨, ನವನಗರ, ಬಾಗಲಕೋಟ – ೫೮೭ ೧೦೩

**ಮಳೆಯಾದಳು ನೀರಾ** (ಮಕ್ಕಳ ಕತೆಗಳು)
*ಲಲಿತಾ ಕೆ. ಹೊಸಪ್ಯಾಟಿ*
**ಪುಟ : *xii* + ೮೦ ಬೆಲೆ : ರೂ. ೮೦**
**ಗುರುರಾಜ ಪ್ರಕಾಶನ,** ಮಹಾಂತ ನಗರ, ಹುನಗುಂದ, ಬಾಗಲಕೋಟೆ ಜಿಲ್ಲೆ – ೫೮೭ ೧೧೮

ಪುರಾತನ ವಸ್ತು ಸಂಗ್ರಹಾಲಯ ಡಾ॥ ಎಡ್ವರ್ಡ್ ಗ್ರೀನ್ ಬೆಲ್‌ಫೋರ್ ಅವರ ಕೊಡುಗೆ. ಅವರು ಸೈನಿಕ ದಳದ ವೈದ್ಯರಾಗಿದ್ದರು. ಮದರಾಸಿನಲ್ಲಿ ಮ್ಯೂಸಿಯಂ ಪ್ರಾರಂಭಿಸಿದ್ದರು. ಇಲ್ಲಿಗೆ ಬಂದಮೇಲೆ ಬೆಂಗಳೂರಿನಲ್ಲಿ ಮ್ಯೂಸಿಯಂ ಪ್ರಾರಂಭಿಸಲು ನಾಲ್ಕೈದು ವರ್ಷ ಮೈಸೂರು ಸಂಸ್ಥಾನದಲ್ಲಿ ಸಂಚರಿಸಿ ಅಪರೂಪದ ವಸ್ತುಗಳನ್ನು ಸಂಗ್ರಹಿಸಿ ಹಿಂದೆ ಸೆಂಟ್ರಲ್ ಜೈಲಿದ್ದ ಸ್ಥಳದ ಸೂಪರಿಂಟೆಂಡೆಂಟರ ಬಂಗ್ಲೆಯಲ್ಲಿ ೧೮೬೫ರಲ್ಲಿ ವಸ್ತು ಸಂಗ್ರಹಾಲಯ ಪ್ರಾರಂಭಿಸಿದರು. ಆ ರಸ್ತೆಗೆ ಈಗಲೂ ಮ್ಯೂಸಿಯಂ ರೋಡ್ ಎಂಬ ಹೆಸರಿದೆ, ಈಗಿನ ಕಸ್ತೂರಿ ಬಾ ರಸ್ತೆಯಲ್ಲಿ ಸಂಗ್ರಹಾಲಯದ ವಸ್ತುಗಳು ಹೆಚ್ಚಿದಾಗ ಪ್ರತ್ಯೇಕ ಕಟ್ಟಡದ ಯೋಜನೆ ಸರ್ಕಾರ ಮಾಡಿತು. ೧೮೭೦ರಲ್ಲಿ ಬೆಲ್‌ಫೋರ್ ಮದರಾಸಿಗೆ ಹಿಂದಿರುಗಿದರು. ಮೈಸೂರು ಸಂಸ್ಥಾನದ ಸರ್ಕಾರ ೧೮೭೭ರಲ್ಲಿ ಹೊಸ ಕಟ್ಟಡವನ್ನು ಕಬ್ಬನ್‌ಪಾರ್ಕಿನಲ್ಲಿ ಪೂರ್ಣಗೊಳಿಸಿತು. ಸಂಸ್ಥಾನದ ಪ್ರಥಮ ರಾಯಲ್ ಇಂಜಿನಿಯರ್ ಆಗಿದ್ದ ಇ. ಹೆಚ್. ಸ್ಯಾಂಕಿ ಅವರ ಕಲ್ಪನೆ. ಕೊರಿಯಿಂಥನ್ ವಾಸ್ತುಶೈಲಿಯ ಕಟ್ಟಡ ನಿರ್ಮಾಣವಾಗಿ ವಸ್ತು ಸಂಗ್ರಹಾಲಯವನ್ನು ಸ್ಥಳಾಂತರಿಸಲಾಯಿತು. ಆಗ್ಗೆ ಜನಾಕರ್ಷಣೆಗೆ ಇದ್ದವು ಎರಡು ಸ್ಥಳಗಳು. ಲಾಲ್‌ಬಾಗ್ ಮತ್ತು ಮ್ಯೂಸಿಯಂ. ತುಂಬ ಜನಪ್ರಿಯವಾದುವು. ೧೯೬೦–೬೧ರಲ್ಲಿ ವಸ್ತು ಸಂಗ್ರಹಾಲಯವನ್ನು ವಿಸ್ತರಿಸಲು ಸರ್ಕಾರ ನಿರ್ಧರಿಸಿತು. ಹಳೆಯ ಕಟ್ಟಡದ ವಾಸ್ತುಶೈಲಿಯ ಮಾದರಿಯಲ್ಲೆ ಹೊಸ ಕಟ್ಟಡ ನಿರ್ಮಾಣವಾಗಿ ವ್ಯತ್ಯಾಸವೇ ತಿಳಿಯದಂತಾದುವು.







ಪ್ರಾರಂಭದಲ್ಲಿ ವಸ್ತು ಸಂಗ್ರಹಾಲಯದಲ್ಲಿ ಪುಸ್ತಕ ಸಂಗ್ರಹವೂ ಇತ್ತು. ೧೯೧೫ರಲ್ಲಿ ಸಾರ್ವಜನಿಕ ಕೇಂದ್ರ ಗ್ರಂಥಾಲಯ ಶೇಷಾದ್ರಿ ಅಯ್ಯರ್ ಮೆಮೋರಿಯಲ್ ಹಾಲ್‌ನಲ್ಲಿ ಪ್ರಾರಂಭವಾದಾಗ ಪುಸ್ತಕ ಸಂಗ್ರಹ ಅಲ್ಲಿಗೆ ವರ್ಗಾವಣೆಗೊಂಡಿತು. ಸಂಗ್ರಹಾಲಯದಲ್ಲಿ ಏನೆಲ್ಲ ಎಷ್ಟೆಲ್ಲ ಅಪರೂಪದ ಇತಿಹಾಸ ಮಹತ್ವದ ವಸ್ತುಗಳಿವೆ ಎಂದು ಹೇಳುವಂತಿಲ್ಲ. ಗಾಂಧಾರ ಬೌದ್ಧ ಶಿಲ್ಪಗಳು; ಹತ್ತನೇ ಶತಮಾನದ ಸೂರ್ಯ, ವೇಣುಗೋಪಾಲ, ಕಾಲಭೈರವ, ದುರ್ಗಾ ಮುಂತಾದ ವಿಗ್ರಹಗಳು; ಎರಡನೆಯ ಶತಮಾನದ ಎತ್ತಿನ ಬಂಡಿ, ರೆಕ್ಕೆಗಳುಳ್ಳ ಕುದುರೆಗಳು, ದೇವತೆಗಳ ವಿಗ್ರಹಗಳು ಮೊದಲಾದುವು ಶಿಲ್ಪ ವಿಭಾಗದಲ್ಲಿವೆ. ಪುರಾತತ್ವ ವಿಭಾಗ ಅತ್ಯಂತ ಮಹತ್ವದ್ದು. ಕ್ರಿ. ಪೂ. ಮೂರು ಸಾವಿರ ವರ್ಷಗಳ ಹಿಂದಿನ ಮೊಹೆಂಜದಾರೊದಲ್ಲಿ ದೊರೆತ ಪುರಾತನ ವಸ್ತುಗಳು, ಕ್ರಿ. ಶ. ೪೫೦ರ ಹಲ್ಮಿಡಿ ಶಾಸನ, ಬೆಂಗಳೂರು ಹೆಸರಿರುವ ಕ್ರಿ. ಶ. ೮೯೦ರ ಬೇಗೂರು ವೀರಗಲ್ಲು, ಆತಕೂರು ಸ್ಮಾರಕ ಶಿಲೆ, ದಾನ ಶಾಸನಗಳು, ತಾಮ್ರ ಪಟಗಳು, ಶಿಲಾಯುಗದ ಕಲ್ಲಿನ ಆಯುಧಗಳು, ಬೃಹತ್ ಶಿಲಾಯುಗದ ಮಡಕೆಗಳು; ಇವಲ್ಲದೆ ಅಪರೂಪದ ಮಿನಿಯೇಚರ್ ವರ್ಣಚಿತ್ರಗಳು, ಶ್ರೀರಂಗಪಟ್ಟಣದ ವರ್ಣಚಿತ್ರಗಳು ಇತ್ಯಾದಿ ಇತ್ಯಾದಿ ಇವೆ.

ಸ್ವಲ್ಪ ಯೋಚಿಸಿ. ಇಂಥ ಮಹತ್ವದ ಕಟ್ಟಡ, ಸಂಸ್ಥೆಯನ್ನು ಅಭಿವೃದ್ಧಿಯ ಹೆಸರಿನಲ್ಲಿ, ಅದೂ ಪ್ರವಾಸೋದ್ಯಮದ ಅಭಿವೃದ್ಧಿಗಾಗಿ ಎಂದು, ಖಾಸಗಿ ಉದ್ಯಮಿಗೆ ಹಸ್ತಾಂತರ ಮಾಡುವುದೆ ? ಈಗಾಗಲೇ ದಿನನಿತ್ಯ ಸಾವಿರಾರು ಜನರು ಭೇಟಿ ನೀಡುವ ಜನಪ್ರಿಯ ಮ್ಯೂಸಿಯಂ ಆಗಿದೆ. ಪುರಾತತ್ವ ಇಲಾಖೆಯ ಅಧೀನದಲ್ಲಿ ಮ್ಯೂಸಿಯಂ ಇದೆ. ಪುರಾತತ್ವ ತಜ್ಞರು, ಇತಿಹಾಸಕಾರರು ಪ್ರಾಧ್ಯಾಪಕರು ಸದಸ್ಯರಾಗಿಲ್ಲದ ಸಮಿತಿಯ ತೀರ್ಮಾನ. ಅವರು ಪ್ರತಿಭಟಿಸುತ್ತಿಲ್ಲ. ಅಧಿಕಾರಿಗಳೂ ವಿರೋಧಿಸದಿರುವುದು ಆಶ್ಚರ್ಯ. ಇದು ಯಾರ ದೌರ್ಬಲ್ಯ ? ಸರ್ಕಾರದ್ದೆ, ಅಧಿಕಾರಿಗಳದೆ, ಸಮಾಜದ್ದೇ ? ಅಲ್ಲಿರುವ ವಸ್ತುಗಳ, ಸಣ್ಣಪುಟ್ಟ ಕಲ್ಲಿನ ವಸ್ತುಗಳೂ ಸೇರಿದಂತೆ, ಕ್ಯಾಟಲಾಗ್ ಇದೆಯೆ ? ಖಾಸಗಿ ಮ್ಯೂಸಿಯಂಗಳ ವಸ್ತುಗಳು ಕಣ್ಮರೆಯಾಗುವುದನ್ನು ಆಗಾಗ್ಗೆ ಪತ್ರಿಕೆಗಳಲ್ಲಿ ಓದುತ್ತೇವೆ. ಮೋನಾಲೀಸಾ ಚಿತ್ರಕ್ಕೆ ಪ್ಯಾರಿಸ್‌ನಲ್ಲಿ ಎಂಥ ಸರ್ಪಗಾವಲು. ಇತಿಹಾಸ ವಸ್ತುಗಳು, ನಮ್ಮ ಬೇರುಗಳನ್ನು ಪರಂಪರೆಯನ್ನು ನೆನಪಿಸುವ ವಸ್ತುಗಳು ನಮಗೆ, ಸರ್ಕಾರಕ್ಕೆ, ನಗಣ್ಯವೆ ? ಇದೇನು ವ್ಯಾಪಾರವೆ ? ಇಲ್ಲಿನ ವಸ್ತುಗಳು, ಶಾಸನಗಳು ಕಣ್ಮರೆಯಾದರೆ ಹಿಂದಕ್ಕೆ ತರಲಾದೀತೇ ? ಇವು ಸರ್ಕಾರದ ನೇರ ಕಣ್ಗಾವಲಿನಲ್ಲಿ ಸುರಕ್ಷಿತವಾಗಿರಬೇಕಾದುವು. ಆ ಹೊಣೆಗಾರಿಕೆ ಸರ್ಕಾರದ್ದು. ಸರ್ಕಾರ ನೆಪ ಒಡ್ಡಿ ನುಣುಚಿಕೊಳ್ಳುವಂತಿಲ್ಲ.

ಮೂರನೆಯ ದೃಷ್ಟಾಂತ ವಿಶ್ವೇಶ್ವರಯ್ಯ ಕೈಗಾರಿಕಾ ಮತ್ತು ತಾಂತ್ರಿಕ ವಸ್ತು ಸಂಗ್ರಹಾಲಯ. ಮ್ಯೂಸಿಯಂ ಪಕ್ಕದಲ್ಲೆ ಇರುವ ಮಕ್ಕಳು, ಯುವ ಜನರಾದಿಯಾಗಿ ಎಲ್ಲರಿಗೂ ಅತ್ಯಂತ ಜನಪ್ರಿಯವಾದ ವಿಜ್ಞಾನ ತಂತ್ರಜ್ಞಾನ ಮ್ಯೂಸಿಯಂ. ವಿಜ್ಞಾನದ ಪ್ರಗತಿಯ ವಿವಿಧ ಹಂತಗಳನ್ನು ಪರಿಚಯಿಸುವ ಸಂಸ್ಥೆ. ಸದ್ಯದಲ್ಲಿ ಅತ್ಯಂತ ಅಚ್ಚುಕಟ್ಟಾಗಿ ಕಾರ್ಯ ನಿರ್ವಹಿಸುತ್ತಿರುವ ಮ್ಯೂಸಿಯಂ. ಎಂಜಿನ್ ಹಜಾರ, ವಿಜ್ಞಾನ ವಿನೋದ, ಜೈವಿಕ ತಂತ್ರಜ್ಞಾನ, ವಿದ್ಯುನ್ಮಾನ ವಿಭಾಗ, ಮಕ್ಕಳ ವಿಜ್ಞಾನ ವಿಭಾಗ ಇತ್ಯಾದಿ ಇವೆ. ೩ಡಿ ಚಲನಚಿತ್ರಗಳ ಪ್ರದರ್ಶನವಿದೆ. ಜನಪ್ರಿಯ ಎಂಬ ಶಬ್ದವೂ ಸಾಲದು, ಏಕೆಂದರೆ ಇದು ಶೈಕ್ಷಣಿಕ ಮಹತ್ವದ ಸಂಸ್ಥೆಯೂ ಆಗಿದೆ. ಇದನ್ನು ಖಾಸಗಿಯವರಿಗೆ ವಹಿಸುವ ಸುದ್ದಿ ಬಂದಂತೆ ಅಲ್ಲಿನ ಅಧಿಕಾರಿ ಸಿಬ್ಬಂದಿ ವರ್ಗದವರೇ ಪ್ರತಿಭಟಿಸಿದರು. ಹೀಗಾಗಿ ಅದರ ಜವಾಬ್ದಾರಿ ವಹಿಸಬೇಕಿದ್ದ ಸೂಕ್ಷ್ಮಮನಸ್ಸಿನ ಸಜ್ಜನ ಉದ್ಯಮಿ ಹಿಂದೆ ಸರಿದದ್ದರಿಂದ ಅದು ಉಳಿದಂತಾಗಿದೆ.

ಸರ್ಕಾರ ಏಕೆ ಹೀಗೆ ನಡೆದುಕೊಳ್ಳುತ್ತಿದೆ. ಹಟಮಾರಿತನವೇಕೆ ? ಎಷ್ಟೇ ಸಮರ್ಥಿಸಿಕೊಂಡರೂ, ಅಭಿವೃದ್ಧಿ ಮತ್ತು ನಿರ್ವಹಣೆಗಾಗಿ ಎಂದರೂ, ಜನರ ಬಾಯಲ್ಲಿ ಸಾಂಸ್ಕೃತಿಕ ಸ್ಮಾರಕಗಳನ್ನು ಸರ್ಕಾರ ಹರಾಜು ಹಾಕುತ್ತಿದೆ ಎಂದಾಗಿದೆ. ಖಾಸಗಿ ಸಾಂಸ್ಕೃತಿಕ ಸಂಸ್ಥೆಗಳನ್ನು ಹೊರತುಪಡಿಸಿ, ಸರ್ಕಾರ ಸ್ಥಾಪಿಸಿರುವ ಸರ್ಕಾರದ ಅಧೀನದಲ್ಲಿರುವ ಸಂಸ್ಥೆಗಳು ಸಾರ್ವಜನಿಕರ ಸ್ವತ್ತು, ಯಾರೊಬ್ಬರ ಪಿತ್ರಾರ್ಜಿತ ಆಸ್ತಿಯಂತಲ್ಲ. ಸಾರ್ವಜನಿಕ ಅಭಿಪ್ರಾಯ ಪಡೆಯದೆ, ವಾಟ್ಸ್‌ಅಪ್‌ನಲ್ಲಿ ಪ್ರತಿನಿತ್ಯ ಟೀಕೆಗಳು ಬೀರುತ್ತಿದ್ದರೂ ನಿರ್ಲಕ್ಷಿಸಿ, ವಿಧಾನ ಸಭೆಯಲ್ಲೂ ಜನಪ್ರತಿನಿಧಿಗಳ ಅಭಿಪ್ರಾಯ ಸಲಹೆ ಪಡೆಯದೆ ಹಸ್ತಾಂತರ ಪ್ರಕ್ರಿಯೆ ನಡೆಯುತ್ತಿರುವುದು ಒಂದು ದುರಂತ. ದಿವಾನರಾಗಿದ್ದ ಸರ್ ಎಂ. ವಿಶ್ವೇಶ್ವರಯ್ಯನವರು ಕಾರ್ಖಾನೆಗಳನ್ನು, ಸಂಸ್ಥೆಗಳನ್ನು ಕಟ್ಟಿದರು. ಈಗ ಸರ್ಕಾರ ಅವರು ಸ್ಥಾಪಿಸಿದ ಕಾರ್ಖಾನೆಗಳನ್ನು ಒಂದೊಂದಾಗಿ ಮುಚ್ಚುತ್ತಿದೆ. ಈಗ ಸಾಂಸ್ಕೃತಿಕ ಸಂಸ್ಥೆಗಳಿಗೂ ಹಸ್ತಕ್ಷೇಪ ಮಾಡುವುದು ಸರಿಯಲ್ಲ. ಚರಿತ್ರೆಯಲ್ಲಿ ಮುಖ್ಯಮಂತ್ರಿಗಳ ಹೆಸರು ಇವರ ಕಾಲದಲ್ಲಿ ಹೀಗಾಯಿತೆಂದು ದಾಖಲಾಗ ಬೇಕೇ ? ಇದು ಸರ್ಕಾರಕ್ಕೆ ಕೀರ್ತಿ ತರುವ ಕಾರ್ಯವಂತೂ ಅಲ್ಲ. ಕಲಾವಿದರು, ಇತಿಹಾಸ ಪ್ರಜ್ಞೆ ಉಳ್ಳವರು ಮಾತ್ರವಲ್ಲ, ಜನ ಒಟ್ಟಾಗಿ ತಿರುಗಿಬೀಳುವ ಮೊದಲು ಎಚ್ಚೆತ್ತುಕೊಳ್ಳುವುದು ಒಳಿತು. ಈಗಾಗಲೇ ಜನ ಕೇಳುತ್ತಿದ್ದಾರೆ. ಮುಂದಿನ ಬಲಿ ಯಾವ ಸಂಸ್ಥೆ ? ರವೀಂದ್ರ ಕಲಾಕ್ಷೇತ್ರವೆ ? ಮೈಸೂರು ಅರಮನೆಯೆ ? ಪ್ರವಾಸೋದ್ಯಮ ಇಲಾಖೆ ಮತ್ತು ಸರ್ಕಾರ ಉತ್ತರಿಸಬೇಕಿದೆ. ಒಂದಂತೂ ಸತ್ಯ. ಸಂಸ್ಕೃತಿ ಎಂಬುದು ಜನರ ನಡೆನುಡಿ, ಚಿಂತನೆ ನಂಬಿಕೆ, ಪ್ರತಿಭೆ ಸೃಜನಶೀಲತೆಯ ಪರಂಪರೆಯಿಂದ ಬಂದದ್ದು. ಇಂತಹ ಸಂಸ್ಕೃತಿಯನ್ನು ಅಭಿವೃದ್ಧಿಪಡಿಸುತ್ತೇವೆಂಬುದೇ ಹಾಸ್ಯಾಸ್ಪದ.

**ಎಂ. ಎಚ್. ಕೃಷ್ಣಯ್ಯ**
ನಂ. ೧೮೨, ೧ನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು – ೫೬೦ ೦೧೦



# ಚಂದ್ರ-ಶುಕ್ರರ ಸಮಾಗಮ

**ಮುಂ**ಜಾವಿನ ಆಕಾಶದಲ್ಲಿ ಫಳಗುಟ್ಟುತ್ತಿರುವ ಶುಕ್ರಗ್ರಹ ಈಗಾಗಲೇ ಎಲ್ಲರ ಗಮನವನ್ನೂ ಸೆಳೆದಿದೆ. ದಿನೇ ದಿನೇ ಅದರ ಎತ್ತರ ಕಡಿಮೆ ಆಗುತ್ತಿರುವುದೂ ಗಮನಕ್ಕೆ ಬಂದಿರಬಹುದು. ಈ ತಿಂಗಳ ೬ರಂದು ಅಂದರೆ ಅಮಾವಾಸ್ಯೆಯ ಹಿಂದಿನ ದಿನ ಚಂದ್ರನನ್ನು ಹುಡುಕುವುದು ಸಾಧ್ಯವಾದರೆ ಅದರ ಪಕ್ಕದಲ್ಲಿಯೇ ಶುಕ್ರವೂ ಕಾಣುತ್ತದೆ. ಈ ಎತ್ತರ ಬಹಳ ಕಡಿಮೆ; ಆದ್ದರಿಂದ ಇದನ್ನು ಹುಡುಕುವುದು ಸವಾಲು ಎನ್ನಬಹುದು. ಆ ದಿನ ಮಧ್ಯಾಹ್ನ ಚಂದ್ರ ಶುಕ್ರನನ್ನು ಹಾದುಹೋಗುವ ಆಚ್ಛಾದನೆಯೂ ಇದೆ. ಆದರೆ ಆ ನೋಟ ನಮಗಿಲ್ಲ. ಇದೇ ರೀತಿ ೧೧ರಂದು ರೋಹಿಣಿ ನಕ್ಷತ್ರವನ್ನು ಚಂದ್ರ ಮುಚ್ಚಿಹಾಕುವ ಆಚ್ಛಾದನೆಯ ನೋಟವೂ ನಮಗಿಲ್ಲ.

ಮುಂಜಾವಿನಲ್ಲಿ ಕಾಣುವ ಉಳಿದ ಎರಡು ಗ್ರಹಗಳು ಮಂಗಳ ಮತ್ತು ಶನಿ. ೨೫ರ ರಾತ್ರಿ ಸುಮಾರು ೧೦ ಗಂಟೆಗೆ ಇವೆರಡೂ ಉದಯಿಸುತ್ತಿರುವಾಗ ಚಂದ್ರನೂ ಇವುಗಳ ಜೊತೆಗೂಡುವುದನ್ನು ಕಾಣಬಹುದು. ಇನ್ನೊಂದು ಗ್ರಹ ಗುರು ಸಂಜೆಯಲ್ಲಿಯೇ ಕಾಣುತ್ತದೆ. ೧೮ರಂದು ಚಂದ್ರನಿಂದ ೪ ಡಿಗ್ರಿಗಳ ಅಂತರದಲ್ಲಿ ಕಾಣುತ್ತದೆ. ಬುಧ ಗ್ರಹವೂ ತಿಂಗಳ ಮಧ್ಯಭಾಗದಲ್ಲಿ ಸಂಜೆ ಪಶ್ಚಿಮದಲ್ಲಿ ಕಾಣತೊಡಗುತ್ತದೆ. ೧೮ರಂದು ಗರಿಷ್ಠ ಕೋನೋನ್ನತಿ. ಅಂದರೆ, ನೋಡಲು ಅತ್ಯುತ್ತಮ ಅವಕಾಶ. ಅದಾದ ಮೇಲೆ ಪುನಃ ಅದು ದಿಗಂತದತ್ತ ಸರಿಯತೊಡಗುತ್ತದೆ. ಬುಧ, ಶುಕ್ರ ಇವೆರಡೂ ಸ್ಥಾನ ಬದಲಿಸುವುದನ್ನು ಹಲವಾರು ದಿನಗಳಲ್ಲಿಯೇ ಗಮನಿಸಬಹುದು. ಮುಂಜಾವಿನಲ್ಲಿ ಶುಕ್ರ ಸೂರ್ಯನತ್ತ ಚಲಿಸುತ್ತಿರುತ್ತದೆ; ಸಂಜೆಯಲ್ಲಿ ತಿಂಗಳ ಕೊನೆಗೆ ಬುಧ ಕೂಡ ಸೂರ್ಯನತ್ತ ಚಲಿಸುತ್ತದೆ. ಆದರೆ, ಎರಡರ ಚಲನೆ ಪರಸ್ಪರ ವಿರುದ್ಧ ದಿಕ್ಕಿನಲ್ಲಿರುತ್ತದೆ. ಇದಕ್ಕೆ ಕಾರಣ ಶುಕ್ರ ಸೂರ್ಯನ ಇನ್ನೊಂದು ಬದಿಯಿಂದ ಹಾದು ಹೋಗಲಿದೆ. ಆದ್ದರಿಂದ ಭೂಮಿ – ಶುಕ್ರರ ಮಧ್ಯೆ ಸೂರ್ಯ ಇರುತ್ತದೆ. ಬುಧ ಗ್ರಹ ಭೂಮಿ ಮತ್ತು ಸೂರ್ಯಗಳ ನಡುವೆ ಹಾದು ಹೋಗಲಿದೆ. ಇದು ಮೇ ತಿಂಗಳಲ್ಲಿ ನಡೆಯಲಿದ್ದು, ಬುಧ ಆಗ ಚುಕ್ಕೆಯಂತೆ ಸೂರ್ಯನ ಮೇಲೆ ಕಾಣಲಿದೆ.

ಸಂಜೆಯ ಆಕಾಶದಲ್ಲಿ ಕಾಣುವ ನಕ್ಷತ್ರಪುಂಜಗಳನ್ನು ನಕ್ಷೆಯ ಸಹಾಯದಿಂದ ಗುರುತಿಸಬಹುದು. ನೆತ್ತಿಯ ಮೇಲೆ ಕಾಣುವ ಮಹಾವ್ಯಾಧ (ಒರೈಯನ್). ಮಿಥುನ ಮತ್ತು ವಿಜಯಸಾರಥಿ – ಇವುಗಳು ಪ್ರಕಾಶಮಾನವಾಗಿವೆ. ತೆಳ್ಳನೆಯ ಮೋಡವಿದ್ದರೂ ಬ್ರಹ್ಮಹೃದಯ (ಕಪೆಲ್ಲಾ), ಲುಬ್ಧಕ (ಸಿರಿಯಸ್), ಅಗಸ್ತ್ಯ (ಕೆನೋಪಸ್) – ಈ ನಕ್ಷತ್ರಗಳನ್ನು ಗುರುತಿಸ ಬಹುದು. ಉತ್ತರದಲ್ಲಿ ಸಪ್ತರ್ಷಿ ಮಂಡಲ, ಪೂರ್ವದ ಅಂಚಿನಲ್ಲಿ ಕನ್ಯಾ, ಸಿಂಹ, ಹಸ್ತ – ಇವು ಕಾಣುವುವು. ಸಿಂಹದ ನಕ್ಷತ್ರಗಳಿಗೂ ಕನ್ಯಾದ ಚಿತ್ರಾ ನಕ್ಷತ್ರಕ್ಕೂ ನಡುವೆ ಗುರುಗ್ರಹ ಇದೆ ಎಂಬ ಅಂಶವೂ ಇಲ್ಲಿ ಸಹಾಯವಾಗುವುದು. ಈ ಅಮಾವಾಸ್ಯೆಯಂದು ಚಂದ್ರ-ಭೂಮಿ ನಡುವಿನ ದೂರ ಕನಿಷ್ಠವಾಗು ವುದರಿಂದ ಭರತದ ಅಬ್ಬರ ಜೋರು. ಹುಣ್ಣಿಮೆಯಂದು ಈ ದೂರ ಗರಿಷ್ಠ ಇರುವುದರಿಂದ ಹುಣ್ಣಿಮೆ ಚಂದ್ರ ಸ್ವಲ್ಪ ಸಣ್ಣದಾಗಿ ಕಾಣುವುದು. ಆದರೆ ಬರಿ ಕಣ್ಣಿಗೆ ಈ ವ್ಯತ್ಯಾಸ ವ್ಯಕ್ತವಾಗುವುದಿಲ್ಲ.




ಮುಂಜಾವಿನಲ್ಲಿ ಉಲ್ಕೆಗಳೂ ಕಾಣಬಹುದು. ೨೨-೨೩ರ ಅವಧಿಯಲ್ಲಿ ಲಿರಿಡ್ಸ್ ಅಂದರೆ ಲೈರಾ (ವೀಣಾ) ಪುಂಜದಿಂದ ಹೊರಟಂತೆ ಕಾಣುವ ಉಲ್ಕೆಗಳ ವೃಷ್ಟಿ ಇದೆ. ಇದು ೪೧೫ ವರ್ಷಗಳಿಗೆ ಒಮ್ಮೆ ಬಂದು ಹೋಗುವ ಥ್ಯಾಚರ್ ಧೂಮಕೇತುವಿನ ಧೂಳಿನ ಕಣಗಳಿಂದ ಉಂಟಾಗುತ್ತದೆ. ಗಂಟೆಗೆ ೧೦-೧೫ ಉಲ್ಕೆಗಳು ಬೀಳಬಹುದಾದರೂ ಹುಣ್ಣಿಮೆ ಚಂದ್ರನ ಬೆಳಕಿನಿಂದ ಕ್ಷೀಣವಾದವು ಕಾಣದಂತಾಗಬಹುದು.


*೨೫ರ ಸಂಜೆ ಚಂದ್ರ-ಮಂಗಳ-ಶನಿ ಪುಟ್ಟ ಗುಂಪು*

**ಏಪ್ರಿಲ್ ತಿಂಗಳ ಖಗೋಳ ದಿನಚರಿ**

೬ ಶುಕ್ರ-ಚಂದ್ರ ಜೋಡಿ, ಆಚ್ಛಾದನೆ ಕಾಣುವುದಿಲ್ಲ *
೭ ಅಮಾವಾಸ್ಯೆ ೧೬.೩೦ಕ್ಕೆ ಚಂದ್ರ-ಭೂಮಿ ನಡುವೆ ಕನಿಷ್ಠ ಅಂತರ
೮ ಬುಧ-ಚಂದ್ರ ಜೋಡಿ
೧೦ ರೋಹಿಣಿ-ಚಂದ್ರ ಜೋಡಿ; ಆಚ್ಛಾದನೆ ಕಾಣುವುದಿಲ್ಲ *
೧೪ ಚಾಂದ್ರಮಾಸದ ಮೊದಲ ಪಾದ
೧೭ ಮಂಗಳ ಗ್ರಹದ ಹಿನ್ನಡೆ ಆರಂಭ
೧೮ ಚಂದ್ರ-ಗುರು ಜೋಡಿ *
ಬುಧ ಗ್ರಹದ ಗರಿಷ್ಠ ಕೋನೋನ್ನತಿ *
೨೧ ಚಂದ್ರ-ಭೂಮಿ ಅಂತರ ಗರಿಷ್ಠ
೨೨ ಹುಣ್ಣಿಮೆ; ಶುಕ್ರ – ಯುರೇನಸ್ ನಡುವೆ ಅರ್ಧ ಡಿಗ್ರಿ ಅಂತರ *
೨೩ ಲಿರಿಡ್ಸ್ ಉಲ್ಕಾವೃಷ್ಟಿ *
೨೫ ಸಂಜೆ ಚಂದ್ರ-ಮಂಗಳ-ಶನಿ – ಪುಟ್ಟ ಗುಂಪು *
೨೯ ಬುಧ ಗ್ರಹದ ಹಿನ್ನಡೆ ಆರಂಭ
೩೦ ಚಾಂದ್ರಮಾಸದ ಕೊನೆಯ ಪಾದ

(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರೂ ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಬರಲಿರುವ ಸಂದರ್ಶನಗಳ ಒಂದು ಝಲಕ್

ಕೆಬ್ಬಾಳ ಕೋಲಾರ ಜಿಲ್ಲೆಯ ಯಾವುದೋ ಮೂಲೆಯಲ್ಲಿರುವ ಪುಟ್ಟಹಳ್ಳಿ, ಕುಗ್ರಾಮ. ಎರಡು ಮೂರು ವರ್ಷಕ್ಕೊಮ್ಮೆ ಬಂದೆರಗುತ್ತಿದ್ದ ಬರಗಾಲದಿಂದ ಬೇಸತ್ತು ಹೋಗಿದ್ದ ಜನರು ವಾಸಿಸುತ್ತಿದ್ದ ಆ ಕೆಬ್ಬಾಳದಲ್ಲಿದ್ದುದು ಕೇವಲ ಐವತ್ತು ಕುಟುಂಬಗಳು. ಅವುಗಳಲ್ಲಿ ಬ್ರಾಹ್ಮಣರದು ಎರಡು. ಇನ್ನು, ಬಹುತೇಕವು ಇತರೆ ಜಾತಿಯವರದು. ಅದರಲ್ಲೂ ಕೆಳ ಜಾತಿಯವರದೇ ಜಾಸ್ತಿ. ಕೊಸರಿಗಿರಲಿ ಎಂಬಂತೆ ಒಟ್ಟು ಏಳು ಮಂದಿ ಇದ್ದ ಎರಡು ಮುಸ್ಲಿಂ ಕುಟುಂಬಗಳೂ ಇದ್ದವು. ಇತರರಂತೆ ಅವರೂ ಕೂಲಿನಾಲಿ ಮಾಡಿಕೊಂಡೋ, ಹೂವು ಹಣ್ಣು ಮಾರಿಕೊಂಡೋ ಬದುಕು ಸಾಗಿಸುತ್ತಿದ್ದವರು. ಅವರ ಎರಡು ಹೊತ್ತಿನ ಕೂಳಿಗೆ ಆಧಾರ ಕೇವಲ ಐದು ಕಿಲೋಮೀಟರ್ ದೂರದಲ್ಲಿದ್ದ ಅಲಿಪುರದ ಗ್ರಾಮಸ್ಥರೊಡನೆ ನಡೆಸುತ್ತಿದ್ದ ಸಣ್ಣಪುಟ್ಟ ವ್ಯವಹಾರಗಳು. ಶುಕ್ರವಾರದ ನಮಾಜಿಗೂ ಅಲ್ಲಿಗೇ ಹೋಗಬೇಕಿತ್ತು. ಅಲಿಪುರದ ಒಟ್ಟು ಜನಸಂಖ್ಯೆ ೩೦೦ರ ಆಜುಬಾಜು. ಆ ಹಳ್ಳಿಯ ವೈಶಿಷ್ಟ್ಯವೆಂದರೆ ಅಲ್ಲಿರುವವರಲ್ಲಿ ಶೇ. ೯೫ರಷ್ಟು ಮಂದಿ ಮುಸ್ಲಿಮರು. ಕೆಬ್ಬಾಳದ ಮುಗ್ಧ ಜನರು ಜಾತಿ ಜಗಳ, ಕೋಮು ವೈಷಮ್ಯಗಳ ಗೊಡವೆಗೆ ಯಾವತ್ತಿಗೂ ಹೋದವರೇ ಅಲ್ಲ. ಆ ಊರಿನ ಜನರ ಸಹಬಾಳ್ವೆ, ಕೋಮು ಸೌಹಾರ್ದದ ವಿಷಯ ಬಂದಾಗ ಒಂದು ವಿಷಯದ ಬಗ್ಗೆ ಹೇಳಲೇ ಬೇಕು.

ಶ್ಯಾನುಭೋಗ ರಾಮಣ್ಣನವರ ಮಡದಿ ಅಹಲ್ಯಾ ಬಾಯಿ ಬಲು ಸಂಪ್ರದಾಯಸ್ಥೆ. ಬೆಂಗಳೂರಿನಲ್ಲಿದ್ದ ಆಕೆಯ ತಮ್ಮ ಉಪೇಂದ್ರ ಅಕ್ಕ, ಭಾವನ್ನು ನೋಡಲು ಮೂರು ನಾಲ್ಕು ತಿಂಗಳಿಗೊಮ್ಮೆಯಾದರೂ ಕೆಬ್ಬಾಳಕ್ಕೆ ಬಂದು ಹೋಗುತ್ತಿದ್ದ. ಆಗ ಅಯೋಧ್ಯೆಯ ಬಾಬರಿ ಮಸೀದಿಯನ್ನು ಸಂಘಪರಿವಾರದವರು ಧ್ವಂಸ ಮಾಡಿದಾಗ, ಅಲ್ಲಿ ರಾಮಮಂದಿರ ನಿರ್ಮಿಸುವ ಕರೆಗೆ ಓಗೊಟ್ಟು ಇಟ್ಟಿಗೆ ಹೊತ್ತಿದ್ದನಂತೆ. ಬೆಂಗಳೂರಿನ ಅದ್ಯಾವುದೋ ಕ್ಷೇತ್ರದಿಂದ ಭಾರತೀಯ ಜನತಾ ಪಕ್ಷದ ಅಭ್ಯರ್ಥಿಯಾಗಿ ನಗರ ಸಭೆ ಚುನಾವಣೆಗೆ ಮೂರು ಬಾರಿ ಸ್ಪರ್ಧಿಸಿ ಠೇವಣಿ ಕಳೆದುಕೊಂಡಿದ್ದನಂತೆ. ಹೀಗೆ ಒಮ್ಮೆ ಕೆಬ್ಬಾಳಕ್ಕೆ ಬಂದಿದ್ದಾಗ ಭಾವ ರಾಮಣ್ಣನವರೊಡನೆ ಲೋಕಾಭಿರಾಮವಾಗಿ ಮಾತನಾಡುತ್ತ, "ಏನು ಭಾವ, ನೀವು ಎಷ್ಟಾದರೂ ಹಿರಿಯರು. ನಮ್ಮ ಶಾಸ್ತ್ರ, ಸಂಪ್ರದಾಯಗಳನ್ನು ಚೆನ್ನಾಗಿ ತಿಳಿದವರು. ಪೇಜಾವರ ಶ್ರೀಗಳ ಪಾದಪೂಜೆ ಕಾರ್ಯಕ್ರಮ ಎಲ್ಲೆಲ್ಲಿ ಇರುತ್ತೋ ಅಲ್ಲೆಲ್ಲಾ ನೀವು ಹಾಜರಿರ್ತೀರಿ. ಅಲ್ಲಾ, ಇಷ್ಟೊಂದು ಜನ ಹಿಂದೂಗಳಿರೋ ಈ ಹಳ್ಳಿನಲ್ಲಿ ಆ ಎರಡು ದರಿದ್ರ ಸಾಬರ ಕುಟುಂಬಗಳು ಇರೋದು ಸರೀನಾ ? ನೀವೇ ಹೇಳಿ. ಯಾಕೆ ಆ ಪೋಕರಿಗಳನ್ನು ಅಲಿಪುರಕ್ಕೋ, ಪಾಕಿಸ್ತಾನಕ್ಕೋ ಅಥವಾ ಇನ್ಯಾವುದಾದರೂ ಸುಡುಗಾಡುಗೋ ಒದ್ದೋಡಿಸಬಾರದೇ ? ಈ ನಿಮ್ಮ ಹಳ್ಳಿಯವರಿಗೆ ಅದನ್ನು

**"ಸರ್, ನಾನು ಮೊಟ್ಟಮೊದಲು ಮಾಡೋ ಕೆಲ್ಸ ಅಂದರೆ ಸಂಸ್ಕೃತ ಮಾಧ್ಯಮ, ವೇದ–ಉಪನಿಷತ್ತುಗಳ ಅಧ್ಯಯನ, ಭಗವದ್ಗೀತೆಗಳ ಅಧ್ಯಯನ ಮತ್ತು ಗಾಯತ್ರಿ ಮಂತ್ರದ ಪಠನ, ಇವನ್ನೆಲ್ಲಾ ಹೈಸ್ಕೂಲ್ ಮಟ್ಟದಿಂದಲೇ ಕಡ್ಡಾಯಗೊಳಿಸೋದು. ಅಲ್ಲದೆ ನಮ್ಮ ಭವ್ಯ ಹಿಂದೂ ಸಂಸ್ಕೃತಿಯನ್ನು ಪರಿಚಯಿಸುವಂತಹ ಮತ್ತು ಮುಸ್ಲಿಂ ಆಕ್ರಮಣಕಾರರು ನಡೆಸಿರೋ ಎಲ್ಲ ದುಷ್ಕೃತ್ಯಗಳನ್ನು ಬಯಲುಗೊಳಿಸುವಂತಹ ಪಠ್ಯಗಳನ್ನು ಹೆಸರಾಂತ ಹಿಂದೂ ಪಂಡಿತರಿಂದ ಬರೆಯಿಸ್ತೇನೆ. ಮನುವಿನ ಬಗ್ಗೆ, ನಮ್ಮ ವರ್ಣವ್ಯವಸ್ಥೆಯ ಬಗ್ಗೆ ವಿಶೇಷ ಅಧ್ಯಯನ ಮಾಡಲು ಬಯಸುವವರಿಗೆ ಅನುಕೂಲವಾಗುವಂತಹ ಯೋಜನೆಯನ್ನು ರೂಪಿಸ್ತೇನೆ."**

**ಎಸ್. ಸುರೇಂದ್ರ**



ಮಾಡೋದಕ್ಕೆ ಆಗದೆ ಹೋದರೆ, ನನಗೆ ಹೇಳಿ. ಬೆಂಗಳೂರಿನಿಂದ ನಮ್ಮ ಒಂದು ದಂಡನ್ನೇ ಕರಕೊಂಡು ಬಂದು ಏನು ಬೇಕೋ ಅದನ್ನು ಮಾಡಿ ಮುಗಿಸ್ತೀನಿ" ಅಂತ ತಗಾದೆ ತೆಗೆದಿದ್ದನಂತೆ. ಆದರೆ ರಾಮಣ್ಣನವರು ಅವನ ಮಾತಿಗೆ ಸೊಪ್ಪು ಹಾಕಿರಲಿಲ್ಲ. ಸದ್ಯ ಹಾಗಿತ್ತು ಕೆಬ್ಬಾಳದ ವಾತಾವರಣ.

ಆ ಊರಿನ ಜನ ಶ್ಯಾನುಭೋಗ ರಾಮಣ್ಣನವರನ್ನು ಗೌರವದಿಂದ ಕಾಣುತ್ತಿದ್ದರೂ, ಊರಿನವರಲ್ಲಿ ಸಣ್ಣಪುಟ್ಟ ಜಗಳ, ಭಿನ್ನಾಭಿಪ್ರಾಯಗಳು ಎದುರಾದರೆ, ಅವುಗಳನ್ನು ಬಗೆಹರಿಸುವಲ್ಲಿ ದೊಡ್ಡ ಕುಳ ಎನಿಸಿಕೊಂಡಿದ್ದ ಕೆಂಚಪ್ಪನವರ ಮಾತೇ ಅಂತಿಮ. ಅವರದೂ ತೂಕದ ವ್ಯಕ್ತಿತ್ವವೇ.

ಕೆಂಚಪ್ಪನವರು ಎಂಟೋ ಹತ್ತೋ ಎಕರೆ ಜಮೀನಿನ ಒಡೆಯರಷ್ಟೇ ಅಲ್ಲ, ಅವರ ದೂರದ ಸಂಬಂಧಿಯೊಬ್ಬರು ಪಕ್ಕದ ಜಿಲ್ಲಾ ಕೇಂದ್ರವನ್ನು ಪ್ರತಿನಿಧಿಸುತ್ತಿದ್ದ ವಿಧಾನಸಭಾ ಸದಸ್ಯ ಅರ್ಥಾತ್ ಎಂ.ಎಲ್.ಎ. ಅಷ್ಟೇ ಅಲ್ಲ, ಅವರ ದಾಯಾದಿ ನಾಗಪ್ಪನವರ ಮಗ ರಾಜಣ್ಣ ರಾಜ್ಯ ಸರ್ಕಾರದ ಪ್ರತಿಷ್ಠಿತ ಇಲಾಖೆಯೊಂದರಲ್ಲಿ ಐ.ಎ.ಎಸ್. ಅಧಿಕಾರಿ ಅವರೂ ಮೂಲತಃ ಕೆಬ್ಬಾಳದವರೇ. ನಾಗಪ್ಪನವರು ಸಿಕ್ಕಿದವರೊಂದಿಗೆಲ್ಲಾ ತಮ್ಮ ಮಗನ ಸಾಧನೆಯ ಬಗ್ಗೆ ಹೇಳಿಕೊಂಡು ಬೀಗುತ್ತಿದ್ದುದು ಸಹಜವೇ ಅನ್ನಿ. ಊರಿನವರಿಗೂ ರಾಜಣ್ಣ ಅಂದರೆ ಇನ್ನಿಲ್ಲದ ಅಭಿಮಾನ, ಐ.ಎ.ಎಸ್. ಪರೀಕ್ಷೆಯಲ್ಲಿ ಪಾಸ್ ಆಗೋದು ಅಂದರೆ ಹುಡುಗಾಟವೇ !



## ರವಿ ಎಂದರೆ

ರವಿ
ಎಂದರೆ
ಬೆಳಕಿನ ಮುಖಂಡ
ಅವನ
ಬೆಳಕು ಅಖಂಡ
ಬೆಳಗುವವನು
ಅವನು ಈ ಭೂಖಂಡ !

**ಗೀತಾಶಾಸ್ತ್ರಿ**
ಬೆಂಗಳೂರು – ೨೮

ಹಳ್ಳಿಯಲ್ಲಿ ಒಳ್ಳೆಯ ಹೆಸರಿತ್ತಾದರೂ ಕೆಂಚಪ್ಪನವರು ರಾಜಕೀಯದಿಂದ ದೂರವೇ. ಒಬ್ಬನೇ ಮಗ ಮೈಲಾರಿಯೂ ಚೆನ್ನಾಗಿ ಓದಿ ಉತ್ತಮ ಶಿಕ್ಷಣ ಪಡೆದು ರಾಜಣ್ಣನಂತೆ ಐ.ಎ.ಎಸ್. ಅಧಿಕಾರಿಯಾಗಬೇಕೆಂಬ ಮಹದಾಸೆ ಕೆಂಚಪ್ಪನವರಿಗೆ. ಮಡದಿ ಮಾದಮ್ಮನವರು, "ಅಲ್ಲಾ, ಅವನಿಗೆ ಯಾವುದು ಇಷ್ಟ ಇದೆಯೋ ಅದನ್ನೇ ಓದಲಿ ಬಿಡಿ. ಸುಮ್ನೆ ಮೂರು ಹೊತ್ತು ಐ.ಎ.ಎಸ್., ಪೈ.ಎ.ಎಸ್. ಅಂತ ಯಾಕೆ ಜಪಿಸ್ತಾ ಇರ್ತೀರಿ... ಅಂತ" ಎಂದು ಎಷ್ಟೇ ಗೋಗರೆದರೂ ಅವರ ಮಾತಿಗೆ ಕಿಮ್ಮತ್ತೆಲ್ಲಿತ್ತು ? ಹಟಕ್ಕೆ ಬಿದ್ದರೆ ತಾವಂದುಕೊಂಡಿದ್ದನ್ನು ಸಾಧಿಸಲೇ ಬೇಕು ಎಂಬ ಛಲ ಇದ್ದ ವ್ಯಕ್ತಿ ಆತ. ಹುಡುಗನಾಗಿದ್ದಾಗಿನಿಂದಲೂ ಅವರದು ಅದೇ ಜಾಯಮಾನ. ಆ ಊರಿನಲ್ಲಿ ಇದ್ದದ್ದು ಪ್ರೈಮರಿ ಮತ್ತು ಮಿಡ್ಲ್ ಸ್ಕೂಲ್ ಮಾತ್ರ, ಅದೂ ಯಾವುದೋ ಒಂದು ಮುರುಕಲು ಕಟ್ಟಡದಲ್ಲಿ. ಬಲವಂತಕ್ಕೆ ಬಿದ್ದು ಮಕ್ಕಳನ್ನು ಹಾಗೂ ಹೀಗೂ ಪ್ರೈಮರಿವರೆಗೆ ಓದಿಸಿ ಹೊಲದಲ್ಲಿ ದುಡಿಯೋದಕ್ಕೋ, ಇಲ್ಲ ಕೂಲಿನಾಲಿ ಮಾಡೋದಕ್ಕೋ ಹಾಕ್ತಾ ಇದ್ದೋರೇ ಜಾಸ್ತಿ. "ಇದೇನು ಇದು. ಕೆಂಚಪ್ಪನವರಿಗೆ ಐ.ಎ.ಎಸ್. ಬಗ್ಗೆ ಇಂಥ ಎಲ್ಲಿಲ್ಲದ ಹುಚ್ಚು ! ನಿರ್ವಾಕ ಇಲ್ಲ" ಅಂತ ಹುಬ್ಬೇರಿಸು ತ್ತಿದ್ದವರಿಗೇನೂ ಕಡಿಮೆ ಇರಲಿಲ್ಲ ಕೆಬ್ಬಾಳದಲ್ಲಿ.

ಅಷ್ಟೊ ಇಷ್ಟೊ ಹಣ ಕೂಡಿಸಿ ಮಗ ಮೈಲಾರಿಯನ್ನು ಕೋಲಾರದಲ್ಲಿದ್ದ ಪ್ರತಿಷ್ಠಿತ ಎಂ. ಕೆ. ಎಸ್. ಹೈಸ್ಕೂಲಿಗೆ ಸೇರಿಸಿದ್ದೂ ಆಯಿತು. ಹೇಗಿದ್ದರೂ ಎಂ.ಎಲ್.ಎ. ಅವರ ಶಿಫಾರಸು ಬೇರೆ ಇತ್ತಲ್ಲಾ ! ಶಾಲೆಯ ಹತ್ತಿರದಲ್ಲೇ ಇದ್ದ ಹಾಸ್ಟೆಲ್‌ನಲ್ಲಿ ವಾಸ್ತವ್ಯ ಹೂಡಲು ಅವಕಾಶ ಸಿಕ್ಕಿದ್ದೂ ಅವರಿಂದಲೇ.

ಮೈಲಾರಿ ಹೇಳಿಕೊಳ್ಳುವಂತಹ ಪ್ರತಿಭಾವಂತ ವಿದ್ಯಾರ್ಥಿಯಲ್ಲದಿದ್ದರೂ ತನ್ನ ಓದನ್ನು ಕಡೆಗಣಿಸುತ್ತಿರಲಿಲ್ಲ. ತಂದೆಯವರು ತಿಂಗಳಿಗೆ ಎರಡು ಬಾರಿಯಾದರೂ ಬಂದು ಹೆಡ್‌ಮಾಸ್ಟರ್‌ಅನ್ನು ಭೇಟಿ ಮಾಡಿ ಮಗನ ವಿದ್ಯಾಭ್ಯಾಸದ ಬಗ್ಗೆ ವಿಚಾರಿಸುತ್ತಿದ್ದರು. ಹಾಗೆ ಬಂದಾಗಲೆಲ್ಲಾ, "ಮೈಲಾರಿ, ಚೆನ್ನಾಗಿ ಓದಿ ಮುಂದೆ ನೀನೂ ಐ.ಎ.ಎಸ್. ಅಧಿಕಾರಿಯಾಗೋದನ್ನು ನಾನು ಕಣ್ತುಂಬ ನೋಡಬೇಕಪ್ಪಾ. ಅದಕ್ಕೆ ಎಷ್ಟು ಖರ್ಚಾದರೂ ಸರೀನೆ. ಬೇಕಾದರೆ ಒಂದೆರೆಡೆಕರೆ ಹೊಲ ಮಾರೋದಕ್ಕೂ ನಾನು ತಯಾರು. ನೀನು ಎಸ್.ಎಸ್.ಎಲ್.ಸಿ. ಪಾಸ್ ಮಾಡಿದ ಮೇಲೆ ಬೆಂಗಳೂರಿನ ಯಾವುದಾದರೂ ಒಳ್ಳೆ ಕಾಲೇಜಿಗೆ ಸೇರಿಸ್ತೀನಿ. ಹೇಗಿದ್ದರೂ ನಮ್ಮ ರಾಜಣ್ಣ ಇದಾನೆ ಅಲ್ಲಿ" ಅಂತ ಹೇಳೋದನ್ನು ಮರೀತಾನೇ ಇರಲಿಲ್ಲ. ಪಾಪ ! ಆ ಹುಡುಗಾನೂ ಅವರು ಹೇಳಿದ್ದನ್ನೆಲ್ಲಾ ಮನಸ್ಸಿನಲ್ಲಿಟ್ಟುಕೊಂಡು ಓದಿನಲ್ಲಿ ಗಂಭೀರವಾಗೇ ತೊಡಗಿಕೊಂಡಿದ್ದ. ಕ್ಲಾಸ್‌ನಲ್ಲೂ ಅಷ್ಟೆ, ಉಪಾಧ್ಯಾಯರು ಪಾಠ ಮಾಡ್ತಿದ್ದಾಗ ಆಕಡೆ ಈಕಡೆ ನೋಡ್ದೆ ಸೀರಿಯಸ್ಸಾಗಿ ಕೇಳೋದು ಮಾತ್ರ ಅಲ್ಲ, ಮುಖ್ಯವಾದ ಪಾಯಿಂಟ್ಸ್‌ನೆಲ್ಲಾ ನೋಟ್‌ಬುಕ್‌ನಲ್ಲಿ ಬರೆದುಕೊಳ್ತಾ ಇದ್ದ. ಹೆಡ್‌ಮಾಸ್ಟರ್ ಕೂಡ ವಾರಕ್ಕೆ ಒಂದ್ಸಲ ಆದ್ರೂ ಮೈಲಾರಿನ ತಮ್ಮ ಕೊಠಡಿಗೆ ಕರೆಸಿಕೊಂಡು ಮಾರ್ಕ್ಸ್‌ಕಾರ್ಡ್ ಜೊತೆಗೆ ನೋಟ್‌ಬುಕ್ಕು ಅದೂ ಇದೂ ಎಲ್ಲವನ್ನೂ ಪರಿಶೀಲಿಸಿ ಅಗತ್ಯ ಸೂಚನೆಗಳನ್ನು ನೀಡ್ತಾ ಇದ್ದರು. ಅಷ್ಟೇ ಅಲ್ಲ "ನೋಡಪ್ಪ, ನಿನ್ನ ಮೇಲೆ ದೊಡ್ಡ ಜವಾಬ್ದಾರಿ ಇದೆ. ನಿಮ್ಮ ತಂದೆಯವರ ಆಸೇನ ನೀನು ಈಡೇರಿಸಲೇ ಬೇಕು" ಅಂತ ನೆನಪು ಮಾಡಿ ಕಳಿಸ್ತಾ ಇದ್ದರು. ಮೈಲಾರಿಗೆ ಸ್ಕೂಲ್‌ನಲ್ಲಾಗಲಿ, ಹಾಸ್ಟೆಲ್‌ನಲ್ಲಾಗಲಿ, ಇದ್ದದ್ದು ಇಬ್ಬರೋ ಮೂವರೋ ಸ್ನೇಹಿತರು, ಅಷ್ಟೆ. ಅವರನ್ನು ಬಿಟ್ಟರೆ ಕ್ಲೋಸ್ ಫ್ರೆಂಡ್ಸ್ ಅಂತ ಯಾರೂ ಇರಲಿಲ್ಲ. ಭಾನುವಾರ ಮಾತ್ರ ಸ್ಕೂಲ್ ಕ್ರಿಕೆಟ್ ಟೀಮಿನವರೊಂದಿಗೆ ಬೆಳಿಗ್ಗೆ ಹೊತ್ತು ಒಂದೆರಡು ಗಂಟೆ ಆಟ ಆಡಿದ ಮೇಲೆ ರೂಮಿಗೆ ಬಂದರೆ ಮತ್ತೆ ಓದಿನ ಕಡೆ ಗಮನ. ಮರುದಿನ ಟೆಸ್ಟ್‌ನಲ್ಲಿ ಏನೇನು ಪ್ರಶ್ನೆ ಕೇಳ್ತಾರೋ ಏನೋ ಅನ್ನೋ ಚಿಂತೆ. ಇವೆಲ್ಲದರ ಪರಿಣಾಮಾನೋ ಏನೋ, ಶೇ. ೪೦–೪೫ ಮಾರ್ಕ್ಸ್ ಗಳಿಸ್ತಾ ಇದ್ದ ಈ ಹಳ್ಳಿ ಹುಡುಗ ಎಸ್.ಎಸ್.ಎಲ್.ಸಿ. ಪರೀಕ್ಷೇಲಿ ಶೇ. ೯೦ರಷ್ಟು ಮಾರ್ಕ್ಸ್ ಗಳಿಸಬೇಕೆ, ಹೆಡ್‌ಮಾಸ್ಟರ್ ಮೂಗಿನ ಮೇಲೆ ಬೆರಳಿಟ್ಟುಕೊಳ್ಳೋ ಹಾಗೆ ! ವಿಷಯ ತಿಳಿದ ತಕ್ಷಣ ಮಿಂಚಿನಂತೆ ಬಂದ ಕೆಂಚಪ್ಪನವರು ರಾಜಣ್ಣನವರಿಗೆ ಫೋನಾಯಿಸಿ ಮೈಲಾರಿಯ ಮುಂದಿನ ಓದಿಗೆ ಸಕಲ ಏರ್ಪಾಡನ್ನೂ ಮಾಡಿದರು. ರಾಜಣ್ಣನವರು, "ಕೆಂಚಪ್ಪನೋರೆ, ನಿಮ್ಮ ಹುಡುಗ ನಮ್ಮನೇಲೆ ಇದ್ಕೊಂಡು ಓದ್ಲಿ ಬಿಡಿ" ಎಂದಿದ್ದು ಕೇಳಿ ಕೆಂಚಪ್ಪನವರ ಕಣ್ಣುಗಳು ಮಂಜುಮಂಜಾಗಿದ್ದವು.

ಮೈಲಾರಿ ಸೇರಿದ್ದ ಕಾಲೇಜಿಗೆ ಒಳ್ಳೆ ಹೆಸರಿತ್ತು. ಪ್ರತಿ ವರ್ಷ ಬಿ.ಎ., ಬಿ.ಎಸ್‌ಸಿ., ಬಿ.ಕಾಂ., ಪರೀಕ್ಷೆಗಳ ಫಲಿತಾಂಶ ಬಂದಾಗಲೆಲ್ಲಾ ಮೊದಲ ಐದಾರು ಸ್ಥಾನಗಳಲ್ಲಿ ಕಡೇ ಪಕ್ಷ ಮೂರು ರ್‍ಯಾಂಕುಗಳು ಆ ಕಾಲೇಜಿನ ವಿದ್ಯಾರ್ಥಿಗಳ ಪಾಲಿಗೇನೆ. ಅದೊಂದು ಥರಾ ಆ ಕಾಲೇಜು ಸಾಧಿಸುತ್ತಿದ್ದ ಮನಾಪಲಿ.

ತಂದೆಯ ಪ್ರೋತ್ಸಾಹ, ಐ.ಎ.ಎಸ್. ರಾಜಣ್ಣನವರ ಮಾರ್ಗದರ್ಶನ ! ಇದಕ್ಕಿಂತಲೂ ಇನ್ನೇನು ತಾನೆ ಬೇಕು ? ಜೊತೆಗೆ, ಐ.ಎ.ಎಸ್. ಅಧಿಕಾರಿಯಾಗಬೇಕೆಂಬ ಅತೀವ ಹಂಬಲ ! ಇವೆಲ್ಲದರ ಹಿನ್ನೆಲೆಯಲ್ಲಿ ಬಿ.ಎ., ಬಿ.ಕಾಂ., ಯಾವುದೂ ಬೇಡ ಅಂತ ಬಿ.ಎಸ್‌ಸಿ., ಕೋರ್ಸನ್ನೇ ಆಯ್ಕೆಮಾಡಿಕೊಂಡ ಮೈಲಾರಿ ಎಲ್ಲಾ ಅಧ್ಯಾಪಕರ ಅಚ್ಚುಮೆಚ್ಚಿನ ವಿದ್ಯಾರ್ಥಿ ಆಗಿದ್ದರಲ್ಲಿ ಅಚ್ಚರಿಯೇನಿಲ್ಲ, ಬಿಡಿ. ಅವನ ನಡವಳಿಕೆ ವ್ಯಕ್ತಿತ್ವಗಳಲ್ಲಿ ನಂಬಲಾರದಷ್ಟು ಬದಲಾವಣೆ ಆಗಿತ್ತು. ಸದಾ ಲವಲವಿಕೆಯಿಂದ ನಗುನಗುತ್ತ ಇತರ ವಿದ್ಯಾರ್ಥಿಗಳೊಡನೆ ಬೆರೆಯುತ್ತಿದ್ದ ಮೈಲಾರಿಗೆ ಅವನ ಕ್ಲಾಸ್‌ಮೇಟ್ಸ್ ಆಗಿದ್ದ ಶೇಖರ್ ಮತ್ತು ಸುರೇಶ್ ಇಬ್ಬರೂ ತೀರ ಹತ್ತಿರದ ಸ್ನೇಹಿತರಾದರು. ಅವರೂ ರ್‍ಯಾಂಕ್ ಗಳಿಸುವ ಸಾಮರ್ಥ್ಯ ಇದ್ದವರು. ರಾಜಣ್ಣನವರ ಸಲಹೆಯಂತೆ ಪಠ್ಯಪುಸ್ತಕಗಳ ಓದಿನ ಜೊತೆಗೆ ೩–೪ ದಿನಪತ್ರಿಕೆಗಳು, ಮ್ಯಾಗಜೀನುಗಳು ಮತ್ತು ಪ್ರಸಿದ್ಧ ಸಾಹಿತಿಗಳ ಕೃತಿಗಳನ್ನು ಓದುತ್ತಲೇ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಆಗುಹೋಗುಗಳ ಬಗ್ಗೇನೂ ಆಳವಾದ ಜ್ಞಾನ ಸಂಪಾದಿಸಿ ಪಡೆಯೋದರಲ್ಲಿ ತಲ್ಲೀನನಾದ ಮೈಲಾರಿ.

ಎಷ್ಟಾದರೂ ರಾಜಣ್ಣನವರು ಅನುಭವಸ್ಥರು. "ನೋಡಯ್ಯ ಮೈಲಾರಿ, ಇಷ್ಟೆಲ್ಲಾ ಓದಿನ ಜೊತೆಗೆ ನಮ್ಮ ದೇಶದ ರಾಜಕೀಯದ ಬಗ್ಗೇನೂ ತಿಳಿಕೊಂಡಿರು. ಅದೂ ಅಲ್ಲದೆ, ಈಗ ಕೇಂದ್ರದಲ್ಲಿ ಅಧಿಕಾರದಲ್ಲಿರೋದು ಬಿ.ಜೆ.ಪಿ. ಸರ್ಕಾರ. ಅದರ ಬಗ್ಗೆ, ಅದರ ನಾಯಕರ ಬಗ್ಗೆ, ಅದರ ನೀತಿ–ಸಿದ್ಧಾಂತಗಳ ಬಗ್ಗೆ, ಸಂಘಪರಿವಾರದ

ಬಗ್ಗೆ, ಪ್ರಧಾನಿ ಮೋದಿಯವರ ಬಗ್ಗೆ, ಸೀರಿಯಸ್ಸಾಗಿ ಓದ್ಕೊ, ಮರೀಬೇಡ" ಅಂತ ಆಗಾಗ್ಗೆ ಹೇಳ್ತಾನೇ ಇದ್ದರು. ಅವನ ಗೆಳೆಯ ಶೇಖರ್ ಕಿಲಾಡಿ ಆಸಾಮಿ, ಬಹಳ ಪ್ರ್ಯಾಕ್ಟಿಕಲ್ಲಾಗಿ ಯೋಚನೆ ಮಾಡೋ ಹುಡುಗ. ಸಮಯ ಸಿಕ್ಕಿದಾಗಲೆಲ್ಲಾ ರಾಷ್ಟ್ರದ ಏಳಿಗೆಗಾಗಿಯೇ ಮೀಸಲೆಂದು ಹೇಳಿಕೊಳ್ಳುತ್ತಿದ್ದ ಒಂದು ಪ್ರಸಿದ್ಧ ಪ್ರಕಾಶನದ ಪುಸ್ತಕಗಳ ಮೇಲೆ ಕಣ್ಣಾಡಿಸುತ್ತ ಇರು ಅಂತ ಆಗಾಗ್ಗೆ ಕಿವಿಮಾತು ಹೇಳ್ತಾನೇ ಇದ್ದ. ಮೈಲಾರಿ ಎಷ್ಟೊಂದು ಓದ್ದಾ ಅಂದರೆ ಅವನ ತಲೆ ಸಿಡಿದುಹೋಗ್ದೇ ಇದ್ದದ್ದೇ ಒಂದು ಪವಾಡ.

ಇನ್ನೊಂದು ದಿನ ಶೇಖರ್, "ಮೈಲಾರಿ ಇಂಟರ್‌ವ್ಯೂ ಯಾರು ಮಾಡ್ತಾರೋ ಅವರ ವೇಷಭೂಷಣ, ಅವರ ಹಣೆ ಮೇಲೆ ನಾಮ, ವಿಭೂತಿ ಏನಾದರೂ ಇದೆಯಾ, ಇಂಥದ್ದನ್ನೆಲ್ಲಾ ಹುಷಾರಾಗಿ ನೋಡ್ಕೊಂಡು ಅದಕ್ಕೆ ತಕ್ಕಂತೆ ಉತ್ತರ ಕೊಡಬೇಕು, ಗೊತ್ತಾಯ್ತಾ ? ಅಂತ ಎಚ್ಚರಿಸ್ತಾನೇ ಇದ್ದ.

ಎರಡು ವರ್ಷಗಳ ಕಾಲೇಜು ಓದು ಮಿಂಚಿನಂತೆ ಸರಿದುಹೋಗಿತ್ತು. ಡಿಗ್ರಿ ಫಲಿತಾಂಶನೂ ಪ್ರಕಟವಾಯ್ತು. ನಿರೀಕ್ಷೆಯಂತೆ ಮೈಲಾರಿಗೆ ೫ನೇ ರ್‍ಯಾಂಕ್ ! ಇನ್ನು, ಐ.ಎ.ಎಸ್. ಅವನನ್ನು ಕೈಬೀಸಿ ಕರೆಯೋದೊಂದೆ ಬಾಕಿ ! ಒಂದಷ್ಟು ದಿನ ಕೆಬ್ಬಾಳದಲ್ಲಿ ಮನೆಯವರೊಡನೆ ಕಾಲ ಕಳೆದು ಬೆಂಗಳೂರಿಗೆ ವಾಪಸ್ ಬಂದ ಮೈಲಾರಿ ಸೀರಿಯಸ್ಸಾಗಿ ಐ.ಎ.ಎಸ್. ಪರೀಕ್ಷೆಗೆ ತಯಾರಿ ನಡೆಸ್ದ. ರಾಜಣ್ಣನವರೂ ಎಂದಿನಂತೆ ಆಸ್ಥೆ ವಹಿಸಿ ಯಾವ ಯಾವ ಪುಸ್ತಕ ಓದಬೇಕು, ಯಾವ ಯಾವ ಗೈಡ್ ಓದಬೇಕು, ಕೇಳಿದ ಪ್ರಶ್ನೆಗಳಿಗೆ ಹೇಗೆ ಉತ್ತರ ಕೊಡಬೇಕು, ... ಹೀಗೆ ಎಲ್ಲಾ ವಿಷಯಗಳ ಬಗ್ಗೆ ಮಾರ್ಗದರ್ಶನ ನೀಡ್ತಾನೇ ಇದ್ದರು.

ಗೈಡುಗಳಲ್ಲಿ ಹೇಳಿರೋ ಹಾಗೆ, ಐ.ಎ.ಎಸ್. ಪರೀಕ್ಷೆಯಂಥ ಉಗ್ರ ಪರೀಕ್ಷೆ ಇಡೀ ಪ್ರಪಂಚದಲ್ಲಿ ಬೇರೆ ಯಾವುದೂ ಇಲ್ಲ, ಅದಕ್ಕೆ ತಯಾರಿ ಮಾಡ್ಕೊಳ್ಳೋರು ಸರ್ವಜ್ಞನ ಥರ ಇರಬೇಕು ಅನ್ನೋದನ್ನೆಲ್ಲಾ ಓದಿ ಐ.ಎ.ಎಸ್. ಪರೀಕ್ಷೇನ ಒಂದು ಸವಾಲೆಂದೇ ಪರಿಗಣಿಸಿದ ಮೈಲಾರಿ.

ಐ.ಎ.ಎಸ್. ಅಧಿಕಾರಿಗಳು ಅಂದರೆ ಸರ್ಕಾರಗಳ ನೀತಿ ನಿರೂಪಕರು, ಆಡಳಿತ ಎಲ್ಲ ಅವರ ಕೈಯಲ್ಲಿರುತ್ತೆ, ಮುಖ್ಯಮಂತ್ರಿಯಿಂದ ಹಿಡಿದು ಎಲ್ಲ ಸಚಿವರೂ ಅವರಿಗೆ ಡೊಗ್ಗು ಸಲಾಂ ಹಾಕ್ತಾರೆ, ಎಂದೆಲ್ಲಾ ತಿಳಿದವರು ಆಡಿಕೊಳ್ಳುತ್ತಾ ಇದ್ದದ್ದು ಅವನ ಕಿವಿಗೆ ಬಿದ್ದಿತ್ತು. ಖಗೋಳ ಜ್ಞಾನ, ಭೂ ವಿಜ್ಞಾನ, ಇತಿಹಾಸ, ತತ್ವಶಾಸ್ತ್ರ ... ಇನ್ನೂ ಯಾವುಯಾವುದೋ ಜ್ಞಾನಗಳ ಬಗ್ಗೆ ತಿಳಿದುಕೊಳ್ಳೋದೇ ಅಲ್ಲದೆ ಸಾಮಾನ್ಯ ಜ್ಞಾನದ ಬಗ್ಗೇನೂ ಚೆನ್ನಾಗಿ ಓದಿ ಅರಗಿಸಿಕೊಂಡ. ಗೆಳೆಯ ಶೇಖರ್, "ಮೈಲಾರಿ ನೀನು ಇಷ್ಟೆಲ್ಲಾ ಓದೋದು ನೋಡಿದರೆ ಖುಷಿ ಆಗುತ್ತೆ. ಓದು, ಬೇಡ ಅನ್ನಲ್ಲ. ನಾನೊಂದು ಸಣ್ಣ ಪುಸ್ತಕ ಕೊಡ್ತೀನಿ. ಇಂಟರ್‌ವ್ಯೂನಲ್ಲಿ ಅವರು ಕೇಳೋ ಪ್ರಶ್ನೆಗಳಲ್ಲಿ ಅಥವಾ ವಿಷಯಗಳಲ್ಲಿ ನಿನಗೆ ನಂಬಿಕೆ, ಇರಲಿ




ಅಡುಗೆಮನೆಯೊಳಗಿನ ಅಧಿಕಾರ ಇನ್ನು ನಿಮಗೇ ಖಾಯಂ, ಚೆನ್ನಾಗಿ ಮಾಡ್ರೀ..ಟಾಟಾ..ಬೈಬೈ!

ಬಿಡಲಿ, ಆದರೆ ಅವುಗಳಿಗೆ ಹೇಗೆ ಉತ್ತರ ಕೊಡಬೇಕು ಅನ್ನೋ ತಂತ್ರಾನೂ ಇದರಲ್ಲಿದೆ. ತಗೋ" ಎನ್ನುತ್ತಾ ಒಂದು ಕಿರುಹೊತ್ತಿಗೇನ ಅವನ ಕೈಯಲ್ಲಿಟ್ಟ.

ಪರೀಕ್ಷೇನೂ ಬಂದೇ ಬಿಡ್ತು. ಮೈಲಾರಿ ಪಾಸೂ ಆಗಿದ್ದ. ಕೆಂಚಪ್ಪನವರು ಮಗ ವಿಧಾನಸೌಧದ ಯಾವುದಾದರೊಂದು ಇಲಾಖೆಯ ಮುಖ್ಯಸ್ಥನಾಗಿ ಕಂಗೊಳಿಸುವ ದಿನಗಳ ಕುರಿತು ಕನಸು ಕಾಣ ತೊಡಗಿದರು. ಪರೀಕ್ಷೆಯಲ್ಲಿ ಯಶಸ್ವಿಯಾಗೋದೇನೋ ಸರಿಯೆ, ಆದರೆ ಅಂತಿಮವಾಗಿ ಆಯ್ಕೆಯಾಗ ಬೇಕಾದ್ದು ಇಂಟರ್‌ವ್ಯೂನಲ್ಲಿ. ಅದಕ್ಕೆ ಸರಿಯಾಗಿ ಮೈಲಾರಿಯ ತಯಾರೀನೂ ಬಿರುಸಾಗೇ ಸಾಗಿತ್ತು.

ಆ ಮಹತ್ವದ ದಿನಾನೂ ಬಂದೇ ಬಿಟ್ಟಿತು. ಮೈಲಾರಿಗೆ ಬೆನ್ನು ತಟ್ಟಿ ಆಶೀರ್ವದಿಸಿದ್ದರು ರಾಜಣ್ಣ. ಗೈಡ್ ಪುಸ್ತಕಗಳಲ್ಲಿ ತಿಳಿಸಿದಂತೆ ನಮ್ಮ ಮೈಲಾರಿ ಜರ್ಬಾಗಿ ಸೂಟು ಬೂಟು ಹಾಕ್ಕೊಂಡು ಇಂಟರ್‌ವ್ಯೂ ಹಾಲ್‌ನಲ್ಲಿ ಹಾಜರಾದ. ಅವನ ಸರದಿ ಬಂದಾಗ ಮಧ್ಯಾಹ್ನ ೪ ಗಂಟೆ. "ಮೈಲಾರಪ್ಪ, ಮೈಲಾರಪ್ಪ" ಅಂತ ಕರೆದಾಗ ಸಂದರ್ಶಕರ ಭವ್ಯ ಕೊಠಡಿಯೊಳಗೆ ಇಣುಕಿ ಹಾಕಿ, "ಮೇ ಐ ಕಮ್ ಇನ್, ಸರ್" ಎಂದು ವಿನಯದಿಂದ ಸೊಂಟ ಬಗ್ಗಿಸಿ ಕೇಳಿದ. "ಪ್ಲೀಸ್ ಕಮ್ ಇನ್. ಯು ಆರ್ ವೆಲ್‌ಕಮ್. ಟೇಕ್ ಯುವರ್ ಸೀಟ್" ಎಂದರು ಮೂರು ಜನ ಸಂದರ್ಶಕರಲ್ಲಿ ಮಧ್ಯೆ ಕೂತಿದ್ದವರು. ಅವರು ಆರೆಸ್ಸೆಸ್ಸಿನ ಮುಖ್ಯಸ್ಥ ಥೇಟ್ ಮೋಹನ್ ಭಾಗವತ್ ಥರಾನೇ ಕಾಣಿಸ್ತಾ ಇದ್ದರು. ಅವರ ಹಣೆ ಮೇಲಿದ್ದ ಕಪ್ಪು ನಾಮ, ಅಗಲವಾದ ಕುಂಕುಮದ ಬೊಟ್ಟು ಇದ್ದದ್ದನ್ನು ಗಮನಿಸಿದರೂ ಗಮನಿಸದೆ ಇರುವವನಂತೆ ನಟಿಸಿದ ಮೈಲಾರಿ. ಥಟ್ಟನೆ ಅವನಿಗೆ ಗೆಳೆಯ ಶೇಖರ್ ಹೇಳಿದ್ದ ಕಿವಿಮಾತು ನೆನಪಿಗೆ ಬಂತು.'

"Now shall we start" ಅಂತ ಕೇಳಿದರು ಆ ಅಧಿಕಾರಿ. ಮೈಲಾರಿ, "ಎಸ್ ಸರ್. ಐ ಆ್ಯಮ್ ರೆಡಿ" ಎಂದ.

"ನೋಡಿ ಮಿಸ್ಟರ್ ಮೈಲಾರಪ್ಪ, ನಾವು ಕೇಳೋ ಪ್ರಶ್ನೆಗಳಿಗೆ ಸಾವಧಾನದಿಂದ ಉತ್ತರ ನೀಡಿ. Wish you all the best."

"ಥ್ಯಾಂಕ್ಯೂ ಸರ್."

ರಾಷ್ಟ್ರೀಯ, ಅಂತರರಾಷ್ಟ್ರೀಯ ವಿಷಯಗಳ ಬಗ್ಗೆ ಪ್ರಶ್ನೋತ್ತರಗಳು ಮುಗಿದ ನಂತರ, ಮಧ್ಯದಲ್ಲಿ ಕೂತಿದ್ದ, ಮೋಹನ್ ಭಾಗವತರನ್ನೇ ಹೋಲುತ್ತಿದ್ದ ಸಂದರ್ಶಕರು,

"Now, finally, I will come to a few important issues. ಇದುವರೆಗೂ ನೀವು ನೀಡಿರೋ ಉತ್ತರಗಳು ಸಮಾಧಾನಕರವಾಗೇನೋ ಇವೆ. ಆದರೆ ಈಗ ಕೇಳೋ ಪ್ರಶ್ನೆಗಳು ನಿಮ್ಮ ಭವಿಷ್ಯಾನ ನಿರ್ಧರಿಸುವಂಥವು. ಆದ್ದರಿಂದ ನಿಧಾನವಾಗಿ ಯೋಚಿಸಿ ಉತ್ತರಿಸಿ. ಏನು ?" ಅಂದರು.

ತಾನು ತಯಾರಾಗಿದ್ದೀನಿ ಎಂಬಂತೆ ಅವರ ಕಡೆ ನೋಡಿದ ಮೈಲಾರಿ.

"ನಿಮ್ಮ ಕಲ್ಪನೆಯಲ್ಲಿ ಭಾರತದ ಮುಂದಿನ ಗುರಿ ಏನಾಗಿರಬೇಕು ?"

"ಭಾರತ ಹಿಂದೂ ರಾಷ್ಟ್ರವಾಗಬೇಕು, ಸರ್, ಅಂದರೆ ಇತರ ಎಲ್ಲ ಕೋಮಿನವರೂ ಹಿಂದೂಗಳಾಗಿ ಮತಾಂತರ ಹೊಂದಬೇಕು."

"Now, which is the seventh wonder in the world ? where is it ?"

"ಹೂಂ... ಹೂಂ... ಸರ್, ಅದು ತಾಜಮಹಲ್, ಆಗ್ರಾದಲ್ಲಿದೆ. ಆದರೆ ಇತಿಹಾಸದ ಪುಟಗಳನ್ನು ತಿರುವಿಹಾಕಿ ನೋಡಿದರೆ ಅದು ಒಂದು ಶಿವನ ದೇವಾಲಯ ಆಗಿತ್ತು. ಶಹಜಹಾನ್ ಅದನ್ನು ಕೆಡವಿ, ತನ್ನ ತೆವಲು ತೀರಿಸಿಕೊಳ್ಳೋದಕ್ಕೆ ತಾಜಮಹಲನ್ನು ಕಟ್ಟಿಸಿದ. ಹೀಗೆ ಆ ಹಾಳು ಮುಸ್ಲಿಮರು ನಮ್ಮ ಎಷ್ಟೋ ಪುರಾತನ ದೇವಾಲಯಗಳನ್ನು ನಾಶಮಾಡಿದ್ದಾರೆ. ಅದನ್ನ ನೆನಪಿಸಿಕೊಂಡರೆ ಈಗಲೂ ರಕ್ತ ಕುದಿಯುತ್ತೆ."

"ಗುಡ್ ! ನಿಮ್ಮನ್ನೇನಾದರೂ ಶಿಕ್ಷಣ ಇಲಾಖೆಯ ಮುಖ್ಯಸ್ಥನನ್ನಾಗಿ ನೇಮಿಸಿದರೆ ನೀವು ಏನೇನು ಕಾರ್ಯಕ್ರಮಗಳನ್ನು ಕೈಗೊಳ್ಳುತ್ತೀರಿ ? ನಿಮ್ಮ ಆದ್ಯತೆಗಳೇನು ?"

"ಸರ್, ನಾನು ಮೊಟ್ಟಮೊದಲು ಮಾಡೋ ಕೆಲ್ಸ ಅಂದರೆ ಸಂಸ್ಕೃತ ಮಾಧ್ಯಮ, ವೇದ–ಉಪನಿಷತ್ತುಗಳ ಅಧ್ಯಯನ, ಭಗವದ್ಗೀತೆಯ ಅಧ್ಯಯನ ಮತ್ತು ಗಾಯತ್ರಿ ಮಂತ್ರದ ಪಠನ, ಇವನ್ನೆಲ್ಲಾ ಹೈಸ್ಕೂಲ್ ಮಟ್ಟದಿಂದಲೇ ಕಡ್ಡಾಯಗೊಳಿಸೋದು. ಅಲ್ಲದೆ ನಮ್ಮ ಭವ್ಯ ಹಿಂದೂ ಸಂಸ್ಕೃತಿಯನ್ನು ಪರಿಚಯಿಸುವಂತಹ ಮತ್ತು ಮುಸ್ಲಿಂ ಆಕ್ರಮಣಕಾರರು ನಡೆಸಿರೋ ಎಲ್ಲ ದುಷ್ಕೃತ್ಯಗಳನ್ನು ಬಯಲುಗೊಳಿಸುವಂತಹ ಪಠ್ಯಗಳನ್ನು ಹೆಸರಾಂತ ಹಿಂದೂ ಪಂಡಿತರಿಂದ ಬರೆಯಿಸ್ತೇನೆ. ಮನುವಿನ ಬಗ್ಗೆ, ನಮ್ಮ ವರ್ಣವ್ಯವಸ್ಥೆಯ ಬಗ್ಗೆ ವಿಶೇಷ ಅಧ್ಯಯನ ಮಾಡಲು ಬಯಸುವವರಿಗೆ ಅನುಕೂಲ ವಾಗುವಂತಹ ಯೋಜನೆಯನ್ನು ರೂಪಿಸ್ತೇನೆ."

“ನಾಟ್ ಬ್ಯಾಡ್. ಇರಲಿ, ನಿಮ್ಮ ಪ್ರಕಾರ ನಮ್ಮ ದೇಶದ ನಿಜವಾದ ಹೀರೋ ಯಾರು ? ಯಾವ ಕಾರಣಕ್ಕೆ ?”

“ಉತ್ತರ ಸಿಂಪಲ್ಲು ಸರ್, ಅದು ನಮ್ಮ ಪರಮ ಪೂಜ್ಯ ನಾಥೂರಾಮ್ ಗೋಡ್ಸೆಯವರು. ದೇಶದ ವಿಭಜನೆಗೆ ಕಾರಣರಾದ ಮಹಾತ್ಮ... ಅಲ್ಲ, ಅಲ್ಲ... ಸಾರಿ, ಆ ಮುದುಕ ಗಾಂಧಿಯನ್ನು ಗುಂಡಿಟ್ಟು ಕೊಂದು ಭಾರತದ ಭವ್ಯ ಭವಿಷತ್ತಿಗೆ ನಾಂದಿ ಹಾಡಿದೋರು ಅವರು.”

ಎಲಾ, ಪರವಾಗಿಲ್ವೇ ! ಅಂತ ಮನಸ್ಸಿನಲ್ಲೇ ಅಂದು ಕೊಂಡು ಸಂದರ್ಶಕರು ಕೇಳಿದ ಪ್ರಶ್ನೆ ಹೀಗಿತ್ತು :

“ನೋಡಿ, ಸ್ವಾತಂತ್ರ್ಯಾನಂತರ ನಾವು ಕಂಡ ಅತ್ಯಂತ ಪ್ರಭಾವಿ ಪ್ರಧಾನ ಮಂತ್ರಿ ಯಾರು ?”

“ಅಟಲ್ ಬಿಹಾರಿ ವಾಜಪೇಯಿಯವರು. ಯಾಕೆಂದರೆ ಬಾಬರಿ ಮಸೀದಿ ಧ್ವಂಸ ಆದ ಸಮಯದಲ್ಲಿ ಯಾವುದೇ ಪ್ರತಿಕ್ರಿಯೆ ನೀಡದೆ ತಮ್ಮ ಸ್ಟೇಟ್ಸ್‌ಮನ್‌ಶಿಪ್ ಮೆರೆದರು. ಪಾಕಿಸ್ತಾನಕ್ಕೆ ಬಸ್‌ನಲ್ಲಿ ಹೋಗಿಬಂದರು. “ಕ್ವಿಟ್ ಇಂಡಿಯಾ” ಚಳುವಳಿ ಸಂದರ್ಭದಲ್ಲಿ ಅವರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುವುದಿಲ್ಲ ಎಂದು ಬ್ರಿಟಿಷರಿಗೆ ಮುಚ್ಚಳಿಕೆ ಪತ್ರ ಬರೆದುಕೊಟ್ಟರು ಅಂತ ಅವರ ವಿರುದ್ಧ ಕೆಲವು ದೇಶದ್ರೋಹಿಗಳು ಸುಳ್ಳು ಸುಳ್ಳು ಪ್ರಚಾರ ಮಾಡ್ತಾರೆ, ಅಷ್ಟೆ. ಗಾಂಧಿ, ನೆಹರು, ಪಟೇಲ್, ಭಗತ್‌ಸಿಂಗ್, ಸುಭಾಶ್‌ಚಂದ್ರ ಬೋಸ್ ಇವರ್‍ಯಾರೂ ಅವರ ಸಮಾನ ಇಲ್ಲ. ೨೦೦೨ರಲ್ಲಿ ಗುಜರಾತ್‌ನಲ್ಲಿ ಕೋಮುಗಲಭೆ ನಡೆದಾಗ ಆಗಿನ ಮುಖ್ಯಮಂತ್ರಿ ಮಾನ್ಯ ನರೇಂದ್ರ ಮೋದಿಯವರಿಗೆ “ರಾಜಧರ್ಮ” ಪಾಲಿಸು ಅಂತ ಸೂಚಿಸಿ ತಾವು ಎಂತಹ ಉತ್ತಮ ರಾಜತಂತ್ರಜ್ಞ ಅನ್ನುವುದನ್ನು ತಿಳಿಸಿಕೊಟ್ರು.”

“ಅವರ ನಂತರ ?”

“ಅದು ನಿಸ್ಸಂದೇಹವಾಗಿ ನರೇಂದ್ರ ಮೋದಿಯವರು, ಸರ್. ಅವರು ಭಾರತದ ಸರ್ವಾಂಗೀಣ ಅಭಿವೃದ್ಧಿ ಸಾಧಿಸೋದಕ್ಕೆ ಕಂಕಣಬದ್ಧರಾಗಿದ್ದಾರೆ. ಅವರ ಅಭಿವೃದ್ಧಿ ಅಜೆಂಡಾ ೨೦೦೨ರಲ್ಲಿ ಗುಜರಾತ್‌ನಲ್ಲಿ ನಡೆದ ಘಟನೆಗಳಿಂದಾನೇ ಪ್ರಾರಂಭ ಆಯಿತು. ಅದು ಈಗಲೂ ಒಂದಲ್ಲ ಒಂದು ರೀತಿಯಲ್ಲಿ ಮುಂದುವರೀತಾನೆ ಇರೋದು ಸಂತೋಷದ ವಿಷಯ. ಘರ್ ವಾಪ್ಸಿ , ಲವ್ ಜಿಹಾದ್... ಇಂಥವೆಲ್ಲಾ ಅದರ ಭಾಗಾನೇ ಸರ್. ‘ಮೇಕ್ ಇನ್ ಇಂಡಿಯಾ’ ಯೋಜನೆ ನಮ್ಮ ಭಾರತಾನ ಇಡೀ ಪ್ರಪಂಚದಲ್ಲೇ ನಂ. ೧ ದೇಶವನ್ನಾಗಿ ಮಾಡೋದರಲ್ಲಿ ಸಂದೇಹವೇ ಇಲ್ಲ. ಯಾಕೇಂದ್ರೆ, ಅದರ ಮೂಲಕ ವಿದೇಶಿ – ಬಂಡವಳಿಗರು, ಕಾರ್ಪೊರೇಟುಗಳು ನಮ್ಮ ಆರ್ಥಿಕ ವ್ಯವಸ್ಥೆಯ ಭಾಗವಾಗಿಬಿಡ್ತಾರೆ. ಆ ಮೂಲಕ ನಮ್ಮ ಆಡಳಿತ ವ್ಯವಸ್ಥೆಯ ಭಾಗಾನೂ ಆಗಿಬಿಡ್ತಾರೆ.”

“ಓಕೆ. ಈಗ ನಮ್ಮ ದೇಶದ ಆರ್ಥಿಕತೆಯ ಬೆನ್ನೆಲುಬಾಗಿರೋರು ಯಾರು ? ನಮ್ಮ ಆರ್ಥಿಕತೆ ಇನ್ನೂ ಹೆಚ್ಚು ಬಲವಾಗಲು ಏನು ಮಾಡಬೇಕು ?”

“ಸರ್, ನಮ್ಮ ಆರ್ಥಿಕತೆಯ ಬೆನ್ನೆಲುಬಾಗಿರೋರು ಅದಾನಿ, ಅಂಬಾನಿ, ಟಾಟಾ, ರಿಲಯನ್ಸ್ ಮುಂತಾದವರು. ಇವರೆಲ್ಲಾ ವಿದೇಶೀ ಬಂಡವಳಿಗರೊಡನೆ ಸೇರ್‍ಕೊಂಡು ನಮ್ಮ ಭಾರತಾನ ಸ್ವರ್ಗ ಮಾಡಿಬಿಡ್ತಾರೆ. ಮತ್ತು ನಮ್ಮ ಆರ್ಥಿಕ ವ್ಯವಸ್ಥೆ ಬಲಗೊಳ್ಳಬೇಕಾದರೆ ಬ್ಯಾಂಕುಗಳು, ವಿಮೆ, ರೈಲ್ವೆ, ಅಂಚೆ ಇಲಾಖೆಗಳು, ಎಲ್ಲವನ್ನೂ ಖಾಸಗೀಕರಣಗೊಳಿಸಲೇಬೇಕು, ಸರ್.”

## ಅಭಿನಂದನೆ

ಕರ್ನಾಟಕ ಸರ್ಕಾರವು ಪ್ರತಿ ವರ್ಷ ಕೊಡಮಾಡುವ ಪಂಪ ಪ್ರಶಸ್ತಿಯು 2015ನೇ ಸಾಲಿನಲ್ಲಿ ಸಾಹಿತಿ ಶ್ರೀ ಬಿ. ಎ. ಸನದಿಯವರಿಗೆ ಹಾಗೂ ‘ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ’ಯು ಶ್ರೀಮತಿ ನೇಮಿಚಂದ್ರ ಅವರಿಗೆ ಲಭಿಸಿದೆ. ಇವರಿಬ್ಬರಿಗೂ ‘ನವಕರ್ನಾಟಕ’ ಹಾಗೂ ‘ಹೊಸತು’ ಬಳಗದ ಹಾರ್ದಿಕ ಅಭಿನಂದನೆಗಳು.

ಒಂದು ಗುಟುಕು ನೀರು ಕುಡಿದು ಒಮ್ಮೆ ತಮ್ಮ ವಾಚ್ ನೋಡಿಕೊಂಡ ಸಂದರ್ಶಕರು,

“ನೀವು ಸ್ವಲ್ಪ ಚೆನ್ನಾಗಿ ಓದಿಕೊಂಡಿರೋ ಹಾಗೆ ಕಾಣುತ್ತೆ. ಈಗ ಹೇಳಿ, ದೇಶಭಕ್ತಿ ಅಂದರೆ ಏನು ?”

“ಸರ್, ದೇಶಭಕ್ತಿ ಅಂದರೆ ಪಾಕಿಸ್ತಾನವನ್ನು ದ್ವೇಷಿಸೋದು. ಭಾರತ–ಪಾಕಿಸ್ತಾನಗಳ ನಡುವೆ ಕ್ರಿಕೆಟ್ ಮ್ಯಾಚ್ ನಡೆದರೆ ನಮ್ಮ ಟೀಮ್ ಗೆಲ್ಲಲಿ ಅಂತ ಶ್ರೀರಾಮನಿಗೆ ಹರಕೆ ಹೊತ್ಕೊಳೋದು. ಮುಸ್ಲಿಮರು, ಕ್ರೈಸ್ತರು ಮತ್ತು ಕಮ್ಯುನಿಸ್ಟರನ್ನು ನಿರ್ನಾಮ ಮಾಡೋದು.”

“ದೇಶದ್ರೋಹ ಅಂದರೆ ?”

“ಅಂಬೇಡ್ಕರ್ ವಿರಚಿತ ನಮ್ಮ ಸಂವಿಧಾನವೇ ಸರ್ವಶ್ರೇಷ್ಠ, ಧರ್ಮನಿರಪೇಕ್ಷತೆ / ಜಾತ್ಯತೀತತೆ, ಕೋಮುಸಾಮರಸ್ಯ ಇವುಗಳಿಂದ ನಾವು ಪ್ರಗತಿ ಸಾಧಿಸಲು ಸಾಧ್ಯ ಅಂತ ಡಂಗೂರ ಹೊಡೆಯೋದು. ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ ನೀತಿಗಳನ್ನು ವಿರೋಧಿಸೋದು.”

“ಭೇಷ್ ! ಜಾಗತಿಕ ಇತಿಹಾಸದಲ್ಲಿ ನಿಮ್ಮನ್ನು ಹೆಚ್ಚಾಗಿ ಪ್ರಭಾವಿಸಿದ ವ್ಯಕ್ತಿ ಮತ್ತು ಸಿದ್ಧಾಂತ ಯಾರು ? ಯಾವುದು ?”

“ಸರ್, ನಿಸ್ಸಂದೇಹವಾಗಿ ಹೇಳ್ತೀನಿ. ಅದು ಹಿಟ್ಲರ್ ಮಹಾಶಯ ಮತ್ತು ಫ್ಯಾಸಿಸಂ.”

ಇಕ್ಕೆಡೆಗಳಲ್ಲಿ ಕುಳಿತಿದ್ದ ಇನ್ನಿಬ್ಬರು ಸಂದರ್ಶಕರತ್ತ ಒಮ್ಮೆ ಕಣ್ಣು ಹಾಯಿಸಿ, ಗಂಟಲು ಸರಿಮಾಡಿಕೊಂಡು, ಮೋಹನ್ ಭಾಗವತರನ್ನು ಹೋಲುತ್ತಿದ್ದ ಆ ಸಂದರ್ಶಕರು,

“ಮಿಸ್ಟರ್ ಮೈಲಾರಪ್ಪ, ಇದ್ದದ್ದನ್ನ ಇದ್ದ ಹಾಗೆ ಹೇಳಿಬಿಟ್ಟಿದ್ದೀರಿ. ಈಗಾಗಲೇ ಬೆಳಿಗ್ಗೆಯಿಂದ ಹೆಚ್ಚು ಕಡಿಮೆ ಒಂದಿಪ್ಪತ್ತು ಅಭ್ಯರ್ಥಿಗಳನ್ನು ಇಂಟರ್‌ವ್ಯೂ ಮಾಡಿದೀವಿ. ಆದರೆ ನಿಮ್ಮಷ್ಟು ನಿಖರವಾಗಿ ಯಾರೂ ಉತ್ತರ ಕೊಡ್ಲಿಲ್ಲ. ನಮಗೆ ನಿಜಕ್ಕೂ ಸಂತೋಷ ಆಗಿದೆ. ಈ ದೇಶದ ಭವಿಷ್ಯ ನಿಮ್ಮ ಹಾಗೆ ಅಭಿಪ್ರಾಯಪಡೋರ ಕೈಯಲ್ಲಿದೆ. I am glad to inform you that you are selected. Orders will be sent in a few days ಎನ್ನುತ್ತ ಬೆವರಿನಿಂದ ಮಾಸಿ ಹೋಗುತ್ತಿದ್ದ ತಮ್ಮ ಹಣೆಯ ಮೇಲಿನ ನಾಮಾ, ಕುಂಕುಮಾನ ಸ್ವಲ್ಪ ಟ್ರಿಮ್ ಮಾಡಿಕೊಂಡು ಮೇಲೆದ್ದರು. ಅಲ್ಲಿಗೆ ಮುಗಿದಿತ್ತು ಇಂಟರ್‌ವ್ಯೂ.

ಥಕಥೈ ಥಕಥೈ ಎಂದು ಕುಣಿಲೋ ಬೇಡವೋ ಎಂಬ ದ್ವಂದ್ವಕ್ಕೆ ಸಿಕ್ಕಿಹಾಕಿಕೊಂಡ ಮೈಲಾರಿ ಇಂಟರ್‌ವ್ಯೂ ಹಾಲ್‌ನಿಂದ ಹೊರಬಿದ್ದಾಗ ಸೂರ್ಯ ಇನ್ನೇನು ಮುಳುಗೋದರಲ್ಲಿದ್ದ. ಮಳೆ ಬೇರೆ ಬರೋ ಹಾಗಿತ್ತು. ಶೇಖರ್ ಆಚೆ ಕಾಯ್ತಾ ನಿಂತಿದ್ದ. ಮೈಲಾರಿಯ ಮುಖಚರ್ಯೆಯನ್ನು ನೋಡಿದ ಕೂಡಲೇ ಏನಾಗಿರಬಹುದು ಅನ್ನೋದನ್ನು ಊಹಿಸಿದ ಕಿಲಾಡಿ ಶೇಖರ್ ಕಣ್ಣು ಮಿಟುಕಿಸ್ತಾ “ಕಂಗ್ರಾಟ್ಸ್ ಕಣೋ” ಎನ್ನಬೇಕೆ !

ಮುಂದುವರಿಸಿ, “ನಿನ್ನ ಸಾಧನೆ ಸಾಮಾನ್ಯ ಅಲ್ಲ ಮೈಲಾರಿ. ಅಂದ ಹಾಗೆ ನಾನು ನಿನಗೆ ಒಂದು ತಿಂಗಳ ಹಿಂದೆ ಕೊಟ್ಟ ಆ ಕಿರುಹೊತ್ತಿಗೇನ ಕೊಡೋ. ಬೇರೆ ಯಾರಿಗಾದರೂ ಐ.ಎ.ಎಸ್ ಅಭ್ಯರ್ಥಿಗಳಿಗೆ ಉಪಯೋಗ ಆಗತ್ತೆ” ಎನ್ನುತ್ತ ಕೈ ಚಾಚಿದ.

ಮೈಲಾರಿ ಮುಖದಿಂದ ಸಂತೃಪ್ತಿಯ ಭಾವ ಚಿಮ್ತಾ ಇತ್ತು. ಹಿಮಾಲಯದ ಶಿಖರದ ಮೇಲೆ ಭಾರತದ ಬಾವುಟ ಹಾರಿಸಿದ ಭಾವನೆ.

“ಶೇಖರ್, ನಿನ್ನ ಋಣಾನ ಹೇಗೆ ತೀರಿಸೋದು ಅಂತ ನನಗೆ ಗೊತ್ತಾಗ್ತಾನೇ ಇಲ್ಲ. ನಿಜವಾಗಲೂ ಹೇಳ್ತೀನಿ ಕೇಳು. ರಾಶಿ ರಾಶಿ ಪುಸ್ತಕಗಳನ್ನೇನೋ ಓದಿದೆ, ನಿಜ. ಅದರಿಂದ ನನಗೆ ಸಹಾಯನೂ ಆಯಿತು. ಆದರೆ... ಆದರೆ ನಾನು ಇಂಟರ್‌ವ್ಯೂನಲ್ಲಿ ಪಾಸಾಗೋದಕ್ಕೆ ಮುಖ್ಯ ಕಾರಣ ನೀನು ಕೊಟ್ಟ ಈ ಚಿಕ್ಕ ಪುಸ್ತಕ ಕಣೋ” ಎನ್ನುತ್ತ ಅದನ್ನು ಶೇಖರ್ ಕೈಗಿತ್ತ ಮೈಲಾರಿ.

ಅಂದಹಾಗೆ ಆ ಕಿರುಹೊತ್ತಿಗೆಯ ಶೀರ್ಷಿಕೆ ಹೀಗಿತ್ತು :

**‘ಸುಳ್ಳು ಚೆನ್ನಾಗಿ ಹೇಳಿ ಸಂದರ್ಶನಗಳಲ್ಲಿ ಯಶಸ್ವಿಯಾಗುವುದೆಂತು ?’**

ಲೇಖಕ : ದೇಶಭಕ್ತ



**ಎಸ್. ಸುರೇಂದ್ರ**
ನಂ. ೨೪, ೧ನೇ ಅಡ್ಡರಸ್ತೆ, ಕೆನರಾ ಬ್ಯಾಂಕ್ ಕಾಲನಿ
ಜಯನಗರ ಪೂರ್ವ, ಬೆಂಗಳೂರು – ೫೬೦ ೦೧೧

# ಕರ್ನಾಟಕದಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳ ಮುಂದಿರುವ ಇಂದಿನ ಸವಾಲುಗಳು ಮತ್ತು ಸಮಸ್ಯೆಗಳು

ಡಾ|| ಟಿ. ಆರ್. ಚಂದ್ರಶೇಖರ

**ಪ್ರಸ್ತಾವನೆ**

ಕರ್ನಾಟಕದಲ್ಲಿ ಮೂವತ್ತು ಜಿಲ್ಲಾ ಪಂಚಾಯತಿಗಳು ಮತ್ತು ನೂರಾ ಎಪ್ಪತ್ತಾರು ತಾಲ್ಲೂಕು ಪಂಚಾಯತಿಗಳಿಗೆ ೨೦೧೬ರ ಚುನಾವಣೆ ಮುಗಿದಿದೆ. ಅವುಗಳ ಅಧ್ಯಕ್ಷರು ಮತ್ತು ಉಪಾಧ್ಯಕ್ಷರುಗಳ ಮೀಸಲಾತಿ ವಿವರವೂ ಪ್ರಕಟವಾಗಿದೆ. ಅಧಿಕಾರದ ಚುಕ್ಕಾಣಿ ಹಿಡಿಯಲು ಚುನಾವಣೆಯಲ್ಲಿ ಜಯಗಳಿಸಿದ ಜನಪ್ರತಿನಿಧಿಗಳು ಸಿದ್ಧರಾಗಿದ್ದಾರೆ. ಶ್ರೀ ಕೆ. ಆರ್. ರಮೇಶ್ ಕುಮಾರ್ ಅಧ್ಯಕ್ಷತೆಯಲ್ಲಿನ ಕರ್ನಾಟಕ ಪಂಚಾಯತ್ ರಾಜ್ ಕಾಯಿದೆ ತಿದ್ದುಪಡಿ ಸಮಿತಿಯು ಕರ್ನಾಟಕ ಪಂಚಾಯತ್ ಕಾಯಿದೆ ೧೯೯೩ಕ್ಕೆ ಅನೇಕ ಕ್ರಾಂತಿಕಾರಿ ತಿದ್ದುಪಡಿಗಳ ಶಿಫಾರಸ್ಸುಗಳನ್ನೊಳಗೊಂಡ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ. ಸಮಿತಿಯ ಅನೇಕ ಶಿಫಾರಸ್ಸುಗಳನ್ನು ಒಪ್ಪಿಕೊಂಡಿರುವ ಸರ್ಕಾರ ಅವುಗಳನ್ನು ಅನುಷ್ಠಾನ ಗೊಳಿಸಿದೆ. ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಅಧಿಕಾರಾವಧಿಯನ್ನು ಐದು ವರ್ಷ ಮಾಡಲಾಗಿದೆ. ತಿದ್ದುಪಡಿ ಸಮಿತಿಯು 'ಪಂಚಾಯತ್ ರಾಜ್' ಎಂಬ ಹೆಸರಿಗೆ ಪ್ರತಿಯಾಗಿ ಇದನ್ನು 'ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್' ಎಂದು ಬದಲಾಯಿಸಿದೆ. ಈ ಸಮಿತಿಯ ಒಂದು ಶಿಫಾರಸ್ಸಿನಂತೆ ಸರ್ಕಾರವು 'ಕರ್ನಾಟಕ ರಾಜ್ಯ ವಿಕೇಂದ್ರೀಕರಣ ಯೋಜನೆ ಮತ್ತು ಅಭಿವೃದ್ಧಿ ಸಮಿತಿ'ಯನ್ನು ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ರಚಿಸಬೇಕು. ಇದು ಈಗಿರುವ ಕರ್ನಾಟಕ ರಾಜ್ಯ ಯೋಜನಾ ಮಂಡಳಿಯಂತೆ ಕೆಲಸ ಮಾಡುತ್ತದೆ. ಜಿಲ್ಲಾ ಮಟ್ಟದಲ್ಲಿ ಈಗಾಗಲೆ ಸಂವಿಧಾನಾತ್ಮಕ 'ಜಿಲ್ಲಾ ಯೋಜನಾ ಸಮಿತಿ'ಗಳು ಕೆಲಸ ಮಾಡುತ್ತಿವೆ. ಇದರ ಜೊತೆಯಲ್ಲಿ ಈಗ 'ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಸಮಿತಿ' ಅಸ್ತಿತ್ವಕ್ಕೆ ಬರುತ್ತದೆ. ಒಟ್ಟಾರೆ ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳು ಗ್ರಾಮೀಣ ಪ್ರದೇಶದ ಅಭಿವೃದ್ಧಿ ಸಂಸ್ಥೆಗಳಾಗಿ ಕೆಲಸ ಮಾಡಬೇಕಾಗುತ್ತದೆ. ಈಗ ಹೊಸದಾಗಿ ಅಧಿಕಾರಕ್ಕೆ ಬರುವ ಪಂಚಾಯತ್ ಜನಪ್ರತಿನಿಧಿಗಳ ಜವಾಬುದಾರಿ ಹೆಚ್ಚಿದೆ. ಈ ತಿದ್ದುಪಡಿ ಸಮಿತಿಯು ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ವಾರ್ಡ್ ಸಭೆ, ಜನವಸತಿ ಸಭೆ ಮತ್ತು ಗ್ರಾಮಸಭೆ ಗಳನ್ನು ನಡೆಸುವುದನ್ನು ಕಡ್ಡಾಯ ಮಾಡಿದೆ.



ಈ ಹಿನ್ನೆಲೆಯಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳ ಮುಂದೆ ಇಂದು ಇರುವ ಸವಾಲುಗಳಾವುವು ಮತ್ತು ಸಮಸ್ಯೆಗಳಾವುವು ಎಂಬುದನ್ನು ಕುರಿತಂತೆ ಇಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಬಹಳ ಮುಖ್ಯವಾದ ಸಂಗತಿಯೆಂದರೆ ನಮ್ಮ ಸಂವಿಧಾನದ ರಾಜ್ಯ ನಿರ್ದೇಶನ ನೀತಿಯ ತತ್ವಗಳಿರುವ ಭಾಗ ೪ರ ಅನುಚ್ಛೇದ ೪೦ರಲ್ಲಿ ನಿಯಮ ಮಾಡಿರುವಂತೆ ಮತ್ತು ಸಂವಿಧಾನದ ೭೩ನೆಯ ತಿದ್ದುಪಡಿಯಲ್ಲಿ ಅಂತರ್ಗತವಾಗಿರುವಂತೆ ಪಂಚಾಯತ್ ರಾಜ್ ಸಂಸ್ಥೆಗಳು 'ಸ್ವಯಮಾಡಳಿತ ಘಟಕ'ಗಳಾಗಿ ಕೆಲಸ ಮಾಡಬೇಕು. ಈ ಸಂಗತಿಗೆ ಅನೇಕ ರೀತಿಯಲ್ಲಿ ಶಕ್ತಿ ತುಂಬುವ ಕೆಲಸವನ್ನು ಶ್ರೀ ಕೆ. ಆರ್. ರಮೇಶ್ ಕುಮಾರ್ ಸಮಿತಿಯು ಮಾಡಿದೆ. ಈ ಸಮಿತಿಯ ಎಲ್ಲ ಆಶಯಗಳನ್ನು ಅನುಷ್ಠಾನಕ್ಕೆ ತರುವ ಜವಾಬುದಾರಿ ಪಂಚಾಯತ್ ರಾಜ್ ಸಂಸ್ಥೆಗಳ ಮೇಲಿದೆ. ಇಂದು ನಮ್ಮ ಗ್ರಾಮೀಣ ಪ್ರದೇಶದಲ್ಲಿ ಎಳೆ ಹೆಣ್ಣುಮಕ್ಕಳ ಮೇಲೆ ದೌರ್ಜನ್ಯ ನಡೆಯುವುದು ಸಾಮಾನ್ಯವಾಗಿ ಬಿಟ್ಟಿದೆ. ಮಹಿಳೆಯರು ಗ್ರಾಮೀಣ ಪ್ರದೇಶದಲ್ಲಿ ಅತಿಯಾದ ಅಪೌಷ್ಟಿಕತೆಯನ್ನು ಎದುರಿಸುತ್ತಿದ್ದಾರೆ. ಇಂದು ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಶೇ. ೫೦ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡಲಾಗಿದೆ. ಯಾವುದು ಸಂಸತ್ ಮತ್ತು ವಿಧಾನ ಮಂಡಳಗಳಲ್ಲಿ ಸಾಧ್ಯವಾಗಿಲ್ಲವೋ ಅದನ್ನು ನಮ್ಮ ಗ್ರಾಮೀಣ ಕರ್ನಾಟಕ ಸಾಧಿಸಿಕೊಂಡಿದೆ. ಆದರೆ ಶಾಸನಗಳೆ ಎಲ್ಲ ಅಲ್ಲ ತಾನೆ ! ವಾಸ್ತವದಲ್ಲಿ ಏನಾಗಿದೆ ? ಅಭಿವೃದ್ಧಿಯಲ್ಲಿ ಮಹಿಳೆಯರ ಸಹಭಾಗಿತ್ವ ಅನ್ನುವುದು ನಿಜವಾದ ಅರ್ಥದಲ್ಲಿ ಸಾಧ್ಯ ವಾಗಿದೆಯೇ ? ಈ ಎಲ್ಲ ಪ್ರಶ್ನೆಗಳು ನಮ್ಮ ಮುಂದಿವೆ.

ನಮ್ಮ ಗ್ರಾಮೀಣ ಕರ್ನಾಟಕ ಇಂದು ಎದುರಿಸುತ್ತಿರುವ ಬಹು ದೊಡ್ಡ ಸಮಸ್ಯೆ ನೀರಿನ ಅಭಾವ. 'ಅಕ್ಕಿಯ ಅಭಾವದಿಂದ ಜನರು ಸಾಯುವುದಕ್ಕೆ ಪ್ರತಿಯಾಗಿ ಅಕ್ಕಿಯನ್ನು ಬೇಯಿಸಲು ನೀರು

ದೊರೆಯದೆ ಜನರು ಸಾಯುವ ದಿನ ಬರಬಹುದು' ಎಂದು ಪರಿಸರ ತಜ್ಞರು ಆತಂಕ ವ್ಯಕ್ತಪಡಿಸುತ್ತಿದ್ದಾರೆ. ಕುಡಿಯುವ ನೀರು ಮತ್ತು ಕೃಷಿಗೆ ನೀರು – ಎರಡೂ ನೆಲೆಗಳಲ್ಲಿ ಸಮಸ್ಯೆಗಳಿವೆ. ಇದನ್ನು ನಮ್ಮ ಪಂಚಾಯತಿಗಳು ಹೇಗೆ ಎದುರಿಸುತ್ತವೆ ಮತ್ತು ಹೇಗೆ ನಿರ್ವಹಿಸುತ್ತವೆ ?

ಇಂದು ಪಂಚಾಯತ್ ರಾಜ್ ಸಂಸ್ಥೆಗಳಿಗೆ ಸಾಕಷ್ಟು ಅನುದಾನ ಬೇರೆ ಬೇರೆ ಮೂಲಗಳಿಂದ ಹರಿದುಬರುತ್ತದೆ. ಹದಿನಾಲ್ಕನೆಯ ಕೇಂದ್ರ ಹಣಕಾಸು ಆಯೋಗವು ತಾನು ರಾಜ್ಯಗಳಿಗೆ ನೀಡುವ ಅನುದಾನವನ್ನು ನೇರವಾಗಿ ಗ್ರಾಮ ಪಂಚಾಯತಿಗಳಗೆ ನೀಡುವ ಕ್ರಮ ತೆಗೆದುಕೊಂಡಿದೆ. ಕರ್ನಾಟಕದ ಗ್ರಾಮೀಣ ಸ್ಥಳೀಯ ಸಂಸ್ಥೆಗಳಿಗೆ ಅದು ೨೦೧೫ರಿಂದ ೨೦೨೦ರ ಅವಧಿಗೆ ನೀಡುವ ಮೊತ್ತ ರೂ. ೯೨೮೮.೬೬ ಕೋಟಿ. ಈ ಮೊತ್ತವನ್ನು ನೇರವಾಗಿ ಗ್ರಾಮ ಪಂಚಾಯತಿಗಳಿಗೆ ನೀಡಲಾಗುತ್ತದೆ. ಅಂದರೆ ಸರಾಸರಿ ನಮ್ಮ ರಾಜ್ಯದಲ್ಲಿ ಪ್ರತಿ ಗ್ರಾಮ ಪಂಚಾಯತಿಯು ೨೦೧೫ರಿಂದ ೨೦೨೦ರ ಅವಧಿಯಲ್ಲಿ ಪಡೆಯುವ ತಲಾ ಅನುದಾನ ರೂ. ೧.೦೪ ಕೋಟಿ. ಅದು ನಮ್ಮ ೬೦೧೮ ಗ್ರಾಮ ಪಂಚಾಯತಿಗಳಿಗೆ ೨೦೧೬–೨೦೧೭ನೆಯ ಸಾಲಿನಲ್ಲಿ ನೀಡುವ ಅನುದಾನ ರೂ. ೧೫೭೦.೭೭ ಕೋಟಿ. ಅಂದರೆ ೨೦೧೬–೧೭ನೆಯ ಸಾಲಿನಲ್ಲಿ ಕರ್ನಾಟಕದ ಪ್ರತಿ ಗ್ರಾಮ ಪಂಚಾಯತಿಯು ರೂ. ೨೧.೧೦ ಲಕ್ಷ ಅನುದಾನವನ್ನು ಕೇಂದ್ರ ಹಣಕಾಸು ಆಯೋಗದ ಶಿಫಾರಸ್ಸಿಗೆ ಅನುಗುಣವಾಗಿ ಪಡೆಯುತ್ತವೆ. ಇದೇ ರೀತಿಯಲ್ಲಿ ರಾಜ್ಯ ಹಣಕಾಸು ಆಯೋಗದಿಂದಲೂ ಅವು ಅನುದಾನ ಪಡೆಯುತ್ತವೆ. ಸರ್ಕಾರವು ಬಜೆಟ್ಟಿನಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳಿಗೆ ವಾರ್ಷಿಕ ಅನುದಾನ ನೀಡುತ್ತದೆ. ಗ್ರಾಮ ಪಂಚಾಯತಿಗಳಿಗೆ ತಮ್ಮದೇ ತೆರಿಗೆ ಮತ್ತು ತೆರಿಗೆಯೇತರ ಮೂಲಗಳಿಂದ ರೆವಿನ್ಯೂ ಬರುತ್ತವೆ. ಇವೆಲ್ಲವೂ ಸೇರಿದರೆ ಇಂದು ಗ್ರಾಮ ಪಂಚಾಯತಿಗಳಿಗೆ ದೊರೆಯುತ್ತಿರುವ ಅನುದಾನದ ಮೊತ್ತ ಅಪಾರವಾಗಿದೆ. ಆದರೆ ಅವುಗಳ ಹಣಕಾಸು ಸ್ಥಿತಿಯು ಉತ್ತಮಗೊಂಡಂತೆ ಅವುಗಳ ಕಾರ್ಯಕ್ಷಮತೆಯು ಉತ್ತಮವಾಗುತ್ತಿದೆಯೇ ? ಅವು ಸ್ವಯಮಾಡಳಿತ ಘಟಕಗಳಾಗಿ ಕೆಲಸ ಮಾಡುವ ಸಾಮರ್ಥ್ಯವನ್ನು ಗಳಿಸಿಕೊಂಡಿವೆಯೇ ? ಪಂಚಾಯತ್ ರಾಜ್ ಸಂಸ್ಥೆಗಳ ಅನುದಾನದ ನಿರ್ವಹಣೆ ಪರಿಣಾಮಕಾರಿಯಾಗಿಲ್ಲ. ಜನಯೋಜನೆ ಅನ್ನುವುದನ್ನು ಅದರ ಸರಿಯಾದ ಅರ್ಥದಲ್ಲಿ ನಮಗೆ ಇನ್ನೂ ಸಿದ್ಧಪಡಿಸುವುದು ಮತ್ತು ಅನುಷ್ಠಾನಗೊಳಿಸುವುದು ಸಾಧ್ಯವಾಗಿಲ್ಲ. ಜಿಲ್ಲಾ ಯೋಜನಾ ಸಮಿತಿಗಳು ಹೆಸರಿಗಷ್ಟೆ ಅನ್ನುವ ರೀತಿಯಲ್ಲಿವೆ. ಅವುಗಳನ್ನು ಕ್ರಿಯಾಶೀಲ ಸಮಿತಿಗಳನ್ನಾಗಿ ಮಾಡಬೇಕು. ಈಗ ಚುನಾವಣೆಯಲ್ಲಿ ಗೆದ್ದು ಬಂದಿರುವ ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಸದಸ್ಯರು ಮುಂದಿನ ಐದು ವರ್ಷಗಳ (೨೦೧೬–೨೦೨೧) ತಮ್ಮ ಅಧಿಕಾರಾವಧಿಯಲ್ಲಿ ನಮ್ಮ ಗ್ರಾಮೀಣ ಕರ್ನಾಟಕವನ್ನು, ಅಲ್ಲಿನ ಜನರ ಬದುಕನ್ನು, ಜನರ ಜೀವನಾಧಾರವನ್ನು ಹೇಗೆ ಬದಲಾಯಿಸುತ್ತಾರೆ ಎಂಬುದು ಕುತೂಹಲದ ಸಂಗತಿ ಮಾತ್ರವಲ್ಲ, ಅದು ಜಟಿಲವಾದ ಸಂಗತಿಯೂ ಹೌದು. ಮುಂದಿನ ಐದು ವರ್ಷಗಳಲ್ಲಿ ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳು ಅಭಿವೃದ್ಧಿ ಜವಾಬುದಾರಿ ಕುರಿತಂತೆ ಏನು ಮಾಡಬೇಕು ಮತ್ತು ಏನು ಮಾಡಬಹುದು ಎಂಬ ಸಂಗತಿಗಳನ್ನು ಇಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ. ಕಳೆದ ಇಪ್ಪತ್ತೊಂಬತ್ತು ವರ್ಷಗಳ (೧೯೮೭–೨೦೧೬) ಅನುಭವ ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳ ಮುಂದಿದೆ. ಅದರಿಂದ ಅನೇಕ ಪಾಠಗಳನ್ನು ಕಲಿಯಬಹುದು. ಈ ಪ್ರಬಂಧವನ್ನು ಹತ್ತು ಭಾಗಗಳಲ್ಲಿ ರೂಪಿಸಲಾಗಿದೆ. ಪಂಚಾಯತ್ ರಾಜ್ ಸಂಸ್ಥೆಗಳ ಮುಂದಿರುವ ಸವಾಲುಗಳು ಮತ್ತು ಸಮಸ್ಯೆಗಳನ್ನು ಹೇಗೆ ನಿರ್ವಹಿಸಬಹುದು ಎಂಬುದರ ಚರ್ಚೆಗೆ ಇಲ್ಲಿ ಅವಧಾರಣೆ ನೀಡಲಾಗಿದೆ.

**ಭಾಗ ೧**

**ಅಭಿವೃದ್ಧಿಯನ್ನು ಪರಿಭಾವಿಸಿಕೊಂಡಿರುವ ಕ್ರಮದ ಸಮಸ್ಯೆ**

ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳ ಮಟ್ಟದಲ್ಲಿ ಮಾತ್ರವಲ್ಲ, ಜಾಗತಿಕವಾಗಿಯೂ ಅಭಿವೃದ್ಧಿಯನ್ನು ಪರಿಭಾವಿಸಿಕೊಂಡಿರುವ ಕ್ರಮದಲ್ಲಿ ಅನೇಕ ಸಮಸ್ಯೆಗಳಿವೆ. ಅಭಿವೃದ್ಧಿಯನ್ನು ವರಮಾನದ ಏರಿಕೆಗೆ / ಬೆಳವಣಿಗೆಗೆ ಸಂವಾದಿಯನ್ನಾಗಿ ಮಾಡಲಾಗಿದೆ. ನಮ್ಮ ಕೇಂದ್ರ ಸರ್ಕಾರದ ೨೦೧೬–೨೦೧೭ನೆಯ ಸಾಲಿನ ಬಜೆಟ್ಟಿನಲ್ಲಿ ಮತ್ತು ೨೦೧೫–೨೦೧೬ನೆಯ ಸಾಲಿನ ಆರ್ಥಿಕ ಸಮೀಕ್ಷೆಯಲ್ಲಿ ಅತ್ಯಂತ ಆತಂಕದಿಂದ ಜಿಡಿಪಿ ಬೆಳವಣಿಗೆ ಪ್ರಮಾಣದ ಬಗ್ಗೆ ಚರ್ಚೆ ಮಾಡಲಾಗಿದೆ. ನಮ್ಮ ದೇಶ ಇಂದು ಶೇ. ೭.೫ರಷ್ಟು ಜಿಡಿಪಿ ಬೆಳವಣಿಗೆ ಪ್ರಮಾಣವನ್ನು ಸಾಧಿಸಿಕೊಂಡಿದೆ. ಇದೇನು ಕೆಳಮಟ್ಟದ ಪ್ರಮಾಣವಲ್ಲ. ಆದರೂ ಇದು ಸಾಕಾಗುವುದಿಲ್ಲ ಎಂದು ಸರ್ಕಾರ, ತಜ್ಞರು ಹಲುಬುತ್ತಿದ್ದಾರೆ. ಆದರೆ ಏರಿಕೆಯಾದ ವರಮಾನ ಯಾರ ವಶವಾಗುತ್ತಿದೆ ಎಂಬುದನ್ನು ಮಾತ್ರ ಸರ್ಕಾರ ಚರ್ಚೆ ಮಾಡಲು ಸಿದ್ಧವಿಲ್ಲ. ಮೆಹಬೂಬ್ ಉಲ್ ಹಕ್ ೧೯೯೦ರಲ್ಲಿಯೇ 'ವರಮಾನವು ಜನರ ಬದುಕಿನ ಮೊತ್ತವಲ್ಲ' ಎಂದು ಕರೆ ನೀಡಿದ್ದಾರೆ. ವರಮಾನ, ಉತ್ಪಾದನೆ, ಬಂಡವಾಳ ಮುಂತಾದವು ಅಭಿವೃದ್ಧಿಯ ಸಾಧನೆಗಳೇ (ಮೀನ್ಸ್) ವಿನಾ ಅವು ಅಭಿವೃದ್ಧಿಯ 'ಸಾಧ್ಯ'ವಲ್ಲ (ಎಂಡ್). ಅಮರ್ತ್ಯಸೇನ್ ಮತ್ತೆ ಮತ್ತೆ ತನ್ನ ಬರಹಗಳಲ್ಲಿ ಅಭಿವೃದ್ಧಿ ಅನ್ನುವುದು ಜನರ ಬದುಕಿನ ಸಮೃದ್ಧಿಗೆ ಸಂಬಂಧಿಸಿದ ಸಂಗತಿಯೇ ವಿನಾ ಆರ್ಥಿಕತೆಯ ಸಮೃದ್ಧಿಗೆ ಸಂಬಂಧಿಸಿದ ಸಂಗತಿಯಲ್ಲ ಎಂದು ಹೇಳುತ್ತಾ ಬಂದಿದ್ದಾರೆ. ಆದರೂ ವರಮಾನವೇ ಅಭಿವೃದ್ಧಿಯ ಅಂತಿಮ ಗಂತವ್ಯ ಅನ್ನುವಂತೆ ಸರ್ಕಾರಗಳು, ಅಭಿವೃದ್ಧಿ ತಜ್ಞರು ನಡೆದುಕೊಳ್ಳುತ್ತಿದ್ದಾರೆ. 'ಅಭಿವೃದ್ಧಿ ಯಾರಿಗಾಗಿ' ಎಂಬುದು ಕ್ಲೀಷೆಯಾದರೂ, ಅದು ಎಡಪಂಥೀಯರ ಪರಿಭಾಷೆಯಾದರೂ ಮತ್ತು ಇಂದಿನ ಕೇಂದ್ರ ಸರ್ಕಾರಕ್ಕೆ ಅದು ಅಪಥ್ಯದ ನುಡಿಯಾದರೂ ನಾವು ಈ ಪ್ರಶ್ನೆಯನ್ನು ಕೇಳಿಕೊಳ್ಳಬೇಕಾಗಿದೆ. ಏಕೆಂದರೆ ಏರಿಕೆಯಾದ ವರಮಾನದಲ್ಲಿ ಪಾಲು ಸಮಾಜದಲ್ಲಿನ ವಂಚಿತರಿಗೆ, ಅಂಚಿನಲ್ಲಿರುವವರಿಗೆ ದೊರೆಯುತ್ತಿಲ್ಲ. ಉಳ್ಳವರು ಅದನ್ನು ಕಬಳಿಸುತ್ತಿದ್ದಾರೆ. ಇದನ್ನು ಅಭಿವೃದ್ಧಿ ಎಂದು ಹೇಗೆ ಕರೆಯುವುದು ? ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳು ಅಪ್ರಜ್ಞಾಪೂರ್ವಕವಾಗಿ ಈ ಬಗೆಯ ಅಭಿವೃದ್ಧಿ ನಿರ್ವಚನದ ಸುಳಿಗೆ ಸಿಲುಕಿಕೊಂಡುಬಿಟ್ಟಿವೆ. ಅವು ಕಾಮಗಾರಿಗಳನ್ನೇ ಅಭಿವೃದ್ಧಿಯೆಂದು ತಿಳಿದುಕೊಂಡಿವೆ. ಸಂಪನ್ಮೂಲವಿಲ್ಲದೆ, ಹಣವಿಲ್ಲದೆ ಅಭಿವೃದ್ಧಿ ಸಾಧ್ಯವಿಲ್ಲ ಅನ್ನುವುದು ಇಂದು ನಾಣ್ಣುಡಿಯ ರೂಪ ಪಡೆದುಕೊಂಡುಬಿಟ್ಟಿದೆ. ಅಭಿವೃದ್ಧಿಗೆ ವರಮಾನ, ಬಂಡವಾಳ, ಉತ್ಪಾದನೆ ಎಲ್ಲವೂ ಬೇಕು. ಆದರೆ ಅವೇ ಅಭಿವೃದ್ಧಿಯಲ್ಲ. ಇಲ್ಲಿ ಜನರು ಮುಖ್ಯ, ಜನರ ಬದುಕು ಮುಖ್ಯ. ಅಭಿವೃದ್ಧಿ ಅನ್ನುವುದು ಜನರಿಗೆ, ಜನರ ಬದುಕಿಗೆ, ಅವರ ಬವಣೆಗಳಿಗೆ ಸಂಬಂಧಿಸಿದ ಸಂಗತಿ.

**ಬದಲಾಗುತ್ತಿರುವ ಕರ್ನಾಟಕದ ಜನಸಂಖ್ಯಾ ರಚನೆ ಮತ್ತು ವೃತ್ತಿ ರಚನೆ**

ಕಳೆದ ೧೯೯೧ ರಿಂದ ೨೦೧೧ರ ಅವಧಿಯಲ್ಲಿ ಕರ್ನಾಟಕದ ಗ್ರಾಮೀಣ ಮತ್ತು ನಗರ ಜನಸಂಖ್ಯೆಯ ಪ್ರಮಾಣ ತೀವ್ರ ಬದಲಾಗಿದೆ. ನಮ್ಮ ರಾಜ್ಯದಲ್ಲಿ ಗ್ರಾಮೀಣವಾಸಿಗಳ ಪ್ರಮಾಣ ೧೯೯೧ರಲ್ಲಿ ೭೪.೩ ರಷ್ಟಿದ್ದುದು ೨೦೦೧ರಲ್ಲಿ ಶೇ. ೬೬.೦೧ ರಷ್ಟಕ್ಕೆ ಇಳಿದಿದೆ. ಅವರ ಪ್ರಮಾಣ ೨೦೧೧ರಲ್ಲಿ ಶೇ. ೬೧.೩೩ ಕ್ಕಿಳಿದಿದೆ. ಅಂದರೆ ೨೦೧೧ರಲ್ಲಿ ಕರ್ನಾಟಕದಲ್ಲಿದ್ದ ನಗರ ಜನಸಂಖ್ಯೆಯ ಪ್ರಮಾಣ ೩೮.೬೭. ನಗರ ಜನಸಂಖ್ಯೆಯ ಬೆಳವಣಿಗೆಯ ಪ್ರಮಾಣ ೨೦೦೧ರಿಂದ ೨೦೧೧ರಲ್ಲಿ ಶೇ. ೩೧.೫೪ ರಷ್ಟಿದ್ದರೆ ಗ್ರಾಮೀಣ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ಅದೇ ಅವಧಿಯಲ್ಲಿ ಕೇವಲ ಶೇ. ೭.೪. ಮುಂದಿನ ವರ್ಷಗಳಲ್ಲಿ ನಗರ ಜನಸಂಖ್ಯೆಯು ಅಧಿಕವಾಗಿ ಗ್ರಾಮೀಣ ಜನಸಂಖ್ಯೆಯ ಪ್ರಮಾಣ ತೀವ್ರ ಕಡಿಮೆಯಾಗುವ ಸಾಧ್ಯತೆಯಿದೆ.

ಇದಕ್ಕಿಂತ ಪ್ರಧಾನವಾಗಿ ೨೦೦೧ರಲ್ಲಿ ಕೃಷಿಯನ್ನು ಅವಲಂಬಿಸಿಕೊಂಡಿದ್ದ ದುಡಿಮೆಗಾರರ ಪ್ರಮಾಣ ರಾಜ್ಯದಲ್ಲಿ ಶೇ. ೫೫.೭೧ ರಷ್ಟಿದ್ದುದು ೨೦೧೧ರಲ್ಲಿ ಅವರ ಪ್ರಮಾಣ ಶೇ. ೪೯.೨೮ ರಷ್ಟಾಗಿದೆ. ಅಂದರೆ ಗ್ರಾಮೀಣ, ಕೃಷಿ ಅನ್ನುವುದು ತಮ್ಮ ಮಹತ್ವವನ್ನು ಕಳೆದುಕೊಳ್ಳುತ್ತಿವೆ. ಕೃಷಿ ಅನ್ನುವುದು ನಮ್ಮ ಆರ್ಥಿಕತೆಯ ಬೆನ್ನೆಲುಬಾಗಿ ಇಂದು ಉಳಿದಿಲ್ಲ. ಈ ಬದಲಾದ ಜನಸಂಖ್ಯೆಯ ರಚನೆ ಮತ್ತು ವೃತ್ತಿ ಸಂಬಂಧಗಳ ಹಿನ್ನೆಲೆಯಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳ ಪಾತ್ರವನ್ನು ಪರಿಭಾವಿಸಿಕೊಳ್ಳಬೇಕಾಗುತ್ತದೆ. 'ಗ್ರಾಮ ಸ್ವರಾಜ್' ಬಗ್ಗೆ ಭಾವುಕತೆಯಿಂದ, ಅದು ಗಾಂಧೀಜಿ ಆದರ್ಶ ಎಂದು ಮಾತನಾಡುವುದರ ಬಗ್ಗೆ ಮರು ಚಿಂತಿಸುವ ಅಗತ್ಯವಿದೆ.

ಶಿಕ್ಷಣ, ಆರೋಗ್ಯ, ಆಹಾರ, ಆಶ್ರಯ, ಸ್ವಾತಂತ್ರ್ಯ, ಘನತೆಯಿಂದ ಕೂಡಿದ ಬದುಕು – ಇವೆಲ್ಲವೂ ಅಭಿವೃದ್ಧಿಗೆ ಸಂಬಂಧಿಸಿದ ಸಂಗತಿಗಳು. ಉದಾಹರಣೆಗೆ ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುವ (ಎಲ್ಲ ಪ್ರದೇಶಗಳಲ್ಲಿಯೂ ಇದು ಸಾಮಾನ್ಯವಾಗಿಬಿಟ್ಟಿದೆ) ಹೆಂಡಂದಿರನ್ನು ಬಡಿಯುವುದನ್ನು ತಡೆಯುವುದಕ್ಕೆ ವಿದೇಶಿ

ಬಂಡವಾಳ ಬೇಕಾಗಿಲ್ಲ. ಇದನ್ನು ನಡೆಯದಂತೆ ಮಾಡುವುದು ಪಂಚಾಯತ್ ರಾಜ್ ಸಂಸ್ಥೆಗಳ ಜವಾಬುದಾರಿ. ಇದು ಅಭಿವೃದ್ಧಿಗೆ ಸಂಬಂಧಿಸಿದ ಸಂಗತಿ. ಶ್ರೀ ರಮೇಶ್ ಕುಮಾರ್ ಸಮಿತಿ ಹೇಳಿರುವಂತೆ 'ಮಾನವ ಘನತೆಗೆ ಕಳಂಕ ತರುವ ಪಾರಂಪರಿಕ, ಸಾಮಾಜಿಕ ಮತ್ತು ಧಾರ್ಮಿಕ ಪದ್ಧತಿಗಳನ್ನು ಪ್ರತಿಬಂಧಿಸುವುದು ಮತ್ತು ಮಹಿಳೆಯರಿಗೆ ಲೈಂಗಿಕ ಕಿರುಕುಳ ಆಗದಂತೆ ತಡೆಗಟ್ಟುವುದು ಗ್ರಾಮ ಪಂಚಾಯತಿಗಳ ಕರ್ತವ್ಯ.' ಮಹಿಳೆಯರ ಅಪೌಷ್ಟಿಕತೆಯ ನಿರ್ವಹಣೆಯು ಅಭಿವೃದ್ಧಿ ಕಾರ್ಯಕ್ರಮ. ಇದನ್ನು ನಮ್ಮ ಗ್ರಾಮ ಪಂಚಾಯತಿಗಳು ಮನಗಾಣಬೇಕು. ಅಭಿವೃದ್ಧಿ ಅನ್ನುವುದು ಕೇವಲ ಬಂಡೆ ಹಾಸುವುದು ಮಾತ್ರವಲ್ಲ, ರಸ್ತೆ ನಿರ್ಮಾಣ ಮಾತ್ರವಲ್ಲ, ಚರಂಡಿ ಕಟ್ಟಿಸುವುದು ಮಾತ್ರವಲ್ಲ. ಇವೆಲ್ಲ ಅಭಿವೃದ್ಧಿಗೆ ಬೇಕು ನಿಜ. ಆದರೆ ಅವು ಅಭಿವೃದ್ಧಿಯ ಸಾಧನಗಳು ಮಾತ್ರ.

ಸಾಕ್ಷರತೆ, ಆರೋಗ್ಯ, ಸಮಾನತೆ, ಸ್ವಾತಂತ್ರ್ಯ, ಭದ್ರತೆ ಮುಂತಾದವು ಅಭಿವೃದ್ಧಿಯ ಸಾಧನಗಳೂ ಹೌದು ಮತ್ತು ಅಭಿವೃದ್ಧಿಯ ಸಾಧ್ಯಗಳೂ ಹೌದು. ಗ್ರಾಮ ಪಂಚಾಯತಿಗಳು ಜನರಿಗೆ ಉದ್ಯೋಗ ನೀಡಬೇಕಾಗಿಲ್ಲ. ಅವು ಜನರು ತಮ್ಮ ಬದುಕನ್ನು ಘನತೆಯಿಂದ ಸಾಗಿಸಲು ಅಗತ್ಯವಾದ ವಾತಾವರಣವನ್ನು ನಿರ್ಮಿಸುವುದು ಪಂಚಾಯತಿಗಳ ಕರ್ತವ್ಯ. ಜನರಿಗೆ ಅಕ್ಷರ ಸಂಸ್ಕೃತಿ ಏಕೆ ಬೇಕು ? ಅಕ್ಷರವನ್ನು ನಮ್ಮ ಸಮಾಜದ ಬಹುಮಂದಿಗೆ ನಿರಾಕರಿಸಿಕೊಂಡ ಬಂದ ಪರಂಪರೆ ನಮ್ಮದು. ನಾವೆಲ್ಲರೂ ಮನುಷ್ಯರು ಅನ್ನುವ ಕಾರಣಕ್ಕೆ ನಮಗೆ ಅಕ್ಷರ ಜ್ಞಾನ ಬೇಕು. ಅಸ್ಪೃಶ್ಯತೆಯಿಂದ, ಪ್ರತ್ಯೇಕೀಕರಣದಿಂದ, ದುಸ್ಥಿತಿಯಿಂದ, ಅವಮಾನದಿಂದ ವಿಮೋಚನೆಗೆ ಅಕ್ಷರ ಸಂಸ್ಕೃತಿ ಬೇಕು. ಅಕ್ಷರವೇ ಅಭಿವೃದ್ಧಿ, ಆರೋಗ್ಯವೇ ಅಭಿವೃದ್ಧಿ, ಆಹಾರವೇ ಅಭಿವೃದ್ಧಿ, ಆಶ್ರಯವೇ ಅಭಿವೃದ್ಧಿ, ಘನತೆಯಿಂದ ಕೂಡಿದ ಬದುಕು ಅಭಿವೃದ್ಧಿ, ಸಮಾನತೆ ಅಭಿವೃದ್ಧಿ...

ವರಮಾನವೇ ಜನರ ಬದುಕಿನ ಮೊತ್ತವಲ್ಲ ಎಂಬುದಕ್ಕೆ ಇಲ್ಲಿವೆ ಕೆಲವು ಉದಾಹರಣೆಗಳು : ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳ ತಲಾ ನಿವ್ವಳ ವರಮಾನ ೨೦೧೨-೨೦೧೩ರಲ್ಲಿ ಕ್ರಮವಾಗಿ ರೂ. ೮೯೫೩೧ ಮತ್ತು ರೂ. ೭೪೫೫೪. ಆದರೆ ಅವುಗಳು ರಾಜ್ಯದಲ್ಲಿನ ೩೦ ಜಿಲ್ಲೆಗಳ ಪೈಕಿ ೨೦೧೪ರ ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ಪಡೆದುಕೊಂಡಿರುವ ಸ್ಥಾನಗಳು ಕ್ರಮವಾಗಿ ೨೮ ಮತ್ತು ೨೫. ಆದರೆ ಹಾಸನ ಮತ್ತು ಶಿವಮೊಗ್ಗ ಜಿಲ್ಲೆಗಳ ತಲಾ ನಿವ್ವಳ ವರಮಾನ ಅದೇ ವರ್ಷ ಕ್ರಮವಾಗಿ ರೂ. ೫೩೦೦೦ ಮತ್ತು ರೂ. ೭೧೨೭೧. ಆದರೆ ಅವುಗಳು ರಾಜ್ಯದ ೩೦ ಜಿಲ್ಲೆಗಳ ಪೈಕಿ ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ಕ್ರಮವಾಗಿ ೯ ಮತ್ತು ೮ನೆಯ ಸ್ಥಾನ ಪಡೆದುಕೊಂಡಿವೆ. ಹಾಗಾದರೆ ಯಾವುದು ಅಭಿವೃದ್ಧಿ ? ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳು ಇದರ ಬಗ್ಗೆ ಸೂಕ್ಷ್ಮವಾಗಿ ಪರಿಶೀಲಿಸಬೇಕು. ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳು ವರಮಾನದ ಬೆಳವಣಿಗೆ ದೃಷ್ಟಿಯಿಂದ ಸಮೃದ್ಧವಾಗಿವೆ. ಆದರೆ ಅಲ್ಲಿ ಜನರ ಬದುಕು ದುಸ್ಥಿತಿಯಿಂದ ಕೂಡಿದೆ. ಇದಕ್ಕೆ ಪ್ರತಿಯಾಗಿ ಹಾಸನ ಮತ್ತು ಶಿವಮೊಗ್ಗ ಜಿಲ್ಲೆಗಳು ವರಮಾನದ ಬೆಳವಣಿಗೆಯಲ್ಲಿ ಕೆಳಮಟ್ಟದಲ್ಲಿವೆ. ಆದರೆ ಇಲ್ಲಿ ಜನರ ಬದುಕು ಸಮೃದ್ಧವಾಗಿದೆ.

ಈ ದಿಕ್ಕಿನಲ್ಲಿ ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳು ಅಭಿವೃದ್ಧಿಯನ್ನು ಅರ್ಥ ಮಾಡಿಕೊಳ್ಳಬೇಕು. ಸಾಮಾಜಿಕ ನ್ಯಾಯ ಅನ್ನುವುದು ಬೇರೆಯಲ್ಲ. ಅದು ಅಭಿವೃದ್ಧಿಯ ಅಂತರ್ಗತ, ಅವಿಭಾಜ್ಯ ಅಂಗ. ವರಮಾನ ಬೆಳವಣಿಗೆ ಮತ್ತು ಸಾಮಾಜಿಕ ನ್ಯಾಯಗಳನ್ನು ಹೇಗೆ ಸಮನ್ವಯಗೊಳಿಸಬೇಕು ಎಂಬುದು ನಮ್ಮ ಪಂಚಾಯತಿಗಳ ಮುಂದಿರುವ ಸವಾಲು. ಸಮಾಜದ ಎಲ್ಲರನ್ನೂ ಒಳಗೊಳ್ಳುವ ರೀತಿಯಲ್ಲಿ ಅಭಿವೃದ್ಧಿಯನ್ನು ನಿರ್ವಹಿಸುವ ಕ್ರಮಗಳ ಬಗ್ಗೆ ಪಂಚಾಯತ್ ರಾಜ್ ಸಂಸ್ಥೆಗಳು ಗಮನ ನೀಡಬೇಕು.

**ಭಾಗ ೨**

**ಗ್ರಾಮ ಸ್ವರಾಜ್ ಮತ್ತು ಸ್ವಯಮಾಡಳಿತ ಎಂದರೇನು ?**

ಗ್ರಾಮ ಸ್ವರಾಜ್ ಅನ್ನುವುದು ಗಾಂಧೀಜಿ ಅವರ ಆದರ್ಶ. ಗ್ರಾಮ ಪಂಚಾಯತಿಗಳು ಸ್ವಯಮಾಡಳಿತ ಘಟಕಗಳಾಗಬೇಕು ಅನ್ನುವುದು ನಮ್ಮ ಸಂವಿಧಾನದ ಆಶಯ (ಅನುಚ್ಛೇದ ೪೦). ಇವೆರಡೂ ಇಂದು ಸಾಧ್ಯವಾಗಿಲ್ಲ. ಅವು ಕೇವಲ ಆದರ್ಶಗಳಾಗಿ ಉಳಿದುಕೊಂಡಿವೆ. ಸ್ವರಾಜ್ ಅನ್ನುವುದರ ಅರ್ಥವೇ ಸ್ವಯಮಾಡಳಿತ. ಸ್ವರಾಜ್ ಅನ್ನುವುದು ಸ್ವಾಭಿಮಾನದಿಂದ ಕೂಡಿದ ಬದುಕು ಎಂದೂ ಆಗಬಹುದು. ಸ್ವರಾಜ್ ಅನ್ನುವುದು ಗಾಂಧೀಜಿಗೆ ಕೇವಲ ಬ್ರಿಟಿಷ್

ಕಾವ್ಯಲೋಕ

# ನಿಜಸ್ಥಿತಿ

ದ್ರೋಣನಿದ್ದಾನೆ-
ಭಯವಿದೆ ನನಗೆ !
ಹೆಬ್ಬೆರಳುಗಳು ಕಾಣುತಿವೆ ಭವಿಷ್ಯ.
ನಾನು ಕೊಡಲೊಲ್ಲೆ
ಆತ ಬಿಡಲೊಲ್ಲ
– ಎರಡು ಕೈಗಳನು ಕಟ್ಟಿ ಕತ್ತರಿಸುವವರೆಗೆ.

ಈ ದ್ರೋಣ ಬ್ರಾಹ್ಮಣನಲ್ಲ;
ಜತೆಯಲೇ ಇರುವ ಶೂದ್ರ.
ದ್ರೋಣನದು ತನ್ನ ಶಿಷ್ಯ ಅರ್ಜುನನಿಗಾಗಿ
ಸ್ವಜಾತಿ ಪಕ್ಷಪಾತ.
ಆದರೇ, ಏಕಲವ್ಯನ ಮುಂದೆ
ನಾನು ನಿನ್ನವನೆಂಬ
ನೀನು ನನ್ನವನೆಂಬ
ಬಣ್ಣ ಬಣ್ಣದ ಪಾತ್ರ.
ನಾನು ನಂಬಿದ್ದೆ ಇವರ ಮಾತ !
ಪ್ರತಿಮೆಯ ಕಟ್ಟಿ ಕಲಿತೆ ವಿದ್ಯೆ.
ಶಬ್ದವೇದಿಯನೂ ಕಲಿತಿದ್ದರಿಂದ
ಕೇಳುತಿದೆ ಬೇಲಿಗಳ ಮರೆಯಲ್ಲಿ
ದ್ರೋಣರ ಕುಹಕ !

ರಾಮ ಕಡಿದನಂದು
ಶಂಬೂಕನ ತಲೆಯ –
ಜಗದೊಪ್ಪಿತವಲ್ಲ ನಿಜ ;
ಆ ರಾಮ ಮೌನಿ ಈಗ ನನ್ನ ಪಾಲಿಗೆ.
ನನ್ನ ತಲೆ ಕಡಿಯಲು ಬಂದಿದೆ
ಶಂಬೂಕ ಸಂತತಿ; ಅಂದಿನ ರಾಮನಾಗಿ;
ತೊಡಕು ಇವರೇ ನನ್ನ ಬದುಕಿಗೆ.

ದಾಯಾದಿ ಕಲಹದಲಿ ನನ್ನ
ದೂರ ತಳ್ಳಿದನು ದೊಡ್ಡಣ್ಣ !

ಮನುಗಳು ಹಿಡಿದರು
ಕಾರ್ಪೋರೇಟ್ ವಲಯ !
ಶೂದ್ರರಿರುವುದು ಈಗ
ಬ್ರಾಹ್ಮಣರು ಬಿಟ್ಟ ಜಾಗ !

**ಯತಿರಾಜ್ ಬ್ಯಾಲಹಳ್ಳಿ**
ಪ್ರಥಮ ಎಂ.ಸಿ.ಜೆ., ಎಸ್.ಡಿ.ಎಂ. ಕಾಲೇಜು
ಉಜಿರೆ, ದಕ್ಷಿಣ ಕನ್ನಡ ಜಿಲ್ಲೆ

ವಸಾಹತುಶಾಹಿಯಿಂದ ಸ್ವಾತಂತ್ರ್ಯ ಪಡೆಯುವುದು ಮಾತ್ರವಾಗಿರಲಿಲ್ಲ. ಅದು ಕೇವಲ ಒಂದು ಹಂತ. ಸ್ವರಾಜ್ ಅನ್ನುವುದು ಬೋಧಿಸುವುದರಿಂದ ಬರುವುದಿಲ್ಲ. ಅದು ಕಲಿಯುವ ಸಂಗತಿ ಮತ್ತು ಅನುಭವಿಸುವ ಸಂಗತಿ. 'ಸ್ವರಾಜ್' ಅನ್ನುವುದು ಸ್ವ ಮತ್ತು ರಾಜ್ ಎಂಬ ಪದಗಳ ಸಂಯುಕ್ತ ನುಡಿಯಾಗಿದೆ. ಸ್ವರಾಜ್ ಅನ್ನುವುದಕ್ಕೆ ಪ್ರಭುತ್ವದಿಂದ ವಿಮೋಚನೆ ಎಂಬ ಅರ್ಥವೂ ಸಾಧ್ಯ. ಪಂಚಾಯತ್ ರಾಜ್ ಎಂದು ಕರೆಯುತ್ತಿದ್ದ ಕ್ರಮವನ್ನು ಬದಲಾಯಿಸಿ ಕೆ. ಆರ್. ರಮೇಶ್ ಕುಮಾರ್ ಸಮಿತಿಯು 'ಗ್ರಾಮ ಸ್ವರಾಜ್' ಎಂಬ ನುಡಿಯನ್ನು ಕಾಯಿದೆಗೆ ಸೇರಿಸಿದೆ. ಅಂದಮೇಲೆ ಪಂಚಾಯತ್ ರಾಜ್ ಸಂಸ್ಥೆಗಳ ನೆಲೆಯಲ್ಲಿ ಸ್ವರಾಜ್ ಎಂದರೇನು ?

ಶ್ರೀ ಕೆ. ಆರ್. ರಮೇಶ್ ಕುಮಾರ್ ಅಧ್ಯಕ್ಷತೆಯ ಕರ್ನಾಟಕ ಪಂಚಾಯತ್ ರಾಜ್ ಕಾಯಿದೆ ತಿದ್ದುಪಡಿ ಸಮಿತಿಯ ಪ್ರಕಾರ ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳು ಎಂತಹ ಗ್ರಾಮೀಣ ಕರ್ನಾಟಕವನ್ನು ನಿರ್ಮಿಸಬೇಕು ?

* ಅದು ವ್ಯಾಜ್ಯ ಮುಕ್ತ, ಶೋಷಣೆ ಮುಕ್ತ, ಭಯ ಮುಕ್ತ ಮತ್ತು ಸಮಾನತಾ ಸಮಾಜವನ್ನು ನಿರ್ಮಿಸಬೇಕು.
* ಅದು ಸೃಜನಶೀಲ, ಹೆಮ್ಮೆಯ, ಸ್ವಾವಲಂಬಿ, ಸಂಪದ್ಭರಿತ, ತೃಪ್ತ ಮತ್ತು ಸಾಮರಸ್ಯ ಸಮಾಜವನ್ನು ನಿರ್ಮಿಸಬೇಕು.

ಇದನ್ನು ಸ್ವರಾಜ್‌ನ ಮಾನದಂಡವನ್ನಾಗಿ ಇಟ್ಟುಕೊಳ್ಳಬಹುದು. ಇದು ಗ್ರಾಮ ಸ್ವರಾಜ್.

ಸ್ವರಾಜ್ ಅನ್ನುವುದನ್ನು ಗಾಂಧೀಜಿ ಹೇಗೆ ಪರಿಭಾವಿಸಿಕೊಂಡಿದ್ದರೋ ಅದೇ ಅರ್ಥದಲ್ಲಿ ಅದನ್ನು ಇಂದು ಪರಿಭಾವಿಸಿಕೊಳ್ಳುವುದಾಗಲಿ ಅಥವಾ ಅನುಷ್ಠಾನ ಗೊಳಿಸುವುದಾಗಲಿ ಸಾಧ್ಯವಿಲ್ಲ. ನಿಜ, ಸ್ವರಾಜ್ ಅಂದರೆ ಪೂರ್ಣ ಸ್ವಾವಲಂಬನೆ ಅಲ್ಲ. ಅವಲಂಬನೆ ಅನ್ನುವುದು ಅಗತ್ಯ. ಹಾಗಾದರೆ ಸ್ವರಾಜ್‌ಅನ್ನು ಸಾಧಿಸಿಕೊಳ್ಳುವುದು ಹೇಗೆ?

ಮೊದಲನೆಯದಾಗಿ, ಸ್ವರಾಜ್ ಅನ್ನುವುದನ್ನು ಪ್ರಭುತ್ವದಿಂದ ಬಿಡುಗಡೆ ಅನ್ನುವ ಅರ್ಥವನ್ನು ಕೈಬಿಡಬೇಕು. ಯಾವ ಕಾರಣಕ್ಕೂ ಇಂದು ಪ್ರಭುತ್ವದಿಂದ ಬಿಡುಗಡೆ ಪಡೆದುಕೊಂಡು ಬದುಕನ್ನು ಸಾಗಿಸುವುದು ಸಾಧ್ಯವಿಲ್ಲ. ಸಾಮಾಜಿಕ ನ್ಯಾಯವನ್ನು ಸರ್ಕಾರವಿಲ್ಲದಿದ್ದರೆ ಸಾಧಿಸಿಕೊಳ್ಳುವುದು ಹೇಗೆ ?

ಎರಡನೆಯದಾಗಿ, ಗ್ರಾಮದ ಜಾತಿ ಆಧಾರಿತ ಪಂಚರ ಆಳ್ವಿಕೆಗೆ ಕೊನೆಗೊಳಿಸಿ ಸಾಮಾಜಿಕ ನ್ಯಾಯದನ್ವಯ ಸಮಾಜದ ಎಲ್ಲರೂ ಸಹಭಾಗಿಗಳಾಗುವ ರೀತಿಯಲ್ಲಿ ಪಂಚಾಯತಿಗಳನ್ನು ರಚಿಸಲಾಗುತ್ತಿದೆ. ಗ್ರಾಮ ಪಂಚಾಯತಿಗಳು ಸ್ವಯಮಾಡಳಿತ ಸಂಸ್ಥೆಗಳಾಗಿ ಕಾರ್ಯ ನಿರ್ವಹಿಸಲು ಅಗತ್ಯವಿರುವ ಅಧಿಕಾರ, ಹೊಣೆಗಳು, ಹೊಣೆಗಾರರು ಮತ್ತು ಸಂಪನ್ಮೂಲಗಳನ್ನು ರಾಜ್ಯ ಶಾಸಕಾಂಗದ ಮೂಲಕ ಪಡೆಯುವುದನ್ನು ಖಚಿತಗೊಳಿಸಲಾಗಿದೆ. ಸಾಮಾಜಿಕ ನ್ಯಾಯದನ್ವಯ ಸಮಾಜದ ಪ.ಜಾ., ಪ.ಪಂ., ಒಬಿಸಿ.ಗಳು, ಮಹಿಳೆಯರು... ಹೀಗೆ ಎಲ್ಲರಿಗೂ ಮೀಸಲಾತಿಯನ್ನು ಒದಗಿಸಲಾಗಿದೆ. ಇದರ ಪರಿಣಾಮವಾಗಿ ಇಂದು ಗ್ರಾಮಗಳಲ್ಲಿ ಪ್ರಬಲ ಜಾತಿಗಳ ಪ್ರಾಬಲ್ಯ ಕಡಿಮೆಯಾಗಿದೆ. ಪ್ರಜಾಪ್ರಭುತ್ವದಲ್ಲಿ ಒಬ್ಬ ನಾಗರಿಕ, ಒಂದು ಓಟು, ಒಂದು ಮೌಲ್ಯ ಅನ್ನುವ ಶಾಸನ ಜಾರಿಯಲ್ಲಿದ್ದರೂ ವಾಸ್ತವದಲ್ಲಿ ಒಂದು ಓಟಿಗೆ ಒಂದು ಮೌಲ್ಯ ಎಂಬುದನ್ನು ಸಾಧಿಸಿಕೊಳ್ಳುವುದು ನಮಗೆ ಸಾಧ್ಯವಾಗಿರಲಿಲ್ಲ. ಇಂದು ಅದು ಸಾಧ್ಯವಾಗಿದೆ. ಇದಕ್ಕೆ ಸಂಬಂಧಿಸಿದಂತೆ ಕೆಲವು ಸಮಸ್ಯೆಗಳಿರಬಹುದು. ಉದಾಹರಣೆಗೆ, ವಿಜಯ್ ಮಲ್ಯ ಅವರ ಓಟಿನ ಮೌಲ್ಯ ಕಾರ್ಮಿಕನೊಬ್ಬನ ಓಟಿನ ಮೌಲ್ಯಕ್ಕೆ ಸಮವಲ್ಲ ಅನ್ನುವುದು ಇಂದು ಸಿದ್ಧವಾದಂತೆ ಕಾಣುತ್ತದೆ.

ಗಾಂಧೀಜಿ ಅವರ ಸ್ವರಾಜ್ ಅನ್ನುವುದು ಆಳ್ವಿಕೆಗಿಂತ ಅಭಿವೃದ್ಧಿ ಮಾದರಿಗೆ ಸಂಬಂಧಿಸಿದ್ದಾಗಿದೆ. ಸ್ವಾವಲಂಬನೆ ಸಿದ್ಧಾಂತವನ್ನು ನಾವು ವಿಭಿನ್ನವಾಗಿ ಪರಿಭಾವಿಸಿಕೊಳ್ಳಬೇಕಾಗಿದೆ. ಇಲ್ಲಿ ಸ್ಥಳೀಯತೆಗೆ, ಸ್ಥಳೀಯ ಸಂಪನ್ಮೂಲಕ್ಕೆ, ಸ್ಥಳೀಯ ಉದ್ಯೋಗಕ್ಕೆ, ಸ್ಥಳೀಯ ಬದುಕಿನ ವಿನ್ಯಾಸಕ್ಕೆ – ಆದ್ಯತೆಯಿರಬೇಕು. ಗ್ರಾಮಗಳು ಹೊರಗಿನಿಂದ ಸರಕು–ಸಾಮಗ್ರಿ–ಸರಂಜಾಮುಗಳನ್ನು ಖರೀದಿಸಿ ತರುವುದನ್ನು ಕಡಿಮೆ ಮಾಡುವುದು ಸ್ವರಾಜ್‌ನ ಮೊದಲ ಹೆಜ್ಜೆಯಾಗಿದೆ. ಬದುಕು ಸಾವಯವವಾಗಿರಬೇಕು ಎಂಬುದು ಅದರ ಎರಡನೆಯ ಸಂಗತಿ. ಆದರೆ ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಇದು ಸಾಧ್ಯವೇ ?

ಮೂರನೆಯದಾಗಿ, ನಮ್ಮ ಸ್ಥಳೀಯ ಸಂಪನ್ಮೂಲಗಳ ಸಂವರ್ಧನೆ ಮತ್ತು ಸಂರಕ್ಷಣೆಯು ಸ್ವರಾಜ್‌ನ ಮತ್ತೊಂದು ಅಂಗ. ಯಂತ್ರೋದ್ಯಮದ ಅವಲಂಬನೆಯನ್ನು ಕಡಿಮೆಮಾಡುವುದು ಸ್ವರಾಜ್‌ನ ಇನ್ನೊಂದು ಆಯಾಮವಾಗಿದೆ. ಸ್ವರಾಜ್ ಅನ್ನುವುದನ್ನು ಯಾಂತ್ರಿಕವಾಗಿ ಪರಿಭಾವಿಸಿಕೊಳ್ಳುವುದಕ್ಕೆ ಪ್ರತಿಯಾಗಿ ಅದನ್ನು ವ್ಯಾವಹಾರಿಕವಾಗಿ ಅರ್ಥ ಮಾಡಿಕೊಳ್ಳುವ ಅಗತ್ಯವಿದೆ. ಈ ದಿಶೆಯಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳು ಏನು ಮಾಡಬಹುದು ? ನಮ್ಮ ಪರಿಸರದ ರಕ್ಷಣೆ, ಗ್ರಾಮೀಣ ಜನತೆಯ ದುಸ್ಥಿತಿ ಪ್ರೇರಿತ ವಲಸೆಯನ್ನು ತಡೆಗಟ್ಟುವುದು, ನೀರಿನ ಸಂವರ್ಧನೆ ಮತ್ತು ಸಂರಕ್ಷಣೆ, ಗ್ರಾಮದ ಎಲ್ಲ ಮಕ್ಕಳಿಗೂ ಶಿಕ್ಷಣ, ಎಲ್ಲರಿಗೂ ಆರೋಗ್ಯ, ಆಹಾರ ಭದ್ರತೆ ಸಾಮಾಜಿಕ ಪ್ರತ್ಯೇಕೀಕರಣವನ್ನು ಎದುರಿಸುತ್ತಿರುವವರ ಮತ್ತು ಅಲ್ಪಸಂಖ್ಯಾತರ ಭದ್ರತೆ ಮುಂತಾದವುಗಳ ನಿರ್ವಹಣೆಯನ್ನು ಗ್ರಾಮ ಸ್ವರಾಜ್ ಎಂದು ಕರೆಯಬಹುದು. ಇಂದು ಅಧಿಕಾರಕ್ಕೆ ಬರುತ್ತಿರುವ ತಾಲ್ಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್ ಜನಪ್ರತಿನಿಧಿಗಳ ಮುಂದೆ ಅನೇಕ ಸವಾಲುಗಳಿವೆ. ಸ್ವರಾಜ್ ಅನ್ನುವುದಕ್ಕೆ ಸಮಾನತೆ ಮತ್ತು ಸುಸ್ಥಿರಗತಿ ಅಭಿವೃದ್ಧಿಯನ್ನು ಸಂಯೋಜಿಸಬೇಕಾಗುತ್ತದೆ.

### ಭಾಗ ೩

### ಗ್ರಾಮೀಣ ಪ್ರದೇಶದಲ್ಲಿ ಸಾರ್ವಜನಿಕ ಶಿಕ್ಷಣ

ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳು ಎದುರಿಸಬೇಕಾಗಿರುವ ಬಹು ಮುಖ್ಯ ಸವಾಲೆಂದರೆ ಸಾಕ್ಷರತೆ ಮತ್ತು ಶಿಕ್ಷಣ. ನಮ್ಮ ಗ್ರಾಮೀಣ ಕರ್ನಾಟಕದಲ್ಲಿನ ಸಾಕ್ಷರತೆಯ ಪ್ರಮಾಣ ೨೦೧೧ರಲ್ಲಿ ಶೇ. ೬೮.೭೩. ಆದರೆ ನಗರ ಪ್ರದೇಶದಲ್ಲಿನ ಸಾಕ್ಷರತೆಯ ಪ್ರಮಾಣ ಶೇ. ೮೫.೭೮. ಇಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶಗಳ ನಡುವಿನ ಅಂತರ ಶೇ. ೧೭.೦೫ ರಷ್ಟಿದೆ. ಗ್ರಾಮೀಣ ಮಹಿಳೆಯರ ಸಾಕ್ಷರತಾ ಪ್ರಮಾಣ ೨೦೧೧ರಲ್ಲಿ ಶೇ. ೫೯.೭೧. ಕರ್ನಾಟಕದ ಪ.ಜಾ. ಮತ್ತು ಪ.ಪಂ. ಸಮುದಾಯಗಳ ಸಾಕ್ಷರತಾ ಪ್ರಮಾಣ ಕ್ರಮವಾಗಿ ಶೇ. ೬೫.೩೨ ಮತ್ತು ಶೇ. ೬೨.೦೮. ಇಲ್ಲಿಯೂ ಅಸಮಾನತೆಯಿದೆ. ರಾಜ್ಯದ ಹಿಂದುಳಿದಿರುವ ಜಿಲ್ಲೆಗಳಿಗೆ ಹೋದರೆ ಅಲ್ಲಿ ಸಾಕ್ಷರತೆಯ ಪ್ರಮಾಣ ಅತ್ಯಂತ ಕೆಳಮಟ್ಟದಲ್ಲಿದೆ. ಉದಾಹರಣೆಗೆ, ಯಾದಗೀರ್ ಜಿಲ್ಲೆಯಲ್ಲಿ ೨೦೧೧ರ ಒಟ್ಟು ಸಾಕ್ಷರತಾ ಪ್ರಮಾಣ ಶೇ. ೫೧.೮೩. ಗ್ರಾಮೀಣ ಮಹಿಳೆಯರ ಸಾಕ್ಷರತಾ ಪ್ರಮಾಣ ಶೇ. ೪೭.೦೫. ರಾಜ್ಯಮಟ್ಟದ ಸಾಕ್ಷರತೆ ಮತ್ತು ಯಾದಗೀರ್ ಜಿಲ್ಲೆಯಲ್ಲಿನ ಸಾಕ್ಷರತೆ ಪ್ರಮಾಣಗಳ ನಡುವೆ ಅಜಗಜಾಂತರ ಅಸಮಾನತೆಯಿದೆ. ಪಂಚಾಯತ್ ರಾಜ್ ಸಂಸ್ಥೆಗಳು ಇದನ್ನು ಗಮನಿಸಬೇಕು ಮತ್ತು ಇದಕ್ಕೆ ಪರಿಣಾಮಕಾರಿಯಾದ ಕ್ರಮಗಳನ್ನು ತೆಗೆದುಕೊಳ್ಳಬೇಕು. ಆದರೆ, ಶಿಕ್ಷಣ ನಮ್ಮ ಕಾರ್ಯಕ್ಷೇತ್ರವಲ್ಲ ಎಂದು ಪಂಚಾಯತಿಗಳು ಭಾವಿಸಿದರೆ ಹೇಗೆ ?

ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಗ್ರಾಮೀಣ ಪ್ರದೇಶದಲ್ಲಿ ಅನೇಕ ಸಮಸ್ಯೆಗಳಿವೆ. ಶಾಲೆಯನ್ನು ಮಧ್ಯದಲ್ಲಿ ಬಿಡುವ ಮಕ್ಕಳ ಸಂಖ್ಯೆಯು ಗ್ರಾಮೀಣ ಪ್ರದೇಶದಲ್ಲಿ ಅಧಿಕ. ಗ್ರಾಮೀಣ ಪ್ರದೇಶದಲ್ಲಿ ಶಿಕ್ಷಣದ ಗುಣಮಟ್ಟ ಅತ್ಯಂತ ದುಸ್ಥಿತಿಯಲ್ಲಿದೆ. ಗ್ರಾಮೀಣ ಪ್ರದೇಶಗಳ ಶಾಲೆಗಳಲ್ಲಿನ ಸೌಲಭ್ಯಗಳ ಬಗ್ಗೆ ಏನನ್ನೂ ಹೇಳದಿರುವುದೇ ಲೇಸು. ಬಡವರು, ಗ್ರಾಮೀಣರು, ಪರಿಶಿಷ್ಟರು ಹೋಗುತ್ತಾರೆ ಎಂಬ ಕಾರಣಕ್ಕೆ ಸರ್ಕಾರಿ ಶಾಲೆಗಳು ಗ್ರಾಮೀಣ ಪ್ರದೇಶದಲ್ಲಿ ಹೇಗಿದ್ದರೂ ನಡೆಯುತ್ತದೆ ಎಂಬ ಧೋರಣೆ ನಾಡಿನಲ್ಲಿದೆ. ಇದನ್ನು ಬದಲಾಯಿಸಬೇಕು. ಉಳ್ಳವರಿಗೆ ಯಾವ ಬಗೆಯ ಶಾಲೆಗಳಿವೆಯೋ ಅದೇ ಬಗೆಯ ಶಾಲೆಗಳನ್ನು ಉಳಿದವರಿಗೂ ಒದಗಿಸಬೇಕು.

ಈ ಸಮಸ್ಯೆಯನ್ನು ನಿವಾರಿಸಲು ಎಸ್.ಡಿ.ಎಮ್.ಸಿ. ಇದೆ. ಸರ್ವ ಶಿಕ್ಷಾ ಅಭಿಯಾನ ಇದೆ. ಶಿಕ್ಷಕರಿಗೆ ತರಬೇತಿ ಕಾರ್ಯಕ್ರಮಗಳಿವೆ. ಆದರೆ ಗ್ರಾಮೀಣ ಪ್ರದೇಶದಲ್ಲಿ ಶಿಕ್ಷಣದ ಗುಣಮಟ್ಟ ಅತ್ಯಂತ ಕೆಳಮಟ್ಟದಲ್ಲಿದೆ. ಇದಕ್ಕೆ ಕಾರಣ ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳು ಶಿಕ್ಷಣಕ್ಕೆ, ಶಾಲೆಗಳ ಮೇಲ್ವಿಚಾರಣೆಗೆ, ಶಿಕ್ಷಣದ ಗುಣಮಟ್ಟದ ಮೌಲ್ಯಮಾಪನಕ್ಕೆ ಗಮನ ನೀಡುತ್ತಿಲ್ಲ. ಅದು ನಮ್ಮ ಕಾರ್ಯವಲ್ಲವೆಂದು ಅವು ತಿಳಿದುಕೊಂಡಿರುವಂತೆ ಕಾಣುತ್ತದೆ.

ಈಗಾಗಲೆ ಹೇಳಿದಂತೆ ಅಕ್ಷರ, ಶಿಕ್ಷಣ, ತರಬೇತಿ ಇವೆಲ್ಲ ಅಭಿವೃದ್ಧಿಯ ಅವಿಭಾಜ್ಯ ಅಂಗಗಳು. ನಮ್ಮ ಸಮಾಜದ ಅಭಿವೃದ್ಧಿಯ ಅಡಿಪಾಯ ಶಿಕ್ಷಣ. ಬಡವರಿಗೆ ಭೂಮಿ ನೀಡಲು ನಮಗೆ ಸಾಧ್ಯವಿಲ್ಲ. ನಮ್ಮಲ್ಲಿ ಹೆಚ್ಚುವರಿ ಭೂಮಿಯಿಲ್ಲ ಎಂಬ ಸಬೂಬು ಇಲ್ಲಿ ಸಾಧ್ಯ. ಆದರೆ ಅಕ್ಷರವನ್ನು, ಶಿಕ್ಷಣವನ್ನು ಸಮಾನವಾಗಿ ನೀಡಲು ಏನು ಸಮಸ್ಯೆ ? ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳು ಗ್ರಾಮೀಣ ಪ್ರದೇಶದ ಶಿಕ್ಷಣದ ಸ್ಥಿತಿಗತಿಯನ್ನು ಉತ್ತಮಪಡಿಸುವ ದಿಶೆಯಲ್ಲಿ

ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಇಂದು ನಮ್ಮ ರಾಜ್ಯದಲ್ಲಿ ಜನಸಂಖ್ಯೆಯ ಬೆಳವಣಿಗೆ ತಹಬಂದಿಗೆ ಬಂದಿರುವ ಕಾರಣ ಪ್ರತಿ ವರ್ಷ ಒಂದನೆಯ ತರಗತಿಗೆ ಸೇರುತ್ತಿರುವ ಮಕ್ಕಳ ಸಂಖ್ಯೆ ಕಡಿಮೆಯಾಗುತ್ತಿದೆ. ಕರ್ನಾಟಕದಲ್ಲಿ ೦-೬ ವಯೋಮಾನದ ಮಕ್ಕಳ ಸಂಖ್ಯೆ ೨೦೦೧ರಲ್ಲಿ ೭೧.೮೨ ಲಕ್ಷವಿದ್ದುದು ೨೦೧೧ರಲ್ಲಿ ೭೧.೬೧ ಲಕ್ಷಕ್ಕಿಳಿದಿದೆ. ಇಲ್ಲಿ ಇಳಿಕೆಯ ಪ್ರಮಾಣ ಅತ್ಯಂತ ಕಡಿಮೆ ಇರಬಹುದು. ಆದರೆ ಇಳಿಕೆಯು ಆರಂಭವಾಗಿದೆ. ಮುಂದೆ ೨೦೧೧ರ ನಂತರ ೦-೬ ವಯೋಮಾನದ ಮಕ್ಕಳ ಸಂಖ್ಯೆ ತೀವ್ರ ಕಡಮೆಯಾಗುವ ಸಾಧ್ಯತೆಯಿದೆ. ನಮ್ಮ ರಾಜ್ಯ ಇನ್ನು ಶಿಕ್ಷಣದಲ್ಲಿ ಗುಣಮಟ್ಟಕ್ಕೆ ಆದ್ಯತೆಯನ್ನು ನೀಡಬೇಕಾಗುತ್ತದೆ ಎಂಬುದನ್ನು ಹೇಳುವುದಕ್ಕಾಗಿ ಇದನ್ನು ಇಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಇನ್ನುಮೇಲೆ ಶಾಲಾ ಕಟ್ಟಡಕ್ಕೆ, ಕೊಠಡಿಗಳಿಗೆ ಮುಂತಾದ ಸಂಗತಿಗಳಿಗೆ ಹೆಚ್ಚಿನ ಒತ್ತಡ ಇರುವುದಿಲ್ಲ. ಕುಶಲಿಗಳಾದ ಮತ್ತು ಉನ್ನತ ಗುಣಮಟ್ಟದ ಶಿಕ್ಷಕರ ಸಮಸ್ಯೆಯಿರಬಹುದು.

ನಮ್ಮ ಜಿಲ್ಲಾ ಪಂಚಾಯತಿಗಳು ತಮ್ಮ ಜಿಲ್ಲೆಯಲ್ಲಿನ ಎಸ್.ಎಸ್.ಎಲ್.ಸಿ. ಪರೀಕ್ಷೆಯ ಫಲಿತಾಂಶವನ್ನು ಕ್ರಮಬದ್ಧವಾಗಿ ಹೆಚ್ಚಿಸುವ ಬಗ್ಗೆ ಗಮನ ನೀಡಬೇಕು (ಅಕ್ರಮ ಮಾರ್ಗಗಳನ್ನು ಕೈಬಿಡಬೇಕು). ಪ್ರೌಢಶಾಲೆಗಳಲ್ಲಿ ವಿಜ್ಞಾನ ಪ್ರಯೋಗಾಲಯಗಳ ಗುಣಮಟ್ಟವನ್ನು ಉತ್ತಮಪಡಿಸಬೇಕು. ಶಾಲಾ ಪರಿಸರ ಉತ್ತಮವಾಗಿರುವಂತೆ ನೋಡಿಕೊಳ್ಳಬೇಕು. ಶಾಲಾ ಗ್ರಂಥಾಲಯಕ್ಕೆ ಉತ್ತಮ ಪುಸ್ತಕಗಳನ್ನು ಒದಗಿಸಬೇಕು. ಒಟ್ಟಾರೆ, ಪಂಚಾಯತ್ ರಾಜ್ ಸಂಸ್ಥೆಗಳು ಶಿಕ್ಷಣ ಅನ್ನುವುದು ತಮಗೆ ಸಂಬಂಧಿಸಿದ ಕಾರ್ಯಕ್ಷೇತ್ರ, ಅದರ ನಿರ್ವಹಣೆ ತಮ್ಮ ಜವಾಬುದಾರಿ, ಅದೂ ಒಂದು ಅಭಿವೃದ್ಧಿ ಕಾರ್ಯ ಎಂದು ತಿಳಿದು ನಡೆಯಬೇಕು. ಆಗ ಕೆ. ಆರ್. ರಮೇಶ್ ಕುಮಾರ್ ಸಮಿತಿಯ ಆಶಯವಾದ 'ನಿರಕ್ಷರ ಮುಕ್ತ ಕರ್ನಾಟಕ'ವನ್ನು ಸಾಧಿಸಿಕೊಳ್ಳುವುದು ಸಾಧ್ಯ. ನಮ್ಮ ಗ್ರಾಮೀಣ ಪ್ರದೇಶದ ಮಕ್ಕಳು ನಗರ ಪ್ರದೇಶಗಳಲ್ಲಿನ ಮತ್ತು ಉನ್ನತ ವರ್ಗಗಳ ಮಕ್ಕಳ ಜೊತೆಯಲ್ಲಿ ಸ್ಪರ್ಧಿಸಲು ಸಾಧ್ಯವಾಗುವಂತೆ ಶಿಕ್ಷಣ ವ್ಯವಸ್ಥೆಯನ್ನು ಉತ್ತಮಪಡಿಸಬೇಕು. ಇದು ಪಂಚಾಯತ್ ರಾಜ್ ಸಂಸ್ಥೆಗಳಿಂದ ಮಾತ್ರ ಸಾಧ್ಯ. ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳು ಖಾಸಗಿ ರಂಗದ ವ್ಯಾಮೋಹಕ್ಕೆ ಬಲಿ ಬೀಳಬಾರದು.

**ಭಾಗ ೪**

**ನಮ್ಮ ಗ್ರಾಮೀಣವಾಸಿಗಳ ಆರೋಗ್ಯ**

ಈಗಾಗಲೇ ಹೇಳಿರುವಂತೆ ಆರೋಗ್ಯವೇ ಅಭಿವೃದ್ಧಿ. ಆರೋಗ್ಯ ಕಾರ್ಯಕ್ರಮವೆಂದರೆ ಹೈಟೆಕ್ ಆಸ್ಪತ್ರೆ ಎಂದು ತಿಳಿಯಬಾರದು. ಆರೋಗ್ಯ ಎಂದರೆ ವೈದ್ಯರು, ಔಷಧಿ, ಶಸ್ತ್ರಚಿಕಿತ್ಸಾ ಕೊಠಡಿ ಎಂದು ತಿಳಿಯಬಾರದು. ರೋಗಗಳ ನಿವಾರಣೆಗೆ ವೈದ್ಯರು, ಔಷಧಿ ಬೇಕು. ಆರೋಗ್ಯ ಅಥವಾ ಯಾವುದನ್ನು ಸಾರ್ವಜನಿಕ ಆರೋಗ್ಯ ಎಂದು ಕರೆಯುತ್ತೇವೆಯೋ ಅದನ್ನು ಸಾಧಿಸಿಕೊಳ್ಳಲು ನಮ್ಮ ಪರಿಸರ ಉತ್ತಮವಾಗಿರುವಂತೆ ನೋಡಿಕೊಳ್ಳಬೇಕು. ನಾವು ಉಸಿರಾಡುವ ಗಾಳಿ, ಕುಡಿಯುವ ನೀರು, ಸೇವಿಸುವ ಆಹಾರ, ಧರಿಸುವ ಉಡುಪು ಮುಂತಾದವು ನಮ್ಮ ಆರೋಗ್ಯವನ್ನು ಕಾಪಾಡುವಲ್ಲಿ ನಿರ್ಣಾಯಕ ಪಾತ್ರ ನಿರ್ವಹಿಸುತ್ತವೆ. ಈ ದಿಶೆಯಲ್ಲಿ ಆರೋಗ್ಯದ ಬಗ್ಗೆ ನಮ್ಮ ಪಂಚಾಯತಿಗಳು ಯೋಚಿಸಬೇಕು. ಮಹಿಳೆಯರನ್ನು ಅಪಾರವಾಗಿ ಕಾಡುತ್ತಿರುವ ಅಪೌಷ್ಟಿಕತೆಯನ್ನು (ಅನಿಮಿಯಾ) ನಿವಾರಿಸುವ ಕ್ರಮಗಳ ಬಗ್ಗೆ ಪಂಚಾಯತಿಗಳು ಚಿಂತಿಸಬೇಕು. ಇದು ನಮ್ಮ ಜವಾಬುದಾರಿಯಲ್ಲ ಎಂದು ಅವು ಕೈ ಚೆಲ್ಲಿ ಕುಳಿತುಕೊಳ್ಳಬಾರದು. ಇಂದು ನಮ್ಮ ಗ್ರಾಮೀಣ ಪ್ರದೇಶದಲ್ಲಿ ಆರೋಗ್ಯಕ್ಕೆ ಸಂಬಂಧಿಸಿದ ಚಟುವಟಿಕೆಗಳನ್ನು ನಿರ್ವಹಿಸಲು ಆರೋಗ್ಯ ಸಹಾಯಕಿ-ಸಹಾಯಕರಿದ್ದಾರೆ. ಅಂಗನವಾಡಿ ಕಾರ್ಯಕರ್ತೆಯರಿದ್ದಾರೆ. ಆಶಾ ಕಾರ್ಯಕರ್ತೆಯರಿದ್ದಾರೆ. ಈ ಎಲ್ಲ ಸಂಸ್ಥೆಗಳ ಮತ್ತು ಕಾರ್ಯಕರ್ತೆಯರ ಕಾರ್ಯಕ್ಷಮತೆಯನ್ನು ಉತ್ತಮಪಡಿಸಬೇಕು. ಪರಿಸರ ಮಾಲಿನ್ಯ ಅನ್ನುವುದು ನಮ್ಮ ಗ್ರಾಮೀಣ ಪ್ರದೇಶವನ್ನು ಪ್ರವೇಶಿಸಿಬಿಟ್ಟಿದೆ. ಅನೇಕ ಕಾರಣಗಳಿಂದಾಗಿ ನಗರ ಪ್ರದೇಶಗಳಿಗಿಂತ ಗ್ರಾಮೀಣ ಪ್ರದೇಶಗಳಲ್ಲಿ ನೀರಿನ ಅಭಾವ ಅತಿಯಾಗಿದೆ. ಜನರು ಉಸಿರಾಡುವ ಗಾಳಿ ವಿಷಮಯವಾಗುತ್ತಿದೆ. ಭೂಮಿ ಬಂಜರಾಗುತ್ತಿದೆ. ಜನರು ನಗರ ಪ್ರದೇಶಗಳಿಗೆ ಬದುಕನ್ನು ಅರಸಿಕೊಂಡು ವಲಸೆ ಹೋಗುತ್ತಿದ್ದಾರೆ.



ನಮ್ಮ ರಾಜ್ಯದಲ್ಲಿ ಮಕ್ಕಳು ಮತ್ತು ಮಹಿಳೆಯರು ತೀವ್ರ ಅಪೌಷ್ಟಿಕತೆಯನ್ನು ಎದುರಿಸುತ್ತಿದ್ದಾರೆ. ಇದನ್ನು ಆಂದೋಳನಗಳ ರೀತಿಯಲ್ಲಿ ಎದುರಿಸಬೇಕು. ಮಕ್ಕಳ ಆರೋಗ್ಯದ ಬಗ್ಗೆ ಹೆಚ್ಚಿನ ಗಮನ ನೀಡುವ ಅಗತ್ಯವಿದೆ. ಜಿಲ್ಲಾ ಪಂಚಾಯತಿಗಳು ಮತ್ತು ತಾಲ್ಲೂಕು ಪಂಚಾಯತಿಗಳ ನೆರವಿನಿಂದ ಗ್ರಾಮ ಪಂಚಾಯತಿಗಳು ವಾರ್ಷಿಕವಾಗಿ ಎರಡು ಅಥವಾ ಮೂರು ವೈದ್ಯಕೀಯ ಶಿಬಿರಗಳನ್ನು ಏರ್ಪಡಿಸಬಹುದು. ಒಟ್ಟಾರೆ, ಪಂಚಾಯತಿಗಳು ಆರೋಗ್ಯವನ್ನು ಅಭಿವೃದ್ಧಿಯ ಸಂಗತಿ ಎಂದು ಪರಿಭಾವಿಸಿಕೊಳ್ಳಬೇಕು. ಎನ್.ಎಫ್.ಎಚ್.ಎಸ್. ಪ್ರಕಾರ ಕರ್ನಾಟಕದಲ್ಲಿ ಗರ್ಭಿಣಿ ಮಹಿಳೆಯರಲ್ಲಿ ಅನಿಮಿಯಾ ಎದುರಿಸುತ್ತಿರುವವರ ಸಂಖ್ಯೆ ಹೆಚ್ಚಾಗುತ್ತಿದೆ. ಇದನ್ನು ಎದುರಿಸಲು ಅನೇಕ ಕಾರ್ಯಕ್ರಮಗಳು ಜಾರಿಯಲ್ಲಿವೆ. ಆದರೆ ಅವುಗಳ ಅನುಷ್ಠಾನ ಸಮರ್ಪಕವಾಗಿಲ್ಲ. ಉದಾಹರಣೆಗೆ, 'ಮಡಿಲು' ಕಾರ್ಯಕ್ರಮವಿದೆ.

ಗುಣಪಡಿಸಲಾಗದ ಮತ್ತು ತೀವ್ರತರಹದ ರೋಗಗಳಿಗೆ ಹೈಟೆಕ್ ಆಸ್ಪತ್ರೆಗಳು ಬೇಕು. ದೈನಂದಿನ ಅಸ್ವಸ್ಥತೆಯನ್ನು ನಿವಾರಿಸಲು ಗ್ರಾಮೀಣ ಪ್ರದೇಶದಲ್ಲಿರುವ ಆರೋಗ್ಯ ಕಾರ್ಯಕರ್ತರ ಪಡೆಯನ್ನು ಸೂಕ್ತವಾಗಿ ಬಳಸಿಕೊಳ್ಳಬೇಕು. ಇಂದು ನಮ್ಮಲ್ಲಿ ಕಣ್ಣಿಗೊಬ್ಬರು, ಕಿವಿಗೊಬ್ಬರು, ಹೃದಯಕ್ಕೊಬ್ಬರು, ಕೆಮ್ಮಿಗೊಬ್ಬರು, ಶೀತಕೊಬ್ಬರು... ಹೀಗೆ ವಿಶೇಷ ಪರಿಣತ ವೈದ್ಯರನ್ನು ತಯಾರಿಸುವ ಕ್ರಮಗಳನ್ನು ನಾವು ಅನುಸರಿಸುತ್ತಿದ್ದೇವೆ. ಒಂದು ಹಂತದವರೆಗೆ ಇದು ಸರಿ. ಆದರೆ ಗ್ರಾಮಗಳಲ್ಲಿ ಜನರ ದೈನಂದಿನ ರೋಗಗಳನ್ನು ಗುಣಪಡಿಸುವ ವಿವಿಧೋದ್ದೇಶ ವೈದ್ಯರನ್ನು ನೇಮಿಸಿಕೊಳ್ಳುವ ಬಗ್ಗೆ ಪಂಚಾಯತಿಗಳು ಆಲೋಚಿಸಬೇಕು.

**ಭಾಗ ೫**

**ಕುಡಿಯುವ ನೀರು ಮತ್ತು ನೀರಿನ ಸಂವರ್ಧನೆ-ಸಂರಕ್ಷಣೆ**

ಈಗಾಗಲೆ ನಮ್ಮ ಗ್ರಾಮೀಣ ಪ್ರದೇಶದಲ್ಲಿನ ನೀರಿನ ಸಮಸ್ಯೆಯನ್ನು ವಿವರಿಸಲಾಗಿದೆ. ನೀರಿಗಾಗಿ ರಾಜ್ಯ-ರಾಜ್ಯಗಳ ನಡುವೆ ಸಂಘರ್ಷ ಆರಂಭವಾಗಿದೆ (ಕರ್ನಾಟಕ-ಗೋವಾ), ಜಿಲ್ಲೆ-ಜಿಲ್ಲೆಗಳ ನಡುವೆ ಘರ್ಷಣೆಗಳು ನಡೆಯುತ್ತಿವೆ (ಕರಾವಳಿ ಜಿಲ್ಲೆಗಳು ಮತ್ತು ಚಿಕ್ಕಬಳ್ಳಾಪುರ, ಕೋಲಾರ ಇತ್ಯಾದಿ ಜಿಲ್ಲೆಗಳು). ಅಣೆಕಟ್ಟೆಗಳ ನೀರಿಗಾಗಿ ಜನರು ಹೋರಾಟ ನಡೆಸುತ್ತಿದ್ದಾರೆ. ಕುಡಿಯಲು ನೀರನ್ನು ಹಂಚಿಕೊಳ್ಳಲು ಜನರು ಸಿದ್ಧರಿಲ್ಲ. ಇದಕ್ಕೆ ಅನೇಕ ಕಾರಣಗಳಿರಬಹುದು. ಆದರೆ ಇದಕ್ಕೆ ಒಂದು ಕಾರಣವೆಂದರೆ ನೀರಿಗೆ ಅಭಾವ ಉಂಟಾಗಿರುವುದು. ನೀರು ನಮ್ಮ ಮಣ್ಣಿನೊಳಗೆ ಮಾಯವಾಗುತ್ತಿದೆ. ಇದಕ್ಕೆ ವಿಜ್ಞಾನಿಗಳಿಂದ ಅಥವಾ ಸರ್ಕಾರದಿಂದ ಪರಿಹಾರ ಬಯಸುವುದು ಸರಿಯಲ್ಲ. ಅವರಿಂದ ಇದಕ್ಕೆ ಪರಿಹಾರ ಸಾಧ್ಯವಿಲ್ಲ. ಇಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳ ಪಾತ್ರ ನಿರ್ಣಾಯಕವಾದುದು. ನಮ್ಮ ಪಂಚಾಯತಿಗಳು ನೀರಿನ ಸಮಸ್ಯೆಯನ್ನು, ನೀರಿನ ನಿರ್ವಹಣೆಯ ಜವಾಬುದಾರಿಯನ್ನು ತಮ್ಮ ಕೈಗೆ ತೆಗೆದುಕೊಳ್ಳಬೇಕು. ನೀರಿನ ಸಂವರ್ಧನೆ ಮತ್ತು ಸಂರಕ್ಷಣೆ ಕ್ಷೇತ್ರದಲ್ಲಿ ಅನೇಕ ಪ್ರಯೋಗಗಳು ದೇಶದ ಅನೇಕ ಭಾಗಗಳಲ್ಲಿ ನಡೆಯುತ್ತಿವೆ. ಅವುಗಳಲ್ಲಿ ಕೆಲವು ಯಶಸ್ವಿಯಾಗಿವೆ.

ಕರ್ನಾಟಕವು ಕೆರೆ-ಕಟ್ಟೆಗಳಿಗೆ ಹೆಸರುವಾಸಿ ಯಾಗಿದೆ. ನೂರು, ಸಾವಿರಾರು ಕೆರೆ-ಕಟ್ಟೆಗಳ ಚರಿತ್ರೆ ನಮ್ಮ ರಾಜ್ಯಕ್ಕಿದೆ. ಆದರೆ ಎಲ್ಲದಕ್ಕೂ ಸರ್ಕಾರವನ್ನು ನಂಬಿ ನಾವು ಮೋಸಹೋದೆವು. ಇದಕ್ಕೆಲ್ಲ ಜನರ ಪಾತ್ರ ಮುಖ್ಯ. ಮಳೆ ನೀರಿನ ಕೊಯ್ಲು ಅನ್ನುವುದು ಕ್ರಾಂತಿಕಾರಕವಾಗಿ ನಡೆಯಬೇಕು. ನೀರಿನ ಸಂವರ್ಧನೆ-ಸಂರಕ್ಷಣೆ ಆಂದೋಳನ ರೀತಿಯಲ್ಲಿ ನಡೆಯಬೇಕು. ಕೆರೆ-ಕಟ್ಟೆಗಳ ಒತ್ತುವರಿಯನ್ನು ಪಂಚಾಯತಿಗಳು ಸರಿಪಡಿಸಬೇಕು. ಇದಕ್ಕಾಗಿ ಶಾಸನಗಳನ್ನು,

ನ್ಯಾಯಾಂಗಗಳನ್ನು ಅವಲಂಬಿಸಿದರೆ ಕೆಲಸ ನಡೆಯುವುದಿಲ್ಲ. ಶಾಸನಗಳಿಂದ ನೀರನ್ನು ಉತ್ಪಾದಿಸಲು ಬರುವುದಿಲ್ಲ. ಲಾಗಾಯ್ತಿನಿಂದ ನಮ್ಮ ಗ್ರಾಮೀಣರು 'ಕೈ ಅಣೆ', 'ಹುಲ್ಲಣೆ' ಕಟ್ಟುವುದು ಮತ್ತು ಜಮೀನುಗಳಲ್ಲಿ ಬದುಗಳನ್ನು ನಿರ್ಮಿಸುವುದು ಮುಂತಾದ ಕ್ರಮಗಳ ಮೂಲಕ ಮಣ್ಣಿನ ಸವಕಳಿಯನ್ನು ತಡೆಯುತ್ತಿದ್ದರು ಮತ್ತು ನೀರಿನ ಸಂವರ್ಧನೆ ಮಾಡುತ್ತಿದ್ದರು. ನಮ್ಮ ಪಂಚಾಯತಿಗಳು ಈ ಎಲ್ಲ ನೀರಿನ ಸಂರಕ್ಷಣೆಯ ಕ್ರಮಗಳನ್ನು ಪುನರ್ ಶೋಧಿಸಬೇಕು. ಭೂಮಿಯ ಮೇಲೆ ಬೀಳುವ ನೀರನ್ನು ಸರಿಯಾಗಿ ಗ್ರಾಮೀಣ ಪ್ರದೇಶದ ಮಣ್ಣಿನಲ್ಲಿ ಇಂಗುವಂತೆ ಮಾಡುವುದರಿಂದ ನೀರಿನ ಉತ್ಪಾದಕತೆಯನ್ನು ಉತ್ತಮಪಡಿಸಬಹುದು. ನೀರಿಗಾಗಿ ನಾವು ಇಂದು ವಿದ್ಯುತ್ತನ್ನು ಅವಲಂಬಿಸಿದ್ದೇವೆ. ಅದರಿಂದಾಗಿ ಅನೇಕ ಸಮಸ್ಯೆಗಳು ನಮ್ಮನ್ನು ಕಾಡುತ್ತಿವೆ. ನಮ್ಮ ಗ್ರಾಮೀಣ ಪ್ರದೇಶದಲ್ಲಿ ಅಂತರ್‌ಜಲದ ಸಂವರ್ಧನೆಯಿಂದ ನೀರಿಗಾಗಿ ವಿದ್ಯುತ್ತಿನ ಅವಲಂಬನೆಯಿಂದ ಮುಕ್ತಿ ಪಡೆಯಬಹುದು. ಸ್ವರಾಜ್ ಅನ್ನುವುದನ್ನು ನಮ್ಮ ಗ್ರಾಮೀಣ ಪ್ರದೇಶದ ನೀರಿನ ಸಂವರ್ಧನೆಯಿಂದ ಸಾಧಿಸಿಕೊಳ್ಳಬಹುದು. ನಮ್ಮ ಕೆರೆ–ಕಟ್ಟೆಗಳನ್ನು, ಹಳ್ಳ–ಕೊಳ್ಳಗಳನ್ನು ಸಂರಕ್ಷಿಸಿಕೊಳ್ಳುವುದೊಂದೇ ನೀರಿನ ಸಮಸ್ಯೆಗೆ ಪರಿಹಾರ. ಜಿಲ್ಲಾ ಪಂಚಾಯತಿಯು ತಾಲ್ಲೂಕು ಮತ್ತು ಗ್ರಾಮ ಪಂಚಾಯತಿಗಳ ಸಹಯೋಗದಲ್ಲಿ ನೀರಿನ ಸಂವರ್ಧನೆ ಮತ್ತು ಸಂರಕ್ಷಣೆ ಆಂದೋಳನವನ್ನು ಜಿಲ್ಲೆಯಲ್ಲಿ ನಡೆಸಬೇಕು. ನೀರಾವರಿಗಾಗಿ ಅಂತರ್‌ಜಲದ ವಿಪರೀತ ಬಳಕೆಯನ್ನು ತಡೆಯಬೇಕು. ನೀರು–ಸಾಂದ್ರ ಬೆಳೆಗಳನ್ನು ಬೆಳೆಯುವುದನ್ನು ಕಡಿಮೆ ಮಾಡಬೇಕು. ಪ್ರಜ್ಞಾಪೂರ್ವಕವಾಗಿ ನೀರಿನ ಸಂವರ್ಧನೆ ಮತ್ತು ಸಂರಕ್ಷಣೆಯನ್ನು ಪಂಚಾಯತಿಗಳು ಮಾಡಬೇಕು.

**ಭಾಗ ೬**

## ಕೃಷಿ ಮತ್ತು ಆಹಾರ ಭದ್ರತೆ

ಒಂದು ಕಾಲಕ್ಕೆ ನಮ್ಮ ರಾಜ್ಯದ ಅಭಿವೃದ್ಧಿಯ ಮೂಲ ಒಕ್ಕಲುತನ ಎಂದು ಹೇಳಲಾಗುತ್ತಿತ್ತು. ಇಂದು ಪರಿಸ್ಥಿತಿ ಬದಲಾಗಿದೆ. ಅದು ನಮ್ಮ ಆರ್ಥಿಕತೆಯ ಬೆನ್ನೆಲುಬಾಗಿ ಉಳಿದಿಲ್ಲ. ಕೃಷಿಯನ್ನು ಅಬಲಂಬಿಸಿಕೊಂಡಿರುವ ದುಡಿಮೆಗಾರರ ಪ್ರಮಾಣ ೨೦೧೧ರಲ್ಲಿ ಶೇ. ೫೦ಕ್ಕಿಂತ ಕಡಿಮೆಯಾಗಿದೆ. ರಾಜ್ಯದ ವರಮಾನದಲ್ಲಿ ಕೃಷಿಯ ಪಾಲು ಶೇ. ೨೦ಕ್ಕಿಂತ ಕಡಿಮೆಯಾಗಿದೆ. ಕೃಷಿಯ ವರಮಾನ ಏರಿಕೆಯಾಗದಿದ್ದರೂ ಆರ್ಥಿಕತೆ ಬೆಳೆಯಬಹುದು. ಉದಾಹರಣೆಗೆ, ನಮ್ಮ ದೇಶದ ೨೦೧೫–೨೦೧೬ನೆಯ ಸಾಲಿನ ಜಿಡಿಪಿಯ ಬೆಳವಣಿಗೆ ಪ್ರಮಾಣ ಶೇ. ೭.೬. ಆದರೆ ಕೃಷಿಯ ಬೆಳವಣಿಗೆ ಪ್ರಮಾಣ ಶೇ. ೧.೧. ನಮ್ಮ ದೇಶದ ಜಿಡಿಪಿ ಬೆಳವಣಿಗೆಯು ಕೃಷಿಯನ್ನು ಇಂದು ಹೆಚ್ಚಾಗಿ ಅವಲಂಬಿಸಿಲ್ಲ. ಕರ್ನಾಟಕದಲ್ಲಿ ಆಹಾರ ಪದಾರ್ಥಗಳ ಉತ್ಪಾದನೆ ೨೦೧೦–೧೧ರಲ್ಲಿ ೧೪೦ ಲಕ್ಷ ಟನ್ನುಗಳಷ್ಟಿದ್ದುದು ೨೦೧೨–೧೩ನೆಯ ಸಾಲಿನಲ್ಲಿ ೧೧೦ ಲಕ್ಷ ಟನ್ನುಗಳಿಗೆ ಕುಸಿದಿದೆ. ಒಟ್ಟಾರೆ ಕೃಷಿಯ ಸ್ಥಿತಿಗತಿ ಉತ್ತಮವಾಗಿಲ್ಲ. ರೈತರು ಸಾಲದ ಬಾಧೆಯನ್ನು ತಡೆಯಲಾರದೆ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಸರ್ಕಾರಿ ವಲಯದಿಂದ ಕೃಷಿಗೆ ದೊರೆಯುತ್ತಿದ್ದ ಸಾಲದ ಪ್ರಮಾಣ ಕಡಿಮೆಯಾಗುತ್ತಿದೆ. ರೈತರು ಅನಿವಾರ್ಯವಾಗಿ ಖಾಸಗಿ ಲೇವಾದೇವಿಗಾರರಿಂದ ಸಾಲ ಪಡೆಯುತ್ತಿದ್ದಾರೆ. ಅಲ್ಲಿ ಆತ್ಮಹತ್ಯೆಗೆ ರೈತರನ್ನು ದೂಡುವಷ್ಟು ಬಡ್ಡಿಯ ಪ್ರಮಾಣ ಇರುತ್ತದೆ. ಕೃಷಿ ತಳಿಗಳು, ಕೃಷಿ ಸಾಮಗ್ರಿಗಳು, ಕೃಷಿ ಸಾಲ, ಕೃಷಿ ಮಾರುಕಟ್ಟೆ, ಕೃಷಿ ಉಗ್ರಾಣಗಳು... ಹೀಗೆ ಎಲ್ಲವೂ ಖಾಸಗಿ ಲೇವಾದೇವಿಗಾರರ, ಕಾರ್ಪೊರೇಟ್ ಕುಳಗಳ, ಬಹುರಾಷ್ಟ್ರೀಯ ಕಂಪನಿಗಳ ವಶವಾಗುತ್ತಿವೆ. ಈ ಕ್ರಮಗಳು, ನೀತಿಗಳು ಹೀಗೆ ಮುಂದುವರಿದರೆ ರೈತರಿಗೆ ಆತ್ಮಹತ್ಯೆ ಮಾಡಿಕೊಳ್ಳದೆ ಬೇರೆ ಮಾರ್ಗವಿಲ್ಲದಂತಾಗುತ್ತದೆ.

ನಮ್ಮ ಪಂಚಾಯತಿಗಳು ಇದನ್ನು ಗಮನಿಸಬೇಕು. ಕೃಷಿಯ ನಿರ್ವಹಣೆ ನಮ್ಮದಲ್ಲ ಎಂದು ಪಂಚಾಯತಿಗಳು ಭಾವಿಸಬಾರದು. ಕೃಷಿ ಏನಾದರೂ ಉಳಿಯಬೇಕಾದರೆ, ಆಹಾರ ಉತ್ಪಾದನೆ ಹೆಚ್ಚಾಗಬೇಕಾದರೆ ನಮ್ಮ ಪಂಚಾಯತಿಗಳು ಅದರ ಬಗ್ಗೆ ಗಮನ ಹರಿಸಬೇಕು.

ನೀರಾವರಿ ಮಾತ್ರ ಆಹಾರದ ಕೊರತೆಯನ್ನು ನೀಗಲು ನಮಗಿರುವ ಅನಿವಾರ್ಯ ಮಾರ್ಗ ಎಂದು ಭಾವಿಸಲಾಗಿದೆ. ಇದು ತಪ್ಪು. ಇಂದಿಗೂ ನಮ್ಮ ರಾಜ್ಯದಲ್ಲಿ ಮುಕ್ಕಾಲುಮೂರುವೀಸೆ ಪಾಲು ಬೇಳೆಕಾಳನ್ನು ಒಣಬೇಸಾಯದ ಮೂಲಕ ಬೆಳೆಯಲಾಗುತ್ತಿದೆ. ನೀರಿನ ಜವಾಬುದಾರಿಯುತ ನಿರ್ವಹಣೆಯಿಂದ ಕೃಷಿಯಲ್ಲಿ ಉತ್ಪಾದನೆಯನ್ನು, ಇಳುವರಿಯನ್ನು ಹೆಚ್ಚಿಸಬಹುದು. ಕೃಷಿ ಅಂದರೆ ನಾವು ಇಂದು ಕೇವಲ ಬೆಳೆ ಬೆಳೆಯುವುದು ಎಂದು ತಿಳಿದಿದ್ದೇವೆ. ಕೃಷಿ ಅನ್ನುವುದು ವಿವಿಧೋದ್ದೇಶ ಕಸುಬು. ಹೈನುಗಾರಿಕೆ, ಕುರಿ ಸಾಕಣಿಕೆ, ಕೋಳಿ ಸಾಕಣಿಕೆ, ಮೀನುಗಾರಿಕೆ ಮುಂತಾದುವು ಕೃಷಿಯ ಅವಿಭಾಜ್ಯ ಅಂಗ. ತರಕಾರಿ ಬೆಳೆಯುವುದು ಕೂಡ ಕೃಷಿಯ ಭಾಗ. ವರಮಾನಕ್ಕೆ ಒಂದು ಮೂಲವನ್ನು ಅವಲಂಬಿಸಿದರೆ ಬದುಕು ಸಾಧ್ಯವಿಲ್ಲ. ನಮ್ಮ ಪೂರ್ವಜರು ವರಮಾನಕ್ಕೆ ಕೇವಲ ಬೆಳೆ ಬೆಳೆಯುವುದನ್ನು ಮಾತ್ರ ಅವಲಂಬಿಸಿರಲಿಲ್ಲ. ನಮ್ಮ ಪಂಚಾಯತಿಗಳು ವಿವಿಧೋದ್ದೇಶ ಕೃಷಿಯನ್ನು ಪ್ರಚಾರ ಮಾಡಬೇಕು. ಪ್ರತಿ ಕೃಷಿ ಕುಟುಂಬ ಎರಡು ಕುರಿ, ನಾಲ್ಕು ಕೋಳಿ, ಎರಡು ಆಕಳು (ಈ ಸಂಖ್ಯೆಗಳನ್ನು ಬದಲಾಯಿಸಿಕೊಳ್ಳಬಹುದು) ಸಾಕುವುದನ್ನು ಕಲಿಯಬೇಕು. ಇವಿಲ್ಲದೆ ಸಾವಯವ ಕೃಷಿ ಸಾಧ್ಯವಿಲ್ಲ. ಒಟ್ಟಾರೆ ಕೃಷಿ ಅಭಿವೃದ್ಧಿಯ ಜವಾಬುದಾರಿಯನ್ನು ನಮ್ಮ ಪಂಚಾಯತಿಗಳು ನಿರ್ವಹಿಸಬೇಕು. ಇದರ ಜೊತೆಯಲ್ಲಿ ಕೃಷಿ ಮಾರುಕಟ್ಟೆಯಲ್ಲಿ ನಡೆಯುವ ಮೋಸ, ಬೆಲೆಯಲ್ಲಿನ ಏರುಪೇರು, ದಾಸ್ತಾನು ಮಳಿಗೆಗಳ ನಿರ್ಮಾಣ ಮುಂತಾದವುಗಳ ಕಡೆಗೆ ಪಂಚಾಯತಿಗಳು ಗಮನ ನೀಡಬೇಕು. ಪ್ರತಿ ಗ್ರಾಮದಲ್ಲಿ ಕನಿಷ್ಠ ಎರಡರಿಂದ ಮೂರು ಕೃಷಿ ಹೊಂಡಗಳಿರುವಂತೆ ನೋಡಿಕೊಳ್ಳಬೇಕು. ಆಹಾರ ಭದ್ರತೆಯನ್ನು ಒದಗಿಸುವ ಉದ್ದೇಶದಿಂದ ಕರ್ನಾಟಕ ಸರ್ಕಾರವು 'ಅನ್ನಭಾಗ್ಯ' ಯೋಜನೆಯನ್ನು ಜಾರಿಗೊಳಿಸಿದೆ. ಈ ಯೋಜನೆಯನ್ನು ನಮ್ಮ ಜಿಲ್ಲೆ, ತಾಲ್ಲೂಕುಗಳಲ್ಲಿ ಮತ್ತು ಗ್ರಾಮಗಳಲ್ಲಿ ಸಮರ್ಪಕವಾಗಿ ಮತ್ತು ಉತ್ತಮವಾಗಿ ಅನುಷ್ಠಾನಗೊಳಿಸುವುದು ಪಂಚಾಯತಿಗಳ ಕರ್ತವ್ಯ. ಈ ಯೋಜನೆಯ ಬಗ್ಗೆ ಅನೇಕರು ಕೊಂಕು ಮಾತನಾಡುತ್ತಿದ್ದಾರೆ. ಅದು ಉಳ್ಳವರ ಅಟ್ಟಹಾಸವಾಗಿದೆ. ಆದರೆ ನಮ್ಮ ನಾಡಿನಲ್ಲಿ ಅನ್ನಭಾಗ್ಯವು ಬಡವರ, ವಂಚಿತರ, ಅಂಚಿನಲ್ಲಿರುವವರ ಜೀವಧಾರೆಯಾಗಿದೆ. 'ಹಸಿವು ಮುಕ್ತ ಕರ್ನಾಟಕ'ವನ್ನು ಸಾಧಿಸಿಕೊಳ್ಳಬೇಕಾದರೆ ಅನ್ನಭಾಗ್ಯವನ್ನು ಸರಿಯಾಗಿ ಅನುಷ್ಠಾನಗೊಳಿಸಬೇಕಾಗಿದೆ.

**ಭಾಗ ೭**

## ಮಹಿಳೆಯರ ಸ್ವಾಯತ್ತತೆ–ಸ್ವಾತಂತ್ರ್ಯದ ಪ್ರಶ್ನೆ

ಇಂದು ಸಮಾಜಗಳು ಲಿಂಗ ಸಮಾನತೆಯ ಹಂತ ಮೀರಿ ಬೆಳೆಯುತ್ತಿವೆ. ಒಂದು ಕಾಲಕ್ಕೆ ಸಮಾನತೆಯು ಮಹಿಳಾ ಚಳುವಳಿಗಳ ಒತ್ತಾಯವಾಗಿತ್ತು. ಅದು ಬೇಕು. ಆದರೆ ಅದರಿಂದ ಎಲ್ಲವೂ ಸಾಧ್ಯವಿಲ್ಲ. ಅದನ್ನು ಮೀರಿ ಇಂದು ಮಹಿಳಾ ಸ್ವಾಯತ್ತತೆಯ ಬಗ್ಗೆ ಚರ್ಚೆ ಮಾಡಲಾಗುತ್ತಿದೆ. ಕೇವಲ ಸಮಾನತೆಯಿಂದ ಮಹಿಳೆಯರ ಬದುಕು ಉತ್ತಮವಾಗುವುದಿಲ್ಲ. ಸಮಾನತೆಯೆಂದರೆ ಮಹಿಳೆಯರು ಪುರುಷರಂತಾಗುವುದಲ್ಲ. ಮಹಿಳೆಯರು ತಮ್ಮ ಬದುಕನ್ನು ತಾವು ಕಟ್ಟಿಕೊಳ್ಳುವುದು ಸಾಧ್ಯವಾಗಬೇಕು. ತಾವೇ ಏನಾಗಬೇಕೆಂದಿದ್ದಾರೋ ಅದರಂತಾಗುವುದಕ್ಕೆ ಸೂಕ್ತ ವಾತಾವರಣವನ್ನು ಒದಗಿಸುವುದು ಸಮಾಜದ ಜವಾಬುದಾರಿ. ಈ ದಿಶೆಯಲ್ಲಿ ಲಿಂಗ ಸಮಾನತೆ ಅನ್ನುವುದು ಮೊದಲ ಹಂತ. ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳು ಇನ್ನೂ ಮೊದಲ ಹಂತವನ್ನೇ ಸಾಧಿಸಿಕೊಂಡಿಲ್ಲ. ಶಾಸನಗಳಲ್ಲಿ ಸಮಾನತೆಯನ್ನು ಮಹಿಳೆಯರಿಗೆ ನೀಡಲಾಗಿದೆ. ಅದನ್ನು ಚಲಾಯಿಸುವ



ಸಾಮರ್ಥ್ಯವನ್ನು ಗಳಿಸಿಕೊಳ್ಳುವುದು ಅವರಿಗೆ ಸಾಧ್ಯವಾಗಿಲ್ಲ.

ಇಂದು ಮಹಿಳೆಯರನ್ನು ಎರಡನೆಯ ನಾಗರಿಕರಂತೆ ನೋಡುವ ಕ್ರಮ ಹೆಚ್ಚಾಗುತ್ತಿದೆ. ಮಹಿಳೆಯರು ದೇವಾಲಯ ಪ್ರವೇಶಿಸುವುದನ್ನು ನಿಯಂತ್ರಿಸುವ ಕೆಲಸ ದೇಶದಲ್ಲಿ ನಡೆಯುತ್ತಿದೆ. ರಾತ್ರಿ ಪಾಳಿ ಕೆಲಸವನ್ನು ಅವರಿಗೆ ನಿಷೇಧಿಸುವ ಬಗ್ಗೆ ಒತ್ತಾಯ ಮಾಡಲಾಗುತ್ತಿದೆ. ಅವರ ಸ್ವಾತಂತ್ರ್ಯವನ್ನು ಹತ್ತಿಕ್ಕಲಾಗುತ್ತಿದೆ. ಇದಕ್ಕೆ ಅಪ್ಪಟ ಉದಾಹರಣೆ ಎಂದರೆ ಕೆಳಮಟ್ಟದಲ್ಲಿರುವ ಮಕ್ಕಳ ಲಿಂಗ ಅನುಪಾತ. ಅಭಿಮಾನದ ಸಂಗತಿಯೆಂದರೆ ಮಕ್ಕಳ ಲಿಂಗ ಅನುಪಾತ ನಮ್ಮ ರಾಜ್ಯದಲ್ಲಿ ೨೦೦೧ರಲ್ಲಿ ೯೪೬ ರಷ್ಟಿದ್ದುದು ೨೦೧೧ರಲ್ಲಿ ೯೪೮ಕ್ಕೇರಿದೆ. ಆದರೆ ರಾಜ್ಯದ ಬಾಗಲಕೋಟೆ, ರಾಯಚೂರು, ಗದಗ, ಹಾವೇರಿ, ದ. ಕ., ಮೈಸೂರು, ಚಾಮರಾಜನಗರ, ಯಾದಗೀರ್ ಮತ್ತು ಕೋಲಾರ ಜಿಲ್ಲೆಗಳಲ್ಲಿ ಮಕ್ಕಳ ಲಿಂಗ ಅನುಪಾತ ೨೦೦೧ರಿಂದ ೨೦೧೧ರ ಅವಧಿಯಲ್ಲಿ ಕುಸಿದಿದೆ. ಈ ಜಿಲ್ಲೆಗಳಲ್ಲಿನ ಜಿಲ್ಲಾ ಪಂಚಾಯತಿಗಳು ಇದರ ಬಗ್ಗೆ ತೀವ್ರ ಗಮನ ಹರಿಸಬೇಕು. ಇದು ಲಿಂಗ ಅಸಮಾನತೆಯ ಸೂಚಿ.

ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯ ಪ್ರಕರಣಗಳು ಹೆಚ್ಚಾಗುತ್ತಿವೆ. ನಿಜ, ಪಂಚಾಯತಿಗಳಲ್ಲಿ ಮಹಿಳಾ ಪ್ರತಿನಿಧಿಗಳ ಪ್ರಮಾಣ ಶೇ. ೫೦ ರಷ್ಟಾಗಿದೆ. ಅನೇಕ ಸಂದರ್ಭಗಳಲ್ಲಿ ಅವರಿಗೆ ತಮ್ಮ ಅಧಿಕಾರವನ್ನು ಚಲಾಯಿಸುವುದು ಸಾಧ್ಯವಾಗುತ್ತಿಲ್ಲ. ಏಕೆಂದರೆ ತಳಮಟ್ಟದಲ್ಲಿ ಪುರುಷಶಾಹಿ ಮೌಲ್ಯಗಳು ಗಟ್ಟಿಯಾಗಿ ನೆಲೆಯೂರಿವೆ. ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳು ಲಿಂಗ ಅಸಮಾನತೆಯನ್ನು ತೊಡೆದುಹಾಕುವ ಕ್ರಮಗಳಿಗೆ ಗಮನ ನೀಡಬೇಕು. ಅನೇಕರು ತಪ್ಪಾಗಿ ಭಾವಿಸಿರುವಂತೆ ಲಿಂಗ ಸಮಾನತೆ ಅನ್ನುವುದು ಕೇವಲ ಮಹಿಳೆಯರಿಗೆ ಸಂಬಂಧಿಸಿದ ಸಂಗತಿ ಮಾತ್ರವಲ್ಲ, ಅದು ಅಭಿವೃದ್ಧಿಗೆ ಸಂಬಂಧಪಟ್ಟ ಸಂಗತಿ. ಮಹಿಳೆಯರು ನಿರ್ವಹಿಸುವ ಮನೆವಾರ್ತೆ, ಸಂತಾನೋತ್ಪತ್ತಿ ದುಡಿಮೆ, ಹೊಲ–ಗದ್ದೆಗಳಲ್ಲಿ ಕೆಲಸ ಮಾಡುವುದು – ಇವೆಲ್ಲ ಉತ್ಪಾದನಾ ಕಾರ್ಯಗಳು. 'ಉತ್ಪಾದನೆ ಪುರುಷರ ಕಾರ್ಯ; ಅನುಭೋಗ ಮಹಿಳೆಯರಿಗೆ ಸಂಬಂಧಿಸಿದ್ದು' ಎಂಬ ಪೂರ್ವಗ್ರಹ–ಪ್ರತಿಗಾಮಿ ನಂಬಿಕೆಗಳನ್ನು ಬದಲಾಯಿಸಬೇಕು. ನಮ್ಮ ರಾಜ್ಯದಲ್ಲಿ ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ ೨೦೦೧ರಲ್ಲಿ ಶೇ. ೩೧.೯೮ ರಷ್ಟಿದ್ದುದು ೨೦೧೧ರಲ್ಲಿ ಅದು ಶೇ. ೩೧.೮೭ಕ್ಕಿಳಿದಿದೆ. ಮಹಿಳೆಯರ ದುಡಿಮೆಯ ಮಹತ್ವವನ್ನು ಕೆಳಗಿನ ಉದಾಹರಣೆಯಿಂದ ತಿಳಿದುಕೊಳ್ಳಬಹುದು.

ನಮ್ಮ ದೇಶದಲ್ಲಿ ಉಳಿತಾಯದ ಪ್ರಮಾಣ ಜಿಡಿಪಿಯ ಶೇ. ೩೩ರಷ್ಟಿದೆ. ಇದರಲ್ಲಿ ಕೌಟುಂಬಿಕ ಉಳಿತಾಯದ ಪ್ರಮಾಣ ಶೇ. ೭೦. ಕಾರ್ಪೊರೇಶನ್ನುಗಳ ಉಳಿತಾಯದ ಪ್ರಮಾಣ ಶೇ. ೨೦ ಮತ್ತು ಸಾರ್ವಜನಿಕ ವಲಯದ ಉಳಿತಾಯದ ಪ್ರಮಾಣ ಶೇ. ೧೦. ಕೌಟುಂಬಿಕ ಉಳಿತಾಯದಲ್ಲಿ ಮಹಿಳೆಯರ ದುಡಿಮೆಯ ಪಾಲು ಅತ್ಯಧಿಕವಾಗಿದೆ. ಅಂದರೆ ದೇಶದ ಅಭಿವೃದ್ಧಿಯಲ್ಲಿ ಮಹಿಳೆಯರ ಪಾಲೂ ಇದೆ ಎಂಬುದನ್ನು ಇದು ತೋರಿಸುತ್ತದೆ.

**ಭಾಗ ೮**

**ಪರಿಸರ, ನೈರ್ಮಲ್ಯ, ಸ್ವಚ್ಛತೆ**

ಜಾಗತಿಕ ಮಟ್ಟದಲ್ಲಿ ಪರಿಸರದ ಪ್ರಶ್ನೆ ಜನರನ್ನು ಕಾಡುತ್ತಿದೆ. ಯಾವುದನ್ನು 'ಹವಾಮಾನ ವೈಪರೀತ್ಯ' (ಕ್ಲೈಮೇಟ್ ಚೇಂಜ್) ಎಂದು ಕರೆಯುತ್ತಿದ್ದೇವೆಯೋ ಅದು ನಮ್ಮ ಗ್ರಾಮಗಳನ್ನು, ಕುಟುಂಬಗಳನ್ನು ಪ್ರವೇಶಿಸಿಬಿಟ್ಟಿದೆ. ಪರಿಸರ ಸಮಸ್ಯೆ ಎಂದರೆ ಕೇವಲ ವಾಯುಮಾಲಿನ್ಯ, ನೀರಿನ ಮಾಲಿನ್ಯ ಮಾತ್ರವಲ್ಲ, ನಮ್ಮ ಭೂಮಿಯಲ್ಲಿ ಜೀವಿಸುವುದು ಸಾಧ್ಯವಿಲ್ಲ ಅನ್ನುವ ಮಟ್ಟಕ್ಕೆ ಪರಿಸರ ನಾಶವಾಗುತ್ತಿದೆ. ಒಂದು ಕಾಲಕ್ಕೆ ಅರ್ಥಶಾಸ್ತ್ರದ ಪಾಠ ಹೇಳುವಾಗ ನೀರು, ಗಾಳಿ, ಮಣ್ಣು – ಇವೆಲ್ಲ ಉಚಿತ ಸರಕುಗಳು ಎಂದು ಹೇಳಿಕೊಡಲಾಗುತ್ತಿತ್ತು. ಇಂದು ಹಾಗೆ ಹೇಳುವ ಸ್ಥಿತಿಯಿಲ್ಲ. ಇಂದು ಜನರು ಕುಡಿಯುವ ನೀರನ್ನು ಕೊಳ್ಳುತ್ತಿದ್ದಾರೆ. ಗಾಳಿಯನ್ನು ಸಿಲಿಂಡರುಗಳಲ್ಲಿ ಖರೀದಿಸುತ್ತಿದ್ದಾರೆ. ಇನ್ನು, ಆಮ್ಲಜನಕದ ಸ್ಯಾಚೆಟ್ಟುಗಳು ಮಾರುಕಟ್ಟೆಗೆ ಬರುವ ದಿನ ದೂರವಿಲ್ಲ. ಈ ಎಲ್ಲ ಸಮಸ್ಯೆಗಳು ನಗರಕ್ಕೆ ಮೀಸಲು ಅನ್ನುವ ಸ್ಥಿತಿ ಇಂದಿಲ್ಲ. ಇವೆಲ್ಲ ನಮ್ಮ ಗ್ರಾಮಗಳನ್ನೂ ಪ್ರವೇಶಿಸಿಬಿಟ್ಟಿವೆ.

**ಪರಿಣಾಮ**

ಸೂಕ್ತ ಬೆಲೆಗೆ
ಮಾರಾಟವಾಗಲಿಲ್ಲ
ನಮ್ಮೂರ ರೈತ ಬೆಳೆದ
ಹತ್ತಿ
ಹಾಗಾಗಿ ತಾನೇ
ಸಾವು ಬರಮಾಡಿಕೊಂಡ ಮರ
ಹತ್ತಿ

**ಶಿ. ಕಾ. ಬಡಿಗೇರ**
ಬಾಗಲಕೋಟೆ – ೫೮೭೧೦೧

ಈ ವಿಷಯದಲ್ಲಿ ಪಂಚಾಯತಿಗಳ ಪಾತ್ರವೇನು ? ಪಂಚಾಯತಿಗಳು ಇಲ್ಲಿ ನಿರ್ಣಾಯಕ ಪಾತ್ರ ನಿರ್ವಹಿಸಬಹುದು. ನಮ್ಮ ಕಾಡುಗಳು ಮಾಯವಾಗುತ್ತಿವೆ. ಕಾಡುಪ್ರಾಣಿಗಳು ಗ್ರಾಮಗಳನ್ನು ಮಾತ್ರವಲ್ಲ, ನಗರಗಳನ್ನೂ ಪ್ರವೇಶಿಸುತ್ತಿವೆ. ಕೆರೆಗಳನ್ನು ಒತ್ತುವರಿ ಮಾಡಿ ನಾಶ ಮಾಡಲಾಗುತ್ತಿದೆ. ನದಿಗಳನ್ನು ಹೋಟೆಲು ನಿರ್ಮಾಣಕ್ಕೆ, ಸಾಹಸ ಕ್ರೀಡೆಗಳನ್ನು ಆಯೋಜಿಸಲು ಗುತ್ತಿಗೆ ನೀಡಲಾಗುತ್ತಿದೆ. ಇವೆಲ್ಲ ಪರಿಣಾಮಗಳ ಒಟ್ಟು ಫಲ ಪರಿಸರ ಮಾಲಿನ್ಯ. ಧಾರ್ಮಿಕತೆಯ ಹೆಸರಿನಲ್ಲಿ ನಮ್ಮ ನದಿಗಳನ್ನು ಹಾಳುಮಾಡಲಾಗುತ್ತಿದೆ. ನೀರಿಗೆ ಸಂಬಂಧಿಸಿದಂತೆ ತಾರತಮ್ಯ ಭಾವನೆಯನ್ನು ಬೆಳೆಸಲಾಗುತ್ತಿದೆ. ಈ ನದಿಯ ನೀರು ಪವಿತ್ರ, ಈ ನದಿಯ ನೀರು ಶುದ್ಧ... ಹೀಗೆಲ್ಲ ವರ್ಗೀಕರಿಸಲಾಗುತ್ತಿದೆ. ನಮ್ಮ ಪಂಚಾಯತಿಗಳು ಮಾಡಬೇಕಾದ ಕಾರ್ಯವೆಂದರೆ ನಮ್ಮ ಊರಿನ ಹಳ್ಳದ ನೀರು ಗಂಗಾ ನದಿಯ ನೀರಿನಷ್ಟೇ ಪವಿತ್ರ ಎಂಬುದನ್ನು ಸಾಧಿಸಬೇಕು. ನೀರಿನಲ್ಲಿ ತಾರತಮ್ಯ ಎಣಿಸಬಾರದು. ಗ್ರಾಮೀಣ ಪ್ರದೇಶದಲ್ಲಿ ಬಯಲಿನಲ್ಲಿ ಮಲ ವಿಸರ್ಜನೆಯನ್ನು ನಿಲ್ಲಿಸುವ ಕೆಲಸವಾಗಬೇಕು. ಪ್ರತಿ ಕುಟುಂಬಕ್ಕೂ ಶೌಚಾಲಯಗಳನ್ನು ಒದಗಿಸುವ ಕಾರ್ಯವನ್ನು ಪಂಚಾಯತಿಗಳು ಮಾಡಬಹುದು. ಇದು ಕೇವಲ ನೈರ್ಮಲ್ಯದ ಕಾರ್ಯಕ್ರಮ ಮಾತ್ರವಲ್ಲ, ಇದು ಆರೋಗ್ಯ ಕಾರ್ಯಕ್ರಮವೂ ಹೌದು.

**ಭಾಗ ೯**

**ಸಂಪನ್ಮೂಲ ಸಂಗ್ರಹ, ನಿರ್ವಹಣೆ ಮತ್ತು ವೆಚ್ಚದ ಕಾರ್ಯಕ್ಷಮತೆ**

ನಮ್ಮ ಗ್ರಾಮ ಪಂಚಾಯತಿಗಳನ್ನು 'ಪರಾವಲಂಬಿ ಜೀವಿಗಳು' ಎಂದು ವರ್ಣಿಸಲಾಗುತ್ತಿದೆ. ನಮ್ಮ ಗ್ರಾಮ ಪಂಚಾಯತಿಗಳು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಅನುದಾನದಲ್ಲಿ ಬದುಕುತ್ತಿವೆ. ಹೀಗಾದರೆ ಗ್ರಾಮ ಸ್ವರಾಜ್ ಎಲ್ಲಿ ಸಾಧ್ಯ ? ಅನುದಾನ ಬೇಕು. ಆದರೆ ಪಂಚಾಯತಿಗಳು ತಮ್ಮ ಸ್ವಂತ ಸಂಪನ್ಮೂಲಗಳನ್ನು ಸಂಗ್ರಹಿಸಿಕೊಳ್ಳಬೇಕು. ಪಂಚಾಯತಿಗಳ ಪರಾವಲಂಬಿತನದ ಬಗ್ಗೆ ಕರ್ನಾಟಕದ ಮೂರನೆಯ ಹಣಕಾಸು ಆಯೋಗ ಮಾತನಾಡುತ್ತದೆ. ಒಂದು ಸಂಗತಿಯನ್ನು ಇಲ್ಲಿ ನೆನಪಿನಲ್ಲಿಟ್ಟುಕೊಳ್ಳಬೇಕು. ತೆರಿಗೆ ವಿಧಿಸುವ, ಸಂಪನ್ಮೂಲವನ್ನು ಸಂಗ್ರಹಿಸುವ ಪಂಚಾಯತಿಗಳ ಸಾಮರ್ಥ್ಯವು ಆ ಪಂಚಾಯತಿ ಆರ್ಥಿಕತೆಯ ಅಭಿವೃದ್ಧಿ ಮಟ್ಟವನ್ನು ಅವಲಂಬಿಸಿದೆ. ತೆರಿಗೆ ವಿಧಿಸುವ ಪ್ರಮಾಣವು ಜನರ ವರಮಾನದ ಮಟ್ಟವನ್ನು ಅವಲಂಬಿಸಿದೆ. ಜನರ ವರಮಾನ ನಿಕೃಷ್ಟವಾಗಿದ್ದಾಗ ಯಾರ ಮೇಲೆ, ಯಾವುದರ ಮೇಲೆ ತೆರಿಗೆ ವಿಧಿಸುವುದು ?

ನಮ್ಮ ಪಂಚಾಯತ್ ರಾಜ್ ಸಂಸ್ಥೆಗಳು ಮೊಟ್ಟಮೊದಲನೆಯದಾಗಿ ತಮ್ಮ ತಮ್ಮ ವ್ಯಾಪ್ತಿಯಲ್ಲಿರುವ ಪ್ರದೇಶದ ಆಸ್ತಿಯ ಪಟ್ಟಿಯನ್ನು ತಯಾರಿಸಬೇಕು. ಅವುಗಳಿಂದ ತೆರಿಗೆಯೇತರ ವರಮಾನವನ್ನು ಪಡೆಯುವ ಬಗ್ಗೆ ಯೋಚಿಸಬೇಕು. ಮನೆ ತೆರಿಗೆಯನ್ನು ಪೂರ್ಣ ಪ್ರಮಾಣದಲ್ಲಿ ಸಂಗ್ರಹಿಸಬೇಕು. ನೀರನ್ನು ಮನೆಗಳಿಗೆ ಸರಿಯಾಗಿ ಒದಗಿಸಬೇಕು ಮತ್ತು ಅದಕ್ಕೆ ತಕ್ಕ ಹಾಗೆ ನೀರಿನ ತೆರಿಗೆಯನ್ನು



ಸಂಗ್ರಹಿಸಬೇಕು. ಪಂಚಾಯತಿಗಳಲ್ಲಿನ ಅನವಶ್ಯಕ ಖರ್ಚುಗಳನ್ನು ತಡೆಯಬೇಕು. ಪಂಚಾಯತಿ ಸಾರ್ವಜನಿಕ ಕಟ್ಟಡಗಳ ಬಾಡಿಗೆಯನ್ನು ಕಾಲಕ್ಕೆ ತಕ್ಕ ಹಾಗೆ ನವೀಕರಿಸಬೇಕು. ಪಂಚಾಯತಿಗಳಲ್ಲಿ ಕೆಲಸ ಮಾಡುವ ಉದ್ಯೋಗಿಗಳಲ್ಲಿ ಹೆಚ್ಚುವರಿಯಾದವರನ್ನು ಬೇರೆ ಕಡೆ ವರ್ಗಾಯಿಸಬೇಕು. ಪಂಚಾಯತಿಗಳಲ್ಲಿ ಜನಪ್ರತಿನಿಧಿಗಳು ತಮ್ಮ ಅಗತ್ಯಕ್ಕೆ ತಕ್ಕಂತೆ ಉದ್ಯೋಗಿಗಳನ್ನು ನೇಮಿಸಿ ಕೊಳ್ಳುವುದನ್ನು ತಡೆಯಬೇಕು. ಅದಕ್ಕೆ ಒಂದು ಕ್ರಮಬದ್ಧ ನಿಯಮವನ್ನು ರಾಜ್ಯಮಟ್ಟದಲ್ಲಿ ರೂಪಿಸಬೇಕು. ತಾಲ್ಲೂಕು ಪಂಚಾಯತಿಗಳ ಕಾರ್ಯನಿರ್ವಹಣಾಧಿಕಾರಿಗಳು ಕಡ್ಡಾಯ ವಾಗಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯವರು ಇರುವಂತೆ ನೋಡಿಕೊಳ್ಳಬೇಕು. ವಿಕೇಂದ್ರೀ ಕರಣದ ಗಂಧ ಗಾಳಿಯೂ ಇಲ್ಲದ ಇಲಾಖೆಗಳಿಂದ ಅಧಿಕಾರಿಗಳು ತಾಲ್ಲೂಕು ಪಂಚಾಯತಿಗಳ ಕಾರ್ಯ ನಿರ್ವಹಣಾಧಿಕಾರಿಗಳಾಗಿ ಪ್ರತಿನಿಯೋಜನೆ ಮೇಲೆ ಬರುತ್ತಿದ್ದಾರೆ. ಉದಾಹರಣೆಗೆ, ಪಶುವೈದ್ಯಾಧಿಕಾರಿಗಳು ತಾಲ್ಲೂಕು ಪಂಚಾಯತಿಗಳಲ್ಲಿ ಕಾರ್ಯನಿರ್ವಹಣಾಧಿಕಾರಿ ಗಳಾಗಿ ಕೆಲಸ ಮಾಡುತ್ತಿದ್ದಾರೆ. ಇದರಿಂದ ಎರಡು ರೀತಿಯ ನಷ್ಟ ಉಂಟಾಗುತ್ತದೆ. ಮೊದಲನೆಯದಾಗಿ, ಅವರ ಕುಶಲತೆ ಪೋಲಾಗುತ್ತದೆ. ಎರಡನೆಯದಾಗಿ, ವೃತ್ತಿನಿರತ ಅಧಿಕಾರಿಗಳ ಸೇವೆ ಪಂಚಾಯತಿಗಳಿಗೆ ದೊರೆಯುವುದಿಲ್ಲ. ಈ ಬಗೆಯ ಅಡ್‌ಹಾಕ್ ಕ್ರಮಗಳನ್ನು ನಿಲ್ಲಿಸಬೇಕು. ನಮ್ಮ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಮಾಹಿತಿ ಕೋಶದ ಕೊರತೆಯಿದೆ. ವರಮಾನ ಮತ್ತು ಖರ್ಚುಗಳ ಮಾಹಿತಿಯೇ ಇಲ್ಲದಿದ್ದರೆ ಯೋಜನೆಗಳನ್ನು ಹೇಗೆ ಸಿದ್ಧಪಡಿಸುವುದು ? ಯಾವುದು ಅಗತ್ಯ ಖರ್ಚು, ಯಾವುದು ಅಲ್ಲ ಎಂಬುದನ್ನು ನಿರ್ಧರಿಸುವುದು ಹೇಗೆ ? ಈ ದಿಶೆಯಲ್ಲಿ ಪಂಚಾಯತಿಗಳು ತಮ್ಮ ಲೆಕ್ಕ ಪರಿಶೋಧನ ಶಾಖೆಯನ್ನು ಸಶಕ್ತಗೊಳಿಸಬೇಕು. ಪಂಚಾಯತಿಗಳು ವೆಚ್ಚ ಮಾಡುತ್ತವೆ. ಆದರೆ ಈ ವೆಚ್ಚದ ಫಲಶೃತಿಯೇನು ಎಂಬುದರ ಬಗ್ಗೆ ಕಾಳಜಿ ವಹಿಸುವುದಿಲ್ಲ. ವೆಚ್ಚದ ಮೊತ್ತವೇ ಎಲ್ಲವೂ ಅಲ್ಲ. ಅದರಿಂದ ಉಂಟಾದ ಫಲವೇನು, ಅದರ ಉತ್ಪಾದಕತೆಯೇನು ಎಂಬುದರ ಬಗ್ಗೆ ಗಮನ ನೀಡುವ ಅಗತ್ಯವಿದೆ. ವೆಚ್ಚದ ಕಾರ್ಯಕ್ಷಮತೆ ಎಂದು ಇದನ್ನು ಕರೆಯಲಾಗುತ್ತದೆ. ಪಂಚಾಯತ್ ರಾಜ್ ಸಂಸ್ಥೆಗಳು ತಾವು ನಿರ್ವಹಿಸುವ ವೆಚ್ಚದ ಕಾರ್ಯಕ್ಷಮತೆಯನ್ನು ಅಳೆಯುವ ಸೂಚಿಗಳನ್ನು ರೂಪಿಸಿಕೊಳ್ಳಬೇಕು.

**ಭಾಗ ೧೦**

**ಜನಯೋಜನೆ – ಜನರ ಸಹಭಾಗಿತ್ವ – ಎಲ್ಲರನ್ನು ಒಳಗೊಳ್ಳುವ ಅಭಿವೃದ್ಧಿ**

ಇಂದು ವರಮಾನ–ಕೇಂದ್ರಿತ ಅಭಿವೃದ್ಧಿ ಮಾದರಿಗೆ ಪ್ರತಿಯಾಗಿ ಮಹಿಳೆಯರನ್ನು ಸೇರಿಸಿಕೊಂಡು ಜನರನ್ನು ಕೇಂದ್ರವಾಗಿಟ್ಟುಕೊಂಡ ಜನರ ಯೋಜನೆಯ ಮಾದರಿಯ ಬಗ್ಗೆ ಮಾತನಾಡಲಾಗುತ್ತಿದೆ. ಜನರ ಯೋಜನೆ ಅನ್ನುವುದು ಜನರನ್ನು ಒಳಗೊಳ್ಳುವ ಮತ್ತು ಜನರ ಸಹಭಾಗಿತ್ವದ ಯೋಜನೆಯಾಗಿದೆ. ಪಂಚಾಯತಿಗಳ ಅಭಿವೃದ್ಧಿ ಯೋಜನೆಯನ್ನು ಉತ್ತಮ ಪಡಿಸುವ ದಿಶೆಯಲ್ಲಿ ಮತ್ತು ಸಶಕ್ತವನ್ನಾಗಿ ಮಾಡುವ ನೆಲೆಯಲ್ಲಿ ಕೆ. ಆರ್. ರಮೇಶ್ ಕುಮಾರ್ ಸಮಿತಿಯು ಸದ್ಯ ರಾಜ್ಯದಲ್ಲಿರುವ ಕರ್ನಾಟಕ ರಾಜ್ಯ ಯೋಜನಾ ಮಂಡಳಿಗೆ ಸಮಾನಾಂತರವಾಗಿ 'ಕರ್ನಾಟಕ ರಾಜ್ಯ ವಿಕೇಂದ್ರೀಕರಣ ಯೋಜನೆ ಮತ್ತು ಅಭಿವೃದ್ಧಿ ಸಮಿತಿ'ಯನ್ನು ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ರಚಿಸುವ ಶಿಫಾರಸ್ಸು ಮಾಡಿದೆ. ಪಂಚಾಯತ್ ರಾಜ್ ಸಂಸ್ಥೆಗಳಿಗೆ ಸಂಬಂಧಿಸಿದ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸುವ ಜವಾಬುದಾರಿ ಅಭಿವೃದ್ಧಿ ಸಮಿತಿಗಿರುತ್ತದೆ. ಹೀಗೆ ಶಾಸನಾತ್ಮಕವಾಗಿ ಗ್ರಾಮ ಸ್ವರಾಜ್ ಸ್ಥಾಪನೆಗೆ ಎಲ್ಲ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ. ಈಗ ಚುನಾಯಿತ ಜನಪ್ರತಿನಿಧಿಗಳ ಜವಾಬುದಾರಿ ಅಧಿಕವಾಗಿದೆ. ಶಾಸನಗಳಲ್ಲಿನ ಆಶಯಗಳನ್ನು ಈಡೇರಿಸುವ ದಿಶೆಯಲ್ಲಿ ಅವು ಕೆಲಸ ಮಾಡಬೇಕು. ಜನರ ಯೋಜನೆ ಅನ್ನುವುದು ಮೇಲಿನಿಂದ ಹೇರುವ ಯೋಜನಾ ಕ್ರಮಕ್ಕೆ ಪ್ರತಿಯಾಗಿ ಕೆಳಗಿನಿಂದ ಮೇಲಕ್ಕೆ ಸಾಗುವ ಯೋಜನಾ ಮಾದರಿಯಾಗಿದೆ. ಜಿಲ್ಲಾ ಪಂಚಾಯತಿಗಳಲ್ಲಿರುವ ಶಾಸನಾತ್ಮಕ 'ಜಿಲ್ಲಾ ಯೋಜನಾ ಸಮಿತಿ'ಗಳು ಕ್ರಿಯಾಶೀಲವಾಗಬೇಕು.

**ಬರೀ ಬುಡುಬುಡಿಕೆ**

ಇನ್ವೆಸ್ಟ್ ಕರ್ನಾಟಕದಲ್ಲಿ
ಹರಿದುಬಂತಂತೆ ಹೂಡಿಕೆ
ಜಾರಿಯಾಗಿಲ್ಲವಂತೆ ಇನ್ನೂ
ಹಿಂದಿನ ಒಡಂಬಡಿಕೆ
ಎಲ್ಲ ಬರೀ ನರಸಣ್ಣನ
ಬುಡುಬುಡಿಕೆ !

**ಕೆ. ಅಶೋಕ್ ಕುಮಾರ್**
ಕಾಸರಗೋಡು
ಮಂಗಳೂರು – ೫೭೫ ೦೦೮

ನಮ್ಮ ಗ್ರಾಮ ಪಂಚಾಯತಿಗಳ ಕಚೇರಿಗಳು ಸರ್ಕಾರಿ ಕಚೇರಿಗಳಂತೆ ಕೆಲಸ ಮಾಡಬೇಕು. ಪಂಚಾಯತಿಯ ಬಾಗಿಲನ್ನು ಬೇಕಾದಾಗ ತೆಗೆಯುವುದು, ಬೇಡವಾದಾಗ ಮುಚ್ಚುವುದು ಸರಿಯಲ್ಲ. ಪಂಚಾಯತಿಯ ಎಲ್ಲ ವ್ಯವಹಾರವನ್ನು ಗಣಕ ಯಂತ್ರದಲ್ಲಿ ದಾಖಲಿಸುವ ಕೆಲಸವಾಗಬೇಕು. ಆಗ ಮಾತ್ರ ಜನರ ಯೋಜನೆ ಸಾಧ್ಯ. ಬ್ಯಾಂಕುಗಳು ಹೇಗೆ ಕೆಲಸ ಮಾಡುತ್ತವೆಯೋ ಅದೇ ರೀತಿಯಲ್ಲಿ ಪಂಚಾಯತಿ ಕಚೇರಿಗಳು ಕಾರ್ಯ ನಿರ್ವಹಿಸಬೇಕು. ಜನರ ಯೋಜನೆಯನ್ನು ರೂಪಿಸಲು ಗ್ರಾಮ ಸಭೆಗಳನ್ನು ನಡೆಸುವುದನ್ನು ಕಡ್ಡಾಯ ಮಾಡಲಾಗಿದೆ. ಅದರ ಜೊತೆ ವಾರ್ಡ್ ಸಭೆಗಳನ್ನು ಮತ್ತು ಜನವಸತಿ ಸಭೆಗಳನ್ನು ನಡೆಸುವಂತೆ ಕೆ. ಆರ್. ರಮೇಶ್ ಕುಮಾರ್ ಸಮಿತಿಯು ಶಿಫಾರಸ್ಸು ಮಾಡಿದೆ. ತಜ್ಞರ, ಉನ್ನತ ರಾಜಕೀಯ ಸಂಸ್ಥೆಗಳ, ಸಂಸದರ, ಶಾಸಕರ, ವರ್ಲ್ಡ್ ಬ್ಯಾಂಕಿನ ಆಸೆ–ಆಕಾಂಕ್ಷೆಗಳಿಗೆ ನಮ್ಮ ಯೋಜನೆಗಳು ಒಳಗಾಗಬಾರದು. ಜನರ, ಮಹಿಳೆಯರ, ಅಂಚಿನಲ್ಲಿರುವವರ, ಅಲ್ಪಸಂಖ್ಯಾತರ, ವಂಚಿತರ, ಸಾಮಾಜಿಕ ಪ್ರತ್ಯೇಕೀಕರಣಕ್ಕೆ ಒಳಗಾಗಿರುವವರ ಆಸೆ–ಆಕಾಂಕ್ಷೆಗಳಿಗೆ ಅದು ಸ್ಪಂದಿಸಬೇಕು.

ನಮ್ಮದು ಮೂಲತಃ ಶ್ರೇಣೀಕೃತ ಸಮಾಜ. ಮೇಲು–ಕೀಳು, ಸ್ಪೃಶ್ಯ–ಅಸ್ಪೃಶ್ಯತೆ, ಪವಿತ್ರ–ಅಪವಿತ್ರ, ದ್ವಿಜರು–ದ್ವಿಜರಲ್ಲದವರು... ಹೀಗೆ ತಾರತಮ್ಯವನ್ನು ಅಂತರ್ಗತ ಮಾಡಿಕೊಂಡಿರುವ ಸಮಾಜ. ಸಮಾಜದ ಬಹು ದೊಡ್ಡ ಸಮುದಾಯಕ್ಕೆ ಅಕ್ಷರವನ್ನು ನಿಷೇಧಿಸಿದ ಸಮಾಜ ನಮ್ಮದು. ಸಾಮಾಜಿಕ ಅಸಮಾನತೆಯನ್ನು ಇಂದಿಗೂ ಸಂಪ್ರದಾಯದ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ, ಪ್ರಜ್ಞಾಪೂರ್ವಕವಾಗಿ ಅನುಸರಿಸಿ ಕೊಂಡು ಬರಲಾಗುತ್ತಿದೆ. ಈ ಬಗೆಯ ಸಮಾಜದಲ್ಲಿ ಅಭಿವೃದ್ಧಿಯನ್ನು ಎಲ್ಲ ಜನರನ್ನು ಒಳಗೊಳ್ಳುವ ರೀತಿಯಲ್ಲಿ ರೂಪಿಸದಿದ್ದರೆ ಅದು ಜನರ ಯೋಜನೆಯಾಗುವುದು ಸಾಧ್ಯವಿಲ್ಲ. ಕರ್ನಾಟಕದಲ್ಲಿ ಪ.ಜಾ. ಮತ್ತು ಪ.ಪಂ. ಸಮುದಾಯದ ಜನಸಂಖ್ಯೆಯು ಶೇ. ೨೪ರಷ್ಟಿದೆ. ಇದಕ್ಕೆ ಅಲ್ಪಸಂಖ್ಯಾತರ ಪ್ರಮಾಣ ಶೇ. ೧೫ ಸೇರಿಸಿದರೆ ದುಸ್ಥಿತಿ ಅನುಭವಿಸುತ್ತಿರುವವರ ಪ್ರಮಾಣ ರಾಜ್ಯದ ಒಟ್ಟು ಜನಸಂಖ್ಯೆಯ ಶೇ. ೪೦ರಷ್ಟಾಗುತ್ತದೆ. ನಮ್ಮ ಪಂಚಾಯತಿಗಳು ರೂಪಿಸುವ ಜನರ ಯೋಜನೆ ಅನ್ನುವುದು ಇವರಿಗೆ ಅರ್ಥಪೂರ್ಣವಾಗಿರಬೇಕು. ಜನರ ಯೋಜನೆ ಅನ್ನುವುದು ಉಳ್ಳವರಿಗಲ್ಲ. ಸಮಾಜದಲ್ಲಿ ಎಲ್ಲ ಬಗೆಯ ಅಸಮಾನತೆಯನ್ನು ಮತ್ತು ಜೈವಿಕತೆ ನೆಲೆಯಲ್ಲಿಯೂ ತಾರತಮ್ಯ ಎದುರಿಸುತ್ತಿರುವ ಜನಸಂಖ್ಯೆಯ ಶೇ. ೫೦ರಷ್ಟು ಮಹಿಳೆಯರ ಹಿತಾಸಕ್ತಿಯನ್ನು ಜನರ ಯೋಜನೆ ಒಳಗೊಳ್ಳಬೇಕು.

ಇಂದು ಆಯ್ಕೆಯಾಗಿ ಬಂದಿರುವ ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿಗಳ ಸದಸ್ಯರ ಹೊಣೆ ಅಧಿಕವಾಗಿದೆ. ಅವರು ಅದನ್ನು ಹೇಗೆ ನಿಭಾಯಿಸುತ್ತಾರೆ ಎಂಬುದು ಕುತೂಹಲದ ಸಂಗತಿಯಾಗಿದೆ. ಈ ಎಲ್ಲ ಹೊಣೆಯನ್ನು ನಿರ್ವಹಿಸುವುದು ಸುಲಭದ ಕೆಲಸವಲ್ಲ. ಏಕೆಂದರೆ, ಅಲ್ಲಿ ಅನೇಕ ಅಡ್ಡಿಗಳಿವೆ. ಜಿಲ್ಲಾ ಪಂಚಾಯತಿಗಳು ಸ್ವತಂತ್ರವಾಗಿ ಕೆಲಸ ಮಾಡಲು ಜಿಲ್ಲಾ ಉಸ್ತುವಾರಿ ಮಂತ್ರಿಗಳು ಬಿಡುವುದಿಲ್ಲ. ಅವರ ಮರ್ಜಿಯಲ್ಲಿ ಅವು ಕೆಲಸ ಮಾಡಬೇಕು. ಇದು ತಪ್ಪಬೇಕಾದರೆ ಜಿಲ್ಲಾ ಪಂಚಾಯತಿ ಸದಸ್ಯರು ತಮ್ಮ ಅಧಿಕಾರವನ್ನು ಚಲಾಯಿಸಬೇಕು. ರಾಜ್ಯಮಟ್ಟದಲ್ಲಿ ಅವು ತಮ್ಮ ಶಕ್ತಿಯನ್ನು ಒಗ್ಗೂಡಿಸಿಕೊಳ್ಳಬೇಕು. ಅವು ಸ್ವಾಯತ್ತ, ಸ್ವತಂತ್ರ ಮತ್ತು ಸಂವಿಧಾನಾತ್ಮಕ ಸಂಸ್ಥೆಗಳು. ಜಿಲ್ಲಾ ಉಸ್ತುವಾರಿ ಸಚಿವರಿಗೆ ಇಲ್ಲಿ ಮಧ್ಯ ಪ್ರವೇಶಿಸಲು ಯಾವ ಅಧಿಕಾರವೂ ಇಲ್ಲ. ಆದರೆ ಅವರು ಸಾಂವಿಧಾನೇತರ ಶಕ್ತಿಯಾಗಿ ಕೆಲಸ ಮಾಡುತ್ತಿದ್ದಾರೆ. ನಮ್ಮ ಪಂಚಾಯತಿಗಳು ಸಂವಿಧಾನದ ಆಶಯದಂತೆ ಸ್ವಯಮಾಡಳಿತ ಘಟಕಗಳಾಗಿ ಕೆಲಸ ಮಾಡಬೇಕೆಂದರೆ ಅವುಗಳಿಗೆ ಸ್ವಾತಂತ್ರ್ಯ ಬೇಕು, ಸ್ವಾಯತ್ತ ಅಧಿಕಾರ ಬೇಕು.

**ಡಾ॥ ಟಿ. ಆರ್. ಚಂದ್ರಶೇಖರ**
ನಂ. ೩೪೦/೧, 'ವಚನ', ಸೊಸೈಟಿ ರಸ್ತೆ, ಅಮರಾವತಿ
ಹೊಸಪೇಟೆ – ೫೮೩ ೨೦೧, ಬಳ್ಳಾರಿ ಜಿಲ್ಲೆ

ತತ್ವಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಡಾ॥ ಭೈರಪ್ಪನವರು ಸಮಾಜವಾದಿಗಳಾಗದಿದ್ದರೂ ಅಭಿಪ್ರಾಯ ಭೇದ'ವನ್ನು ಮನ್ನಿಸುವಷ್ಟು ದೊಡ್ಡವರೆಂಬುದನ್ನು ನಾನು ತಿಳಿದಿದ್ದೇನೆ. ಅವರು ರಾಮಾಯಣ ಮಹಾಭಾರತಗಳನ್ನು ಹೇಗೆ ಓದಬೇಕೆಂದು ಆಗಾಗ್ಗೆ ನೀಡುವ ಸಲಹೆಯನ್ನು ನಾವು ಒಪ್ಪಿಕೊಳ್ಳದಿದ್ದರೂ ಸ್ವಾಗತಿಸಬಹುದು. ಅಂತಹ ಸಲಹೆಕೊಡುವುದು ಅವರ ಹಕ್ಕು. ಸೈದ್ಧಾಂತಿಕ ರಹಿತವಾಗಿ ಒಂದು ಕೃತಿಯನ್ನು ಅವರಿಗೆ ಓದಲು ಸಾಧ್ಯವಾಗಿರಬಹುದು. ನಮಗೆ ಸಾಧ್ಯವಾಗಲಾರದು.




# ಎಸ್. ಎಲ್. ಭೈರಪ್ಪ ಮತ್ತು ರಾಮಾಯಣ–ಮಹಾಭಾರತಗಳ ಓದು

**ಕೆ. ಸುಂದರ ರಾಜ್**

**ಕ**ನ್ನಡದ ಬಹಳ ದೊಡ್ಡ ಅಭಿಮಾನಿ ಬಳಗವನ್ನೇ ಹೊಂದಿ ಬಹಳ ದೊಡ್ಡ ಕಾದಂಬರಿಕಾರರೆಂದು ಸುಪ್ರಸಿದ್ಧರಾಗಿರುವ ಡಾ॥ ಎಸ್. ಎಲ್. ಭೈರಪ್ಪನವರು ದಲಿತರು, ಬಂಡಾಯದವರು, ವಿಚಾರವಾದಿಗಳು ರಾಮಾಯಣ ಮತ್ತು ಮಹಾಭಾರತಗಳನ್ನು ಸೈದ್ಧಾಂತಿಕ ದೃಷ್ಟಿಯಿಂದ ಓದಬಾರದೆಂಬ ಸಲಹೆಯನ್ನು ನೀಡಿದ್ದಾರೆ. (ಪ್ರಜಾವಾಣಿ, ಮಾರ್ಚ್ ೭, ೨೦೧೬) ಇವರ ಜತೆಗೆ ಕಬ್ಬಿನಾಲೆ ಭಾರದ್ವಾಜ್ ಎನ್ನುವ ಸಾಹಿತಿಗಳು ಮತ್ತು ಕನ್ನಡದ ಎರಡು ಮುಖ್ಯ ದಿನಪತ್ರಿಕೆಗಳ ಮಾಜಿ ಸಂಪಾದಕರಾಗಿದ್ದ ಶ್ರೀ ವಿಶ್ವೇಶ್ವರ ಭಟ್‌ರವರೂ ದನಿಗೂಡಿಸಿದ್ದಾರೆ.

"ಓದುವುದು" ಎಂದರೇನು ? ಭೈರಪ್ಪನವರಿಗೆ 'ಓದುವುದು' ಎಂದರೆ ಒಂದು ಸಾಯತ್ವ ಕ್ರಿಯೆಯೆಂದು ಅನಿಸಿರುವಂತಿದೆ. ಓದೆಂದರೆ ಎಲ್ಲೋ ಒಂದು ಮೂಲೆಯಲ್ಲಿ ಕೂತು ಎಲ್ಲವನ್ನೂ ಮರೆತು ನಾವೇ ನಾವಾಗಿ ಓದಿಕೊಂಡುಬಿಡುವುದೇ ? ಬಹುಶಃ ಇದು ಸಾಧ್ಯವಾಗದ ಮಾತು. (ಹಾಗಾಗಬಹುದಾಗಿದ್ದರೆ ನಮ್ಮಷ್ಟು ಸುಖಿಗಳು ಯಾರೂ ಇರುತ್ತಿರಲಿಲ್ಲ !) ನಾವು ಓದಿದ್ದನ್ನ ನಮ್ಮ ಸುತ್ತಮುತ್ತಲಿನ ವಿಷಯಗಳಿಗೆ ಹೊಂದಿಸಿ ಹೋಲಿಸಿ ಅರ್ಥಹೊರಡಿಸುವ ಅನಿವಾರ್ಯತೆ ಎಲ್ಲ ಅನುಭವಿ ಓದುಗನಲ್ಲಿಯೂ ಇದ್ದೇ ಇರುತ್ತದೆ. ನಾವು ಪುಸ್ತಕದಲ್ಲಿರುವುದನ್ನು ಸಂಹವನ ಮಾಡಿಕೊಳ್ಳುವಾಗ ಸರ್ವ ಸ್ವತಂತ್ರರಾಗಿರುವುದಿಲ್ಲ. 'ಓದುತ್ತಿರುವ ವಸ್ತು', ಅಂದರೆ ಪುಸ್ತಕ, ಹೊರಡಿಸುವ ಹಲವಾರು ಅರ್ಥಗಳಲ್ಲಿ ನಮ್ಮಲ್ಲಿಯೇ ಅಡಗಿರುವ ಅನುಭವ, ಜೀವನ ದೃಷ್ಟಿ ಮತ್ತು ಅಭಿರುಚಿಗಳೊಂದಿಗೆ ತಾಳೆಯಾಗಬಹುದಾದ ವಿಚಾರಗಳಿಂದ ರೂಪುಗೊಂಡು ನಮಗೇ ಸಂವಹನಗೊಳ್ಳುತ್ತದೆ. ಇವುಗಳನ್ನೇ ನಮ್ಮ ಸೈದ್ಧಾಂತಿಕ ನಿಲುವುಗಳು ಎನ್ನುವುದು. ಇದನ್ನು ಪಕ್ಕಕ್ಕಿಟ್ಟು ನಾವು ಏನನ್ನೂ ಓದುವುದೂ ಸಾಧ್ಯವಾಗುವುದಿಲ್ಲ. ಉದಾಹರಣೆಗೆ ಮಹಾಭಾರತ ಓದುವಾಗ, ನಮಗೆ ಕುಂತಿ, ಮಾದ್ರಿ, ದ್ರೌಪದಿಗಳನ್ನು ಅಂದಿನ ಸಮಾಜ ಅವರನ್ನು ನಡೆಸಿಕೊಂಡ ಬಗೆ ಕಾಣುತ್ತದೆ. ಇದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದಾಗ ನಮ್ಮ ಕಾಲದ ಸ್ತ್ರೀ ಸಮಸ್ಯೆಗಳೂ ಗೋಚರವಾಗುತ್ತದೆ. ಕರ್ಣ, ವಿದುರ, ಏಕಲವ್ಯರುಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದರೆ ಅದು ಸಮಕಾಲೀನ ಸಮಾಜದಲ್ಲಿರುವ ಅಸಮಾನತೆಗಳನ್ನು ನೋಡುವ



ಬಗೆಯಾಗುತ್ತದೆ. ಕೃಷ್ಣನು ಹೇಳುವ ಎಲ್ಲ ಅಂಶಗಳೂ ಸದ್ಯದ ನಮ್ಮ ರಾಜಕೀಯದೊಡನೆ ತಾಳೆಯಾಗದೆ ಇಲ್ಲ.

ಹೀಗಿರುವಾಗ, ಕುಮಾರವ್ಯಾಸನ ಮೇಲೆ 'ಅಸಮಾಧಾನಗೊಂಡು' ಮಹಾಭಾರತದ ಮೂಲದಲ್ಲಿರುವ ಪುರಾಣ ಮತ್ತು ಸಂಕೇತಗಳನ್ನು ಪ್ರಜ್ಞಾಪೂರ್ವಕವಾಗಿ ವರ್ಜಿಸಿ ವಾಸ್ತವವಾದಿ ನೆಲೆಯಿಂದ "ಪರ್ವ" ಎನ್ನುವ ಕಾದಂಬರಿಯನ್ನು ರಚಿಸಿ ಅವರ ಅಭಿಮಾನಿಗಳ ನಿರಂತರ ಪ್ರಶಂಸೆಗೆ ಪಾತ್ರರಾಗಿರುವ ಶ್ರೀ ಭೈರಪ್ಪನವರು ಆದಿ ಕಾವ್ಯಗಳನ್ನು ಸೈದ್ಧಾಂತಿಕತೆಯಿಲ್ಲದೆ ಓದಬೇಕೆಂದು ಹೇಳಿರುವುದರ ಹಿಂದಿರುವ ವ್ಯಂಗ್ಯ ಸ್ಪಷ್ಟವಾಗಿ ಕಾಣಿಸುತ್ತದೆ. ಆದಿ ಕವಿ ವಾಲ್ಮೀಕಿಯು ರಾಮಾಯಣವನ್ನು ಬರೆದಾದ ಮೇಲೆ, ವ್ಯಾಸರಿಂದ ಮಹಾಭಾರತ ಸೃಷ್ಟಿಯಾದಮೇಲೆ ಎಷ್ಟೊಂದು ರಾಮಾಯಣಗಳು ಮಹಾಭಾರತಗಳು ಬಂದವು ಎನ್ನುವುದು ಡಾ॥ ಭೈರಪ್ಪನವರಿಗೆ ತಿಳಿಯದೇ ಇರುವ ವಿಷಯವಲ್ಲ. ಕನ್ನಡದಲ್ಲಿ ಪಂಪ, ರನ್ನ, ಕುಮಾರವ್ಯಾಸರುಗಳಿಂದ ಹಿಡಿದು ಭೈರಪ್ಪನವರವರೆಗಿನ ಮಹಾಭಾರತಗಳು, ನಾಗಚಂದ್ರ, ತೊರವೆ ನರಹರಿ, ಮುದ್ದಣರಿಂದ ಹಿಡಿದು ಕುವೆಂಪು, ಮೊಯ್ಲಿರವರವರೆಗೆ ರಾಮಾಯಣಗಳು ರಚಿತವಾಗಿವೆ. ಅಂತರರಾಷ್ಟ್ರೀಯ ಸಾಮಾಜಿಕ ಭಾಷಾ ವಿಜ್ಞಾನಿ ಮತ್ತು ಕನ್ನಡದ ಮಹತ್ವದ ಕವಿ, ಎ. ಕೆ. ರಾಮಾನುಜನ್, ಮುನ್ನೂರು ವಿವಿಧ ರಾಮಾಯಣಗಳನ್ನು ಭಾರತೀಯ ಭಾಷೆಗಳಲ್ಲಿ ಜಾನಪದಗಳಲ್ಲಿ ಗುರುತಿಸುತ್ತಾರೆ. ಅವುಗಳೆಲ್ಲವೂ ಕೃತಿಕಾರರ ಕಲ್ಪನೆಯಿಂದಷ್ಟೇ ಜನ್ಯವಾದುದಲ್ಲ. ಪ್ರತಿ ಕೃತಿಕಾರನೂ ಮೂಲ ರಾಮಾಯಣ/ಮಹಾಭಾರತವನ್ನು ನೋಡುವ (ಅಂದರೆ 'ಓದುವ') ರೀತಿ ಸಮಕಾಲೀನ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ವಿದ್ಯಮಾನಗಳಿಂದ ರೂಪಿತವಾದದ್ದು ಎನ್ನುವುದು ಸರ್ವವಿದಿತವೇ ಆಗಿದೆ. 'ದಲಿತ', 'ಬಂಡಾಯ', 'ಸ್ತ್ರೀವಾದ' 'ವಿಚಾರವಾದ' ಎನ್ನುವ ಕ್ಯಾಟಗರಿಗಳು ನಾವು 'ಓದು'ವಾಗ ತಳೆಯುವ ನಿಲುವುಗಳನ್ನು ಸೂಕ್ಷ್ಮವಾಗಿ ಗ್ರಹಿಸಲು ಹುಟ್ಟಿಕೊಂಡ ಪರಿಕಲ್ಪನೆಗಳಷ್ಟೇ! ಎಲ್ಲ ಕಾಲದಲ್ಲಿಯೂ ರಾಮಾಯಣ/ಮಹಾಭಾರತಗಳನ್ನು ತಮಗೆ ಸರಿಕಾಣುವ ರೀತಿಯಲ್ಲಿ 'ಓದಿ'ಕೊಂಡ ಬಗೆಯೂ / ಅವುಗಳನ್ನು ಮತ್ತೆ ಮತ್ತೆ ಬೇರೆ ಬೇರೆ ರೀತಿಯಲ್ಲಿ ಹೇಳಿಕೊಂಡ ಬಗೆಯೂ ಅನನ್ಯವಾಗಿದೆ. ಎಲ್ಲವೂ ಅವರವರ ಸೈದ್ಧಾಂತಿಕ ನೆಲೆಯಲ್ಲಿಯೇ ನಿರ್ಮಿತಿಗೊಂಡು ಸೈದ್ಧಾಂತಿಕ ನೆಲೆಯಲ್ಲಿಯೇ ಓದಿಸಿಕೊಂಡು ಹೋಗಿರುವ ಚಾರಿತ್ರಿಕ ಅಂಶವೂ ಕೂಡ ವಿವಾದರಹಿತವಾಗಿ ಒಪ್ಪಿರುವಂಥದೇ!

ತತ್ವಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಡಾ॥ ಭೈರಪ್ಪ ಅವರು ಸಮಾಜವಾದಿಗಳಾಗದಿದ್ದರೂ ಅಭಿಪ್ರಾಯ ಭೇದವನ್ನು ಮನ್ನಿಸುವಷ್ಟು ದೊಡ್ಡವರೆಂಬುದನ್ನು ನಾನು ತಿಳಿದಿದ್ದೇನೆ. ಅವರು ನೀಡುವಂತೆ ರಾಮಾಯಣ ಮಹಾಭಾರತಗಳನ್ನು ಹೇಗೆ ಓದಬೇಕೆಂಬ ಸಲಹೆಯನ್ನು ನಾವು ಒಪ್ಪಿಕೊಳ್ಳದಿದ್ದರೂ ಸ್ವಾಗತಿಸಬಹುದು. ಅಂತಹ ಸಲಹೆಕೊಡುವುದು ಅವರ ಹಕ್ಕು. ಸೈದ್ಧಾಂತಿಕ ರಹಿತವಾಗಿ ಒಂದು ಕೃತಿಯನ್ನು ಅವರಿಗೆ ಓದಲು ಸಾಧ್ಯವಾಗಿರಬಹುದು. ನಮಗೆ ಸಾಧ್ಯವಾಗಲಾರದು. (ಸದ್ಯಕ್ಕೆ ಅವರು ಅವರ 'ದಾಟು', 'ಕವಲು', 'ಮಂದ್ರ', 'ಆವರಣ', 'ಸಾಕ್ಷಿ' ಕಾದಂಬರಿಗಳನ್ನು ಸೈದ್ಧಾಂತಿಕವಲ್ಲದ ರೀತಿ ಓದಿ ಎಂದೇನೂ ಹೇಳಿಲ್ಲವಲ್ಲ ಅದೇ ಸಮಾಧಾನದ ಸಂಗತಿ.) ಆದರೆ ಮುಖ್ಯ ವಿಷಯ ಬೇರೆಯದೇ ಆಗಿದೆ.

ಶ್ರೀ ಭೈರಪ್ಪನವರು ಬರೀ ಸಲಹೆಯ ರೂಪದಲ್ಲಿಯೇ ಹೇಳಿದ್ದರೂ, ಅವರ ಅಭಿಮಾನಿ ಬಳಗದ ಸಂಘ ಪರಿವಾರದವರು, ರಾಮಾಯಣ ಮತ್ತು ಮಹಾಭಾರತಗಳನ್ನು ಕಡ್ಡಾಯವಾಗಿ ಶ್ರೀಯುತರು ಹೇಳಿರುವ ರೀತಿಯಲ್ಲಿಯೇ ಸೈದ್ಧಾಂತಿಕ ದೃಷ್ಟಿಯಿಲ್ಲದೆ ಓದಬೇಕೆಂದು ಒತ್ತಡ ತಂದರೆ ಆಶ್ಚರ್ಯಪಡಬೇಕಿಲ್ಲ. ಶಾಲಾ ಕಾಲೇಜುಗಳಲ್ಲಿ ವಿಶ್ವವಿದ್ಯಾಲಯಗಳಲ್ಲಿ ಇಂತಹದೇ ವಿಷಯಗಳನ್ನು ಹೀಗೇ ಕಲಿಸಬೇಕೆಂದು ಬಲವಂತ ಮಾಡುತ್ತಿರುವುದೂ ಎಲ್ಲರಿಗೂ ಗೊತ್ತಿದೆ. ದೆಹಲಿ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಪಠ್ಯಕ್ರಮದಲ್ಲಿ ಅಳವಡಿಸಿದ್ದ ಎ. ಕೆ. ರಾಮಾನುಜನ್ ಅವರ ಪ್ರಬಂಧ – "Three Hundred Ramayanas : Five Examples and Three Thoughts on Translation" ವನ್ನು ಎಬಿವಿಪಿ ಒತ್ತಡದ ಮೇರೆಗೆ ಹಿಂತೆಗೆದುಕೊಂಡದ್ದನ್ನು ಇಲ್ಲಿ ಸ್ಮರಿಸಬಹುದು. ಈಗ 'ರಾಷ್ಟ್ರೀಯತೆ' ಎಂಬ ಪರಿಕಲ್ಪನೆಯನ್ನು ಹೇಗೆ ಗ್ರಹಿಸಬೇಕೆಂದು ಒತ್ತಾಯ ಮಾಡಲಾಗುತ್ತಿದೆ. ಅದು ಕೆಲವೆಡೆ ಹಿಂಸೆಯ ರೂಪವನ್ನೂ ಪಡೆದಿದೆ. ಮೈಸೂರಿನಲ್ಲಿರುವ ಆಚಾರ್ಯರೊಬ್ಬರು ವಾಲ್ಮೀಕಿಯ ಬಗ್ಗೆ ಹೇಳುತ್ತಾ ರಾಮಾಯಣವನ್ನು 'ವಾಲ್ಮೀಕಿಯೇತರ' ರೀತಿಯಲ್ಲಿ (?) ರಾಮಾಯಣವನ್ನು ಓದುವುದರ ಬಗ್ಗೆ ಕಿಡಿಕಾರಿದ್ದಾರೆ. ನನ್ನ ಆತ್ಮೀಯ ಗುರುಗಳಾಗಿದ್ದ ದಿವಂಗತ ಪೋಲಂಕಿ ರಾಮಮೂರ್ತಿಯವರು ಸೀತಾ–ಲಕ್ಷ್ಮಣರ ಸಂಬಂಧ ಕುರಿತಾಗಿ ಎತ್ತಿದ್ದ ಪ್ರಶ್ನೆಗಳಿಗೆ, ಅವುಗಳ ಮೌಲ್ಯಗಳೇನೆಯಿರಲಿ, ಉತ್ತರ ಕೊಡದೆ, ಅವರನ್ನು ಹೀನಾಮಾನವಾಗಿ ಜರೆದಿದ್ದಾರೆ. ಆಚಾರ್ಯರ ಹಿಂದೆ ಸಂಘ ಪರಿವಾರವೇ ಇದೆ.

ಯಾವುದೇ ನಿರ್ದಿಷ್ಟ ರೀತಿಯಲ್ಲಿ 'ಓದಿರಿ ಎನ್ನುವುದು' ಇಲ್ಲವೇ 'ಓದಬೇಡಿರೆಂದು ಹೇಳುವುದು' ಕ್ರಿಯಾಶೀಲತೆಯನ್ನು ಕಡಿಯಲು ಬಳಸಬಹುದಾದ ಮೊದಲ ಆಯುಧವೆನ್ನುವುದನ್ನು ಭೈರಪ್ಪನಂತಹವರು ಮರೆಯದಿರಬೇಕು. ಇಂತಹ ಬೆಳವಣಿಗೆಯಿಂದ ಮುಂದೆ "ಪರ್ವ"ದಂತಹ ಕಾದಂಬರಿ ಬರುವುದೂ ಅಸಾಧ್ಯವಾಗಬಹುದು. 'ಪರ್ವ' ಕೂಡ ವ್ಯಾಸ ಭಾರತದ 'ಓದು'ಗಳನ್ನು ಒಡೆದು ಭೈರಪ್ಪನವರಿಗೆ ಹೊಂದುವ ಸೈದ್ಧಾಂತಿಕ ರೀತ್ಯಾ ಬರೆದಿರುವ ಕಾದಂಬರಿ ಎನ್ನುವ ಅರಿವಿದ್ದರೆ ಸಾಕು.

**ಕೆ. ಸುಂದರ ರಾಜ್**
ನಂ. ೩೨೭, 'ಕೃಷ್ಣ', ೪ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ
ಆವಲಹಳ್ಳಿ ಬಿಡಿಎ ಬಡಾವಣೆ, ಗಿರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫






### ಹಾನಿ

ಹತ್ತಿಸಿ ಕೋಮು ಗಲಭೆ
ಸರಿದರು ಪರದೆ ಹಿಂದೆ
ರಾಜಕಾರಣಿಗಳು.
ಉರಿಯಿತು
ಧರ್ಮದ ದಳ್ಳುರಿ.
ಸಾವು ನೋವಾಯ್ತು
ಅಮಾಯಕರದು,
ಪ್ರಾಣಹಾನಿ ಆಗಲಿಲ್ಲ
ಯಾವ
ರಾಜಕಾರಣಿಯದೂ.

**ದ್ವಾರನಕುಂಟೆ ಪಾತಣ್ಣ**
ನಾಗಸಂದ್ರ ಅಂಚೆ
ಬೆಂಗಳೂರು – ೭೩



ಡಾ|| ಸಾ. ಶಿ. ಮರುಳಯ್ಯನವರು ಉತ್ತಮ ಬೋಧಕರಾಗಿ ಖ್ಯಾತಿವೆತ್ತವರು. ಇವರು ರಾಜ್ಯದ ವಿವಿಧ ಸರ್ಕಾರಿ ಕಾಲೇಜುಗಳಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ ಮಾದರಿ ಸೇವೆಗೈದಿದ್ದಾರೆ. ಬೋಧನೆ ವೃತ್ತಿಯ ಜೊತೆ ಜೊತೆಗೆ ಸಾಹಿತ್ಯವೆಂಬ ಗೀಳನ್ನು ಅಂಟಿಸಿಕೊಂಡು ಡಾ|| ಸಾ. ಶಿ. ಮರುಳಯ್ಯನವರು 1989-90ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾದರು. ನಂತರ 1995 ಜೂನ್‌ನಲ್ಲಿ ಅಧ್ಯಕ್ಷ ಹುದ್ದೆಗೇರಿ 1998ರವರೆಗೆ ದಕ್ಷತೆಯಿಂದ ನಾಡು ನುಡಿಯ ಹಿತಕ್ಕಾಗಿ ಶ್ರಮಿಸಿದರು.

# ಕನ್ನಡದ ಕಾಯಕಯೋಗಿ ಡಾ|| ಸಾ. ಶಿ. ಮರುಳಯ್ಯ

**ಯಾ**ವ ಪದವಿ, ಪ್ರಶಸ್ತಿಗಳ ಹಿಂದರಸಿ ಹೋಗದೆ ಕನ್ನಡ ಸಾಹಿತ್ಯ ರಚನೆಯಲ್ಲಿ ನಿಷ್ಣಾತರಾಗಿ ಉತ್ಕೃಷ್ಟ ಕೃತಿ ರತ್ನಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ನೀಡುತ್ತಾ, ಕಳೆದ ಆರೇಳು ದಶಕಗಳಿಂದ ಕಾಯಾ ವಾಚಾ ಮನಸಾ ಸಮರ್ಪಿಸಿಕೊಂಡು ಕಾಯಕಯೋಗಿಯಂತೆ ಮಾನವೀಯ ನೆಲೆಯಲ್ಲಿ ಕೃಷಿಗೈದ ಸಾಸಲು ಶಿವರುದ್ರಯ್ಯ ಮರುಳಯ್ಯ ನಾಡಿನ ಪ್ರಮುಖ ಲೇಖಕರಲ್ಲೊಬ್ಬರು.

ಹಿರಿಯ-ಕಿರಿಯರೆಂಬ ಭೇದಭಾವವಿಲ್ಲದೆ ಎಲ್ಲರನ್ನೂ ಪ್ರೀತಿಯಿಂದ ಮಾತನಾಡಿಸುತ್ತಾ ಸಾಹಿತ್ಯಿಕ ಕಂಪನ್ನು ಸೂಸುತಿದ್ದ ಹಿರಿಯ ಚೇತನ ಸಾ. ಶಿ. ಮ. ಅವರು. ಹತ್ತು ವರ್ಷಗಳಿಂದಲೂ ಅವರೊಂದಿಗೆ ನನಗೆ ನಿಕಟ ಸಂಪರ್ಕ, ಆತ್ಮೀಯತೆ ಇತ್ತು. ನನ್ನ ಪ್ರತಿಯೊಂದು ಕೃತಿಗಳನ್ನೂ ಅವರಿಗೆ ಕಳುಹಿಸಿ ಕೊಡುತ್ತಿದ್ದೆ. ಪ್ರತಿಯೊಂದು ಕೃತಿ ಕಳುಹಿಸಿದಾಗಲೂ ಫೋನಾಯಿಸಿ, ಇಲ್ಲವೇ ಪತ್ರ ಮುಖೇನ ತಮ್ಮ ಅನಿಸಿಕೆಗಳನ್ನು ತಿಳಿಸುತ್ತಾ ಸಲಹೆಗಳನ್ನು ನೀಡುತ್ತಿದ್ದರು. ಇತ್ತೀಚೆಗೆ ಬಂದ ನನ್ನ 'ವಚನ ಮಾಣಿಕ್ಯ' ಕೃತಿಯನ್ನು ಬಹಳಷ್ಟು ಮೆಚ್ಚಿಕೊಂಡು ಮಾತನಾಡಿದ್ದಲ್ಲದೆ, ಸುಮಾರು ಐದು ಪುಟಗಳಷ್ಟು ವಿಮರ್ಶೆ ಬರೆದು ಕಳುಹಿಸಿದ್ದರು. ಅವರಿಂದ ನಾನು ಬಹಳಷ್ಟು ಕಲಿತಿದ್ದೇನೆ. ಆದ್ಯ ಹಾಗೂ ಆಧುನಿಕ ವಚನ ಸಾಹಿತ್ಯದಲ್ಲಿ ಸಾಕಷ್ಟು ಕೆಲಸ ಮಾಡಿದ ಸಾಹಿತಿ ಡಾ|| ಸಾ. ಶಿ. ಮ. ಅವರು ಎಂದರೆ ಅತಿಶಯೋಕ್ತಿಯಾಗಲಾರದು. ಕನ್ನಡ ಸಾಹಿತ್ಯ ಲೋಕ ಇಂದು ಅಮೂಲ್ಯ ರತ್ನವೊಂದನ್ನು ಕಳೆದುಕೊಂಡಂತಾಗಿದೆ. ಸಾ. ಶಿ. ಮ. ಅವರು ಭೌತಿಕವಾಗಿ ನಮ್ಮೊಂದಿಗಿಲ್ಲದಿದ್ದರೂ ಬೌದ್ಧಿಕವಾಗಿ ಸದಾ ಕನ್ನಡಿಗರ ಹೃದಯದಲ್ಲಿರುತ್ತಾರೆ.

ಸಾ. ಶಿ. ಮರುಳಯ್ಯನವರು ಕ್ರಿ. ಶ. ೧೯೩೧ ಜನವರಿ, ೨೮ರಂದು ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಸಾಸಲು ಗ್ರಾಮದ ಶ್ರೀ ಶಿವರುದ್ರಯ್ಯ ಮತ್ತು ಶ್ರೀಮತಿ ಸಿದ್ಧಮ್ಮ ದಂಪತಿಗಳ ಮಗನಾಗಿ ಜನಿಸಿದರು.

ಶೆಟ್ಟಿಕೆರೆಯಲ್ಲಿ ಮಾಧ್ಯಮಿಕ ಶಿಕ್ಷಣ, ತಿಪಟೂರಿನಲ್ಲಿ ಪ್ರೌಢಶಿಕ್ಷಣ, ಚಿತ್ರದುರ್ಗದಲ್ಲಿ ಕಾಲೇಜು ಶಿಕ್ಷಣ ಮುಗಿಸಿದ ಇವರು ಆರ್ಥಿಕ ದುಸ್ಥಿತಿಯಿಂದ ಮುಂದೆ ಓದಲಾಗದೆ ಒಬ್ಬ ಮ್ಯಾಂಗನೀಸ್ ಗಣಿಯ ಕಂಟ್ರಾಕ್ಟರ್ ಬಳಿ ಗುಮಾಸ್ತ ಹುದ್ದೆಗೆ ಸೇರಿ, ಬಂದ ಪಗಾರವನ್ನು ಸಂಗ್ರಹಿಸಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸ್ನಾತಕೋತ್ತರ ಪದವಿಗೆ ಸೇರಿಕೊಂಡರು. ಅಲ್ಲಿ ಡಿ.ಎಲ್.ಎನ್., ದೇಜಗೌ, ತ. ಸು. ಶಾಮರಾಯರು, ಎಸ್. ವಿ. ರಂಗಣ್ಣ, ಎಸ್. ವಿ. ಪರಮೇಶ್ವರ ಭಟ್ಟರು ಮುಂತಾದ ವಿದ್ವಾಂಸರ ಮಾರ್ಗದರ್ಶನ ದೊರೆತರೂ ಓದನ್ನು ಪೂರ್ಣ ಮುಗಿಸಲಾಗದೆ ಪುನಃ ಚಾಮರಾಜನಗರ ಕಾಲೇಜಿನಲ್ಲಿ ಅರೆಕಾಲಿಕ ಉಪಾಧ್ಯಾಯ ವೃತ್ತಿ ಆರಂಭಿಸಿ, ವಿದ್ಯಾಭ್ಯಾಸ ಮುಂದುವರಿಸಿ ೧೯೫೬ರಲ್ಲಿ ಎಂ.ಎ ಪದವಿ ಪಡೆದರು. ನಂತರ ಬೋಧನೆ ವೃತ್ತಿ ಆರಂಭಿಸಿದ ಇವರು ತುಮಕೂರು, ದಾವಣಗೆರೆ, ಚಿತ್ರದುರ್ಗ, ಶಿವಮೊಗ್ಗದ ಕಾಲೇಜುಗಳಲ್ಲಿ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸಿದರು. ನಂತರ ಬೆಂಗಳೂರಿಗೆ ವರ್ಗಾವಣೆಯಾಗಿ ಅಲ್ಲಿಯೂ ಆದರ್ಶವಾಗಿಯೇ ಬದುಕು ಕಟ್ಟಿಕೊಂಡರು. ಮುಂದೆ ಬಡ್ತಿ ಹೊಂದಿ ತುಮಕೂರು, ನಂತರ ಚನ್ನಪಟ್ಟಣದಲ್ಲಿ ಪ್ರಾಂಶುಪಾಲರಾಗಿ ದಕ್ಷತೆಯಿಂದ ಕಾರ್ಯ ನಿರ್ವಹಿಸಿದರು. ಅಲ್ಲಿಂದ ಮಂಗಳೂರಿಗೆ ವರ್ಗವಾಗಿ ರಾಜ್ಯ ಭಾಷಾ ಆಯೋಗದ ಸದಸ್ಯರಾಗಿ ನೇಮಕಗೊಂಡು ಬೆಂಗಳೂರಿಗೆ ಬಂದರು.

೧೯೮೧ರಲ್ಲಿ ಇವರು ಬರೆದ 'ಕೆಳದಿಯ ಅರಸರು ಮತ್ತು ಕನ್ನಡ ಸಾಹಿತ್ಯ' ಎಂಬ ಮಹಾ ಪ್ರಬಂಧಕ್ಕೆ ಕರ್ನಾಟಕ ವಿಶ್ವವಿದ್ಯಾಲಯವು ಪಿಎಚ್‌ಡಿ ಪದವಿ ನೀಡಿದೆ.

ಡಾ|| ಸಾ. ಶಿ. ಮರುಳಯ್ಯನವರು ಉತ್ತಮ ಬೋಧಕರಾಗಿ ಖ್ಯಾತಿವೆತ್ತವರು. ಇವರು ರಾಜ್ಯದ ವಿವಿಧ ಸರ್ಕಾರಿ ಕಾಲೇಜುಗಳಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ ಮಾದರಿ ಸೇವೆಗೈದಿದ್ದಾರೆ.

ಬೋಧನೆ ವೃತ್ತಿಯ ಜೊತೆ ಜೊತೆಗೆ ಸಾಹಿತ್ಯವೆಂಬ ಗೀಳನ್ನು ಅಂಟಿಸಿಕೊಂಡು ಡಾ|| ಸಾ. ಶಿ. ಮರುಳಯ್ಯನವರು ೧೯೮೯-೯೦ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾದರು. ನಂತರ ೧೯೯೫ ಜೂನ್‌ನಲ್ಲಿ ಅಧ್ಯಕ್ಷ ಹುದ್ದೆಗೇರಿ ೧೯೯೮ರವರೆಗೆ ದಕ್ಷತೆಯಿಂದ ನಾಡು ನುಡಿಯ ಹಿತಕ್ಕಾಗಿ ಶ್ರಮಿಸಿದರು.

ಹಲವಾರು ಗ್ರಂಥಗಳ ಸಂಪಾದನೆ, ಕಾವ್ಯ, ಕಾದಂಬರಿ ವಿಮರ್ಶಾ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದ ಇವರು ಸಾಕಷ್ಟು ಕೃತಿಗಳನ್ನು ಕನ್ನಡ ಸಾರಸ್ವತ ಕಣಜಕ್ಕೆ ನೀಡಿದ್ದಾರೆ. ಬನವಾಸಿ,

**ಕೊಟ್ರೇಶ್ ಎಸ್. ಉಪ್ಪಾರ್**

ಬಾದಾಮಿ, ಉಡುಪಿ ಮುಂತಾದವುಗಳ ಕುರಿತ ಅತ್ಯುತ್ತಮ ನೃತ್ಯ ರೂಪಕಗಳನ್ನು ರಚಿಸಿದ್ದಾರೆ. ಇವರ 'ಸ್ನೋ ವೈಟ್' ನೃತ್ಯ ರೂಪಕ ಪ್ರಖ್ಯಾತವಾಯಿತು.

ಇವರು ರಚಿಸಿರುವ ಕಾವ್ಯ ಕೃತಿಗಳೆಂದರೆ ಬೃಂದಾವನ ಲೀಲೆ, ವಿಪರ್ಯಾಸ, ಶಿವತಾಂಡವ, ರಾಸಲೀಲೆ ಮತ್ತು ಕೆಂಗನಕಲ್ಲು. ಇವುಗಳಲ್ಲಿ ಕೆಂಗನಕಲ್ಲು ಎಂಬ ಕವನ ಸಂಕಲನ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದಿದೆ. ಇವರ 'ಬಾರೋ ಮೈಲಾರಕ್ಕೆ' ಸಂಕಲನದಲ್ಲಿನ ಗೀತೆಗಳನ್ನು ವರನಟ ಡಾ॥ ರಾಜಕುಮಾರ್ ಹಾಡಿದ್ದಾರೆ.

ಮನಿಷಾ, ಪುರುಷ ಸಿಂಹ, ಹೇಮಕೂಟ ಸಾಮರಸ್ಯದ ಶಿಲ್ಪಿ ಮುಂತಾದ ಕಾದಂಬರಿಗಳು; ವಿಜಯವಾತಾಪಿ ಎರಡು ನಾಟಕಗಳು, ಮರೀಬೇಡಿ – ಮುಂತಾದ ನಾಟಕಗಳನ್ನು ರಚಿಸಿದ್ದಾರೆ. 'ನೆಲದ ಸೊಗಡು' ಇವರ ಪ್ರಖ್ಯಾತ ಕಥಾ ಸಂಕಲನ.

'ಬಾಸನ ಮಕ್ಕಳು', ಮಾಸ್ತಿಯವರ ಕಾವ್ಯ ಸಮೀಕ್ಷೆ, ಅಭಿವ್ಯಕ್ತ, 'ಅನುಶೀಲನ' ಮುಂತಾದ ವಿಮರ್ಶಾ ಕೃತಿಗಳು ಅರ್ಥಪೂರ್ಣವಾಗಿವೆ. ಇವುಗಳಲ್ಲಿ 'ಬಾಸನ ಮಕ್ಕಳು' ಎಂಬ ವಿಮರ್ಶಾ ಕೃತಿಗೆ ದೇವರಾಜ ಬಹದ್ದೂರ್ ಪ್ರಶಸ್ತಿ ಲಭಿಸಿದೆ.

'ಭಾರತೀಯ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರು' ಇವರು ರಚಿಸಿರುವ ಬೃಹತ್ ಕೃತಿ. ಸುಮಾರು ೬೩೦ ಪುಟಗಳ ಈ ಕೃತಿ, ೧೯೬೫ರಿಂದ ೨೦೦೨ರವರೆಗಿನ ಭಾರತೀಯ ಜ್ಞಾನಪೀಠ ಪುರಸ್ಕೃತರ ಸಕಲ ಮಾಹಿತಿಗಳನ್ನು ತಿಳಿಸಿ ಕೊಡುವುದರ ಜೊತೆಗೆ, ಆ ಸಂಸ್ಥೆಯ ಹಿನ್ನೆಲೆಯ ಮೇಲೆ ಬೆಳಕು ಚೆಲ್ಲುತ್ತದೆ. ಈ ಕೃತಿ ಕುರಿತು ೧೯೯೪ರಲ್ಲಿ ಭಾರತೀಯ ಜ್ಞಾನಪೀಠ ಪ್ರಶಸ್ತಿ ಪಡೆದ ಡಾ॥ ಯು. ಆರ್. ಅನಂತಮೂರ್ತಿಯವರು ಬೆನ್ನುಡಿಯಲ್ಲಿ ಕೃತಿ ಕುರಿತು ಹೀಗೆ ಹೇಳಿದ್ದಾರೆ : "ಗೆಳೆಯರಾದ ಡಾ॥ ಸಾ. ಶಿ. ಮರುಳಯ್ಯನವರು ಭಾರತದ ಜ್ಞಾನಪೀಠ ಪ್ರಶಸ್ತಿ ಪಡೆದವರ ಬಗ್ಗೆ ತರುತ್ತಿರುವ ಈ ಪುಸ್ತಕ ಅಗಾಧವಾದ ಪರಿಶ್ರಮ ಮತ್ತು ಪ್ರೀತಿಯಿಂದ ಹೊರಬಂದಿದೆ. ಎಲ್ಲ ಭಾಷೆಗಳ ಪ್ರಶಸ್ತಿ ವಿಜೇತರು ಆಡಿರುವ ಮಾತುಗಳನ್ನು ಓದುತ್ತ ಹೋದರೆ, ಅವರ ಬಗ್ಗೆ ಪ್ರಶಸ್ತಿಯ ಸಂದರ್ಭದಲ್ಲಿ ಮಾಡಿರುವ ವ್ಯಾಖ್ಯಾನವನ್ನು ಗಮನಿಸಿದರೆ ಇಡೀ ಭಾರತೀಯ ಸಾಹಿತ್ಯದ ಒಂದು ರಸವತ್ತಾದ, ಸಂಕ್ಷಿಪ್ತವಾದ ಚರಿತ್ರೆ ದೊರೆತಂತೆ ಆಗುತ್ತದೆ. ಯಾವ ವಿವೇಕಶಾಲಿಯಾದ ಓದುಗನೂ ಆಯಾ ಸಾಹಿತ್ಯದ ದೊಡ್ಡ ಲೇಖಕರು ಈ ಪ್ರಶಸ್ತಿ ವಿಜೇತರಷ್ಟೇ ಎಂದು ತಿಳಿಯಲಾರರು. ಕನ್ನಡದಲ್ಲಂತೂ ಪ್ರಶಸ್ತಿ ವಿಜೇತನಾದ ನಾನೇ ಹೇಳಬಹುದಾದ ಸತ್ಯದ ಮಾತೊಂದಿದೆ. ನನಗಿಂತ ಹಿರಿಯರಲ್ಲೂ, ನನ್ನ ಸಮಕಾಲೀನರಲ್ಲೂ ಈ ಪ್ರಶಸ್ತಿಗೆ ಅರ್ಹರಾದ, ನಾನು ಬಹುವಾಗಿ ಮೆಚ್ಚುವ, ನನಗೆ ಬರೆಯುವುದನ್ನು ಕಲಿಸಿರುವ ದೊಡ್ಡ ಲೇಖಕರು ಇದ್ದಾರೆ. ಈ ವ್ಯಾಪಕತೆಯನ್ನು ಪ್ರತಿ ಸಾಹಿತ್ಯದಲ್ಲೂ ಕಲ್ಪಿಸಿಕೊಂಡು ಓದಿದಲ್ಲಿ ಡಾ॥ ಮರುಳಯ್ಯನವರ ಪರಿಶ್ರಮದಿಂದಲೂ, ಪ್ರೀತಿಯಿಂದಲೂ ಹೊಮ್ಮಿರುವ ಈ ಕೃತಿ ತೌಲನಿಕ ಸಾಹಿತ್ಯ ವಿಮರ್ಶೆಗೆ ಅಗತ್ಯವಾದ ಗ್ರಂಥವಾಗಿ ಕಾಣುತ್ತದೆ. ಭಾರತದ ಸಾಹಿತ್ಯದ ಅಗಾಧತೆಗೂ, ವೈವಿಧ್ಯಕ್ಕೂ ಕನ್ನಡಿಯಾಗುತ್ತದೆ."

ಈ ಕೃತಿ ರಚನೆಯಲ್ಲಿ ಡಾ॥ ಸಾ. ಶಿ. ಮರುಳಯ್ಯ ಅವರು ವಹಿಸಿದ ಪರಿಶ್ರಮ ಅಗಾಧವಾದದ್ದು. ನನಗೆ ಮೊದಲು ಇವರ ಕೃತಿಗಳಲ್ಲಿ ಓದಲು ದೊರಕಿದ್ದೇ ಈ ಕೃತಿ. ತದನಂತರವಷ್ಟೆ ಇವರ ಇತರ ಕೃತಿಗಳೆಡೆ ನನ್ನ ಗಮನ ಹರಿದದ್ದು. ಇವರ ಭಾರತೀಯ ಜ್ಞಾನಪೀಠ ಪುರಸ್ಕೃತಿಯ ಕೃತಿಯನ್ನು ಸುಮಾರು ನಾಲ್ಕೈದು ಬಾರಿ ತಿರುವಿಹಾಕಿದ್ದೇನೆ. ಇನ್ನೂ ಓದಬೇಕೆನಿಸುತ್ತದೆ. ಅಷ್ಟೊಂದು ಅಗಾಧ ಜ್ಞಾನ ತುಂಬಿರುವ ಕೃತಿ ರತ್ನವಿದು. ಪ್ರತಿಯೊಬ್ಬ ಸಾಹಿತಿಯೂ ಓದಲೇಬೇಕಾದ ಕೃತಿ ಇದು.

ಇವರ ಅನುಪಮ ಸಾಹಿತ್ಯ ಸೇವೆಗೆ ಹಲವಾರು ಪ್ರಶಸ್ತಿ ಪುರಸ್ಕಾರಗಳು ಸಂದಿವೆ. ಅವುಗಳಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಎಚ್. ನರಸಿಂಹಯ್ಯ ಪ್ರಶಸ್ತಿ ಪ್ರಮುಖವಾದುವುಗಳು. ಇವರ ಹಿತೈಷಿಗಳು ಹಾಗೂ ಸಾಹಿತ್ಯಾಭಿಮಾನಿಗಳು ಇವರಿಗೆ 'ಇಷಾಂಶು ಮತ್ತು ಅಭಿಜ್ಞ' ಎಂಬ ಅಭಿನಂದನಾ ಗ್ರಂಥವನ್ನು ಸಮರ್ಪಿಸಿದ್ದಾರೆ. ಪ್ರಸ್ತುತ ಬೆಂಗಳೂರಿನ ಹಂಪಿನಗರದಲ್ಲಿರುವ 'ರಾಗಿಣಿ' ನಿಲಯದಲ್ಲಿ ವೃತ್ತಿಯಿಂದ ನಿವೃತ್ತಿ ಜೀವನ ಸಾಗಿಸುತ್ತಿದ್ದ ಇವರು ೨೦೧೬ ಫೆಬ್ರವರಿ ೫ ಶುಕ್ರವಾರ ಬೆಳಗಿನ ಜಾವ ನಿಧರಾದರು. ೮೫ರ ವಯೋಮಾನದ ಈ ಹಿರಿಯ ದಿಗ್ಗಜ ಸಾಹಿತಿ 'ಕನ್ನಡವೇ ನಮ್ಮ ಶಕ್ತಿ, ಕನ್ನಡದಿಂದಲೇ ಮುಕ್ತಿ, ಕನ್ನಡವೇ ನಮ್ಮ ನಾಡಿ, ನಮ್ಮ ಹೃದಯ ಧಮನಿ ದುಡಿ' ಎಂದು ನಿತ್ಯ ಪಲ್ಲವಿಸುವಂತೆ ಪ್ರೇರೇಪಿಸುತ್ತ, ಕಿರಿಯರಿಗೆ ಮಾರ್ಗ ದೀವಿಗೆಯಾಗಿ, ಸಮಕಾಲೀನರಿಗೆ ಆದರ್ಶಮಯವಾಗಿ, ಹಿರಿಯರಿಗೆ ಕೃತಜ್ಞಾ ಚೇತನದ ಚಿಲುಮೆಯಾಗಿರುವ ಇವರು ಕನ್ನಡ ಸಾಹಿತ್ಯ ಲೋಕದಲ್ಲಿ ಅಜಾತಶತ್ರುವಾಗಿ ನಿಲ್ಲುತ್ತಾರೆ.

**ಕೊಟ್ರೇಶ್ ಎಸ್. ಉಪ್ಪಾರ್**
ಆಲೂರು, ತೇಜೂರು ರಸ್ತೆ, ಶಾಂತಿನಗರ
ಹಾಸನ – ೫೭೩ ೨೦೧

## ಅವಿವೇಕ

ಮಳೆ
ಆಲಿಕಲ್ಲು
ಸುರಿಸಿದರೂ
ಶುಭ್ರವಾಯಿತು
ನೀರು !

ಮನುಷ್ಯ
ಸಣ್ಣಕಲ್ಲು
ಒಗೆದರೂ
ರಾಡಿಯಾಯಿತು
ನೀರು !

**ಅಂಬಾದಾಸ ವಡೆ**
ಕಪಡಾ ಬಜಾರ್
ಬಾಗಲಕೋಟೆ – ೫೮೭೧೦೧

## ಸಿ. ವಿ. ರಾಜಗೋಪಾಲ ಪುರಸ್ಕಾರ

ಶ್ರೀ ಸಿ. ವಿ. ರಾಜಗೋಪಾಲ ಅವರು ಕನ್ನಡದ ಪತ್ರಕರ್ತರಾಗಿ ವಿಶೇಷ ಖ್ಯಾತಿಗಳಿಸಿದ್ದವರು. 'ಪ್ರಜಾವಾಣಿ'ಯಲ್ಲಿ ಅನೇಕ ವರ್ಷಗಳ ಕಾಲ ಸೇವೆ ಸಲ್ಲಿಸಿದ್ದ ಮಾನ್ಯ ರಾಜಗೋಪಾಲ್ ನಿವೃತ್ತಿಯ ನಂತರ "ಕೆಂಬಾವುಟ" ಪತ್ರಿಕೆಗೂ ಬರೆಯುತ್ತಿದ್ದವರು. ಅಂತೆಯೇ ಬೇರೆ ಕೆಲವು ಪತ್ರಿಕೆಗಳ ಅಂಕಣಕಾರರಾಗಿ ವಿಶಿಷ್ಟ ವಿಶ್ಲೇಷಣೆಗಳಿಗೆ ಹೆಸರಾಗಿದ್ದವರು. ಅವರ ಸ್ಮರಣಾರ್ಥ ಚಿಣ್ಯ ಕುಟುಂಬದವರು 'ಹೊಸತು' ಪತ್ರಿಕೆಯ ಎರಡು ಉತ್ತಮ ಲೇಖನಗಳಿಗೆ ತಲಾ ರೂ. ೫,೦೦೦/– ಪುರಸ್ಕಾರ ೨೦೧೩–೧೪ರಿಂದ ನೀಡುತ್ತಿದ್ದಾರೆ. ಪ್ರತಿ ವರ್ಷ, ಹೊಸತು ಪತ್ರಿಕೆಯ ಆಗಸ್ಟ್ ತಿಂಗಳ ಸಂಚಿಕೆಯಿಂದ ಮುಂದಿನ ಜುಲೈವರೆಗಿನ ಸಂಚಿಕೆಗಳಲ್ಲಿ ಪ್ರಕಟವಾಗುವ ಲೇಖನಗಳನ್ನು ಈ ಪುರಸ್ಕಾರಕ್ಕೆ ಪರಿಗಣಿಸಲಾಗುತ್ತದೆ. ೨೦೧೪–೨೦೧೫ರ ಬಹುಮಾನಗಳನ್ನು **ಡಾ॥ ಎಚ್. ಎಸ್. ಅನುಪಮಾ** ಮತ್ತು **ಶ್ರೀ ಕೆ. ಪಿ. ಸ್ವಾಮಿ** ಅವರಿಗೆ ನೀಡಲಾಗಿದೆ. ಪುರಸ್ಕರಿಸಿದ ಚಿಣ್ಯ ಕುಟುಂಬದವರಿಗೂ, ಪುರಸ್ಕೃತರಿಗೂ 'ಹೊಸತು' ಅಭಿನಂದಿಸುತ್ತದೆ. – *ಸಂ.*

# ಮಕ್ಕಳ ಸಾಹಿತ್ಯ ಒಂದು ಚಿಂತನೆ

**ಕೆ. ಶಿವಲಿಂಗಪ್ಪ ಹಂದಿಹಾಳು**

ಮಕ್ಕಳ ಭಾವ ಪ್ರಪಂಚವನ್ನು ಅರಳಿಸುವ ಸಾಹಿತ್ಯವೇ ಮಕ್ಕಳ ಸಾಹಿತ್ಯ. ಅದು ಮಕ್ಕಳೇ ಮಕ್ಕಳಿಗಾಗಿ ಬರೆದದ್ದೂ ಆಗಿರಬಹುದು, ಹಿರಿಯರು ಮಕ್ಕಳಿಗಾಗಿ ಬರೆದದ್ದೂ ಆಗಿರಬಹುದು, ಲಿಖಿತ ರೂಪದಲ್ಲೂ ಇರಬಹುದು, ಮೌಖಿಕ ಸ್ವರೂಪದ್ದೂ ಆಗಿರಬಹುದು. ಮಕ್ಕಳ ಮನೋಲೋಕಕ್ಕೆ ಗ್ರಹಿಸಲು ಸಾಧ್ಯವಾಗುವ ವಸ್ತು ವಿವರಗಳಿಂದ ತೊಡಗಿ ಅವರ ಅರಿವು, ಕಲ್ಪನಾ ಶಕ್ತಿಯನ್ನು ವಿಸ್ತರಿಸುತ್ತಾ ಹೋಗುವ ಬಗೆಯ ಸಾಹಿತ್ಯ ಪ್ರಕಾರವನ್ನು ಮಕ್ಕಳ ಸಾಹಿತ್ಯ ಎಂದು ಕರೆಯಬಹುದು.

**ಕ**ನ್ನಡದಲ್ಲಿ ಮಕ್ಕಳ ಸಾಹಿತ್ಯ ನವೋದಯ ಕಾಲದಲ್ಲಿಯೇ ಆರಂಭವಾಯಿತು. ಕುವೆಂಪು, ಪಂಜೆ ಮಂಗೇಶರಾಯರು, ಜಿ. ಪಿ. ರಾಜರತ್ನಂ, ಹೊಯ್ಸಳ, ಕಾರಂತರಂತಹ ಹಿರಿಯರು ಮಕ್ಕಳ ಸಾಹಿತ್ಯ ರಚನೆಗೆ ತೊಡಗಿ ಕನ್ನಡದಲ್ಲಿ ಹಿರಿಯರ ಸಾಹಿತ್ಯದ ಜೊತೆ ಜೊತೆಗೆ ಮಕ್ಕಳ ಸಾಹಿತ್ಯದ ಆರಂಭಕ್ಕೆ ನಾಂದಿ ಹಾಡಿದರು.

ಬರಹಗಾರ ಯಾವತ್ತೂ ಮಕ್ಕಳನ್ನು ನೆಚ್ಚಿ ಬರೆಯಬೇಕೇ ಹೊರತು ಪ್ರಕಾಶಕನನ್ನಲ್ಲ ಎಂದು ಬಲವಾಗಿ ಪ್ರತಿಪಾದಿಸುವ ಸ. ರಘುನಾಥರು ವೃತ್ತಿಯಿಂದ ಪ್ರಾಥಮಿಕ ಶಾಲಾ ಶಿಕ್ಷಕರಾಗಿ, ಮಕ್ಕಳು ಒಪ್ಪಿದ ಸಾಹಿತ್ಯವನ್ನು ಮಾತ್ರ ಇದುವರೆಗೆ ಪ್ರಕಟಿಸುತ್ತಾ ಬಂದಿರುವ ಇವರು ಹೇಳುವುದು ಇದು:

"ಮಕ್ಕಳ ಸಾಹಿತ್ಯ ರಚನೆಯನ್ನು ಹೇಗೋ ಹಾಗೆ ಮಾಡಿಬಿಡಬಹುದು. ಆದರೆ ಮಕ್ಕಳನ್ನು ಮುಟ್ಟುವ ಸಾಹಿತ್ಯ ರಚನೆ ಕಷ್ಟ. ಹಿರಿಯರು ಮಕ್ಕಳ ಸಾಹಿತ್ಯ ರಚನೆ ಮಾಡುವ ಮಾತು ಬಂದಾಗ ಮಕ್ಕಳ ಮಟ್ಟಕ್ಕೆ ಇಳಿದು ಬರೆಯಬೇಕೆಂಬ ಮಾತು ಬರುತ್ತಿರುತ್ತದೆ. ಅದನ್ನು ಮಕ್ಕಳ ಮಟ್ಟಕ್ಕೆ ಏರುವುದೆಂದು ತಿದ್ದಿಕೊಳ್ಳಬೇಕು. ಕಾರಣ ನಮಗೆಲ್ಲರಿಗೂ ನಮ್ಮದೇ ಮಿತಿಗಳಿವೆ. ಆದರೆ ಮಕ್ಕಳ ಕಲ್ಪನಾ ಜಗತ್ತಿಗೆ ವ್ಯಾಪ್ತಿಯಿಲ್ಲ. ಅಂತಹ ಅನಂತ ಜಗತ್ತಿಗೆ ಪ್ರವೇಶಿಸುವುದು ಏರುವ ಕ್ರಿಯೆಯೇ ಹೊರತು ಇಳಿಯುವ ಕ್ರಿಯೆಯಲ್ಲ. ಲೇಖಕ ಪ್ರಕಾಶಕನನ್ನು ಆರಿಸಿಕೊಳ್ಳುವ ಮುನ್ನ ಮಕ್ಕಳನ್ನು ಆರಿಸಿಕೊಂಡರೆ ಅದು ಅವರನ್ನು ಬಹು ಬೇಗ ಮುಟ್ಟುವುದರಿಂದ ಅದರ ರಚನೆ ಸುಲಭ. ಹಾಗೆ ಆಯ್ದುಕೊಂಡ ಕಥೆಯನ್ನು ಕೇಳಿಸಿಕೊಂಡ ಮಗುವನ್ನು ಬಹಳ ದೊಡ್ಡ ಸಂವಹನ ಮಾಧ್ಯಮ ಎಂದು ಒಪ್ಪಿಕೊಳ್ಳಬೇಕು."

"ಮಕ್ಕಳ ಸಾಹಿತ್ಯ ಶ್ರವಣ ಸಂಸ್ಕೃತಿಯಿಂದ ಚಕ್ಷು (ಕಲ್ಪನೆಯಿಂದ ವಾಸ್ತವದೆಡೆಗೆ) ಸಂಸ್ಕೃತಿಯೆಡೆಗೆ ಕರೆದೊಯ್ಯುವಂತಿರಬೇಕು. ಶ್ರವಣ ಸಂಸ್ಕೃತಿಯಲ್ಲಿ ಹೇಳುವವರ, ಕೇಳುವ ಮಕ್ಕಳ ರಕ್ತ, ಮಾಂಸ, ಹೃದಯಗಳ ಸಂಬಂಧ ಬೆಸೆಯುತ್ತವೆ. ಇಂತಹ ಸಾಹಿತ್ಯ ಅವರು ಜೀರ್ಣಿಸಿಕೊಳ್ಳುವಷ್ಟು ಶಬ್ದಗಳಿಂದ ಕೂಡಿರಬೇಕು. ಇಂದು ಕಲ್ಪನೆಯ ಮತ್ತು ವಾಸ್ತವದ ಬರಹಗಳ ವಿಚಾರದ ಕುರಿತು ತುಂಬ ಚರ್ಚೆಯಿದೆ. ಆದರೆ ವಾಸ್ತವ ಕಲ್ಪನೆಯೆಂದು ದೊಡ್ಡವರ ಕಥೆಗಳಲ್ಲಿ ಸುಲಭವಾಗಿ ವಿಭಾಗ ಮಾಡಿಬಿಡಬಹುದು, ಆದರೆ ಮಕ್ಕಳ ಸಾಹಿತ್ಯದಲ್ಲಿ ಎರಡನ್ನೂ ಒಂದುಗೂಡಿಸುವ ಕೆಲಸ ಮಾಡಬೇಕಾಗುತ್ತದೆ. ಉದಾಹರಣೆಗೆ, ಗ್ರಾಮೀಣ ಮತ್ತು ಕಾಲ್ಪನಿಕ ಕಥೆಗಳಲ್ಲೇ ದಿನನಿತ್ಯದ ವಸ್ತು ಸಂಗತಿಗಳನ್ನು ತಂದರೆ ವಾಸ್ತವತೆ ದೊರಕುತ್ತದೆ. ಬಾಲ್ಯದ ವಾಸನೆಯಿಂದ ಹೊರಬರದ ಪ್ರೌಢ ಮಕ್ಕಳಿಗೆ ಸಂಪೂರ್ಣ ವಾಸ್ತವ ರಚನೆಗಳನ್ನು ನೀಡಬಹುದು. ಇದನ್ನೇ ಚಿಕ್ಕಮಕ್ಕಳಿಗೆ ನೀಡಿದರೆ ಅವು ಮಕ್ಕಳ ಗ್ರಹಿಕೆಯಿಂದ ದೂರವಾಗುವ ಸಾಧ್ಯತೆಯಿದೆ. ಲೇಖಕ ಬರೆಯುವಾಗ ಬರಹದ ಪ್ರಶ್ನೆಗಳನ್ನು ನಿರ್ದಿಷ್ಟಪಡಿಸುವುದು, ಅದನ್ನೇ ನಿರೂಪಿಸುವುದು ಅವನ ಕೆಲಸವಲ್ಲ. ಇಂದು ಮಕ್ಕಳ ಸಾಹಿತ್ಯಕ್ಕೆ ಬಹುದೊಡ್ಡ ಸವಾಲೆನಿಸಿರುವುದು ಕಥೆಗಳ ಕುರಿತಾಗಿ ಮೌತ್ ಮೀಡಿಯಾ ಇಲ್ಲದಿರುವುದು. ಇದರಿಂದ ಬರಹ ಹಿಂದಕ್ಕೆ ಸರಿದಿದೆ. ಸಾಹಿತ್ಯಕ್ಕೆ, ಲೇಖಕನಿಗೆ ಮಕ್ಕಳು ಮುಖ್ಯವೇ ಹೊರತು ಅಕಾಡೆಮಿಗಳು, ಲೈಬ್ರರಿಗಳು ಅಲ್ಲವೆನ್ನುವುದನ್ನು ನೆನಪಿಟ್ಟುಕೊಂಡರೆ ಸಾಕು."

ಮಕ್ಕಳ ಸಾಹಿತ್ಯದಲ್ಲಿ ವಾಸ್ತವ ಪ್ರಜ್ಞೆಯನ್ನು ಸದಾ ಜಾಗೃತವಾಗಿರಿಸಿಕೊಂಡು ಬರೆದವರಲ್ಲಿ ಡಾ॥ ನಾ. ಡಿಸೋಜ ಮೊದಲಿಗರು. ಮಕ್ಕಳ ಬರಹ ವರ್ತಮಾನದ ಪ್ರತಿಬಿಂಬವಾಗಬೇಕು. ಮಕ್ಕಳ ವಯೋಮಿತಿಯನ್ನು ಆಧರಿಸಿ ಸಾಹಿತ್ಯ ರಚನೆ ಮಾಡಬೇಕೆಂದು ನುಡಿಯುವ ಅವರು ಇತ್ತೀಚೆಗೆ ಮಕ್ಕಳ ಹದಿನೈದು ಕಿರು ಕಾದಂಬರಿಗಳನ್ನು ಒಳಗೊಂಡ ಸಮಗ್ರ ಸಂಕಲನ ಹೊರತಂದಿದ್ದಾರೆ.

"ಮಕ್ಕಳ ಕೈಗೆ ಎಟುಕುವ ಹಾಗೆ, ಸ್ವೀಕರಿಸುವ ಹಾಗೆ, ಅವರ ವಯೋಮಿತಿಗೆ ಅನುಗುಣವಾಗಿರುವ



ರಚನೆಯನ್ನೇ ಮಕ್ಕಳ ಸಾಹಿತ್ಯವೆಂದು ಕರೆಯಬಹುದು. ಲೇಖಕ ಬರೆಯುವ ಮುನ್ನ ಬಹು ಮುಖ್ಯವಾಗಿ ಮಕ್ಕಳ ವಯೋಭಿನ್ನತೆ ಗುರುತಿಸಿ ಬರೆಯಬೇಕು."

"ಬಹುತೇಕರು ನಾವು ಮಕ್ಕಳ ಸಾಹಿತಿಗಳು ಎಂದೇ ಹೇಳಿಕೊಳ್ಳುತ್ತಾರೆ. ಆದರೆ ಮಕ್ಕಳ ಹಂತಕ್ಕೆ ಹೋಗಿ ಬರೆಯುವುದು ಕಷ್ಟಸಾಧ್ಯ. ನಮ್ಮಲ್ಲಿ ಇಂದು ಅನೇಕ ಹಿರಿಯ ಬರಹಗಾರರಿದ್ದಾರೆ. ಅವರಲ್ಲಿ ಎಚ್.ಎಸ್.ವಿ., ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟರಂಥವರು ಮಾತ್ರ ಮಕ್ಕಳಿಗಾಗಿ ಬರೆಯುತ್ತಿದ್ದಾರೆ. ಉಳಿದವರು ಅಕೆಡೆಮಿಕ್‌ಗೆ ತಮ್ಮನ್ನು ಸೀಮಿತಗೊಳಿಸಿ ಕೊಂಡಿದ್ದಾರೆ. ಎಲ್ಲಿಯವರೆಗೆ ನಾವು ಮಗು ವಾಗುವುದಿಲ್ಲವೋ ಅಲ್ಲಿಯವರೆಗೆ ನಮ್ಮಿಂದ ಮಕ್ಕಳ ಸಾಹಿತ್ಯ ರಚನೆ ಸಾಧ್ಯವಾಗುವುದಿಲ್ಲ."

"ಮಕ್ಕಳ ಸಾಹಿತ್ಯದಲ್ಲಿ ಹೊಸಬರಹಗಳನ್ನು ಸದಾ ಎದುರು ನೋಡುತ್ತಾ, ಅದೇ ಹಳೇ ಹಳೇ ಬರಹದಾಚೆ ಇರುವ ವಾಸ್ತವ ಜಗತ್ತನ್ನು ಮಕ್ಕಳ ಕಥೆ, ಕವಿತೆಗಳಲ್ಲಿ ಕಾಣಬೇಕೆಂದು ಪ್ರಮಾಣ ಮಾಡಿರುವ ಪ್ರತಿನಿಧಿಯಂತೆ ಕಾರ್ಯ ನಿರ್ವಹಿಸುತ್ತಿರುವವರು ಆನಂದ ಪಾಟೀಲ. ಇವರು ಮಕ್ಕಳ ಸಾಹಿತ್ಯದ ಪುನರುಜ್ಜೀವನಕ್ಕೆ ನಾಂದಿ ಹಾಡಿದ ಆದ್ಯರು ಎಂದರೆ ತಪ್ಪಾಗಲಾರದು. ಇವತ್ತಿನ ಬರಹಗಾರರು ಕನ್ನಡವಲ್ಲದೆ ಬೇರೆ ಭಾಷೆ, ದೇಶಗಳಲ್ಲಿ ಆಗಿರುವ ಮಹತ್ವದ್ದನ್ನು ಮಕ್ಕಳಿಗೆ ತಂದಿಡಬೇಕೆಂಬ ಉತ್ಕಟ ಆಸೆಯಿಟ್ಟುಕೊಂಡವರು. ವಿಶಿಷ್ಟವಾದ ಕಥೆ, ಕವಿತೆಗಳ ಜೊತೆಜೊತೆಗೆ ಯಾರೂ ಮೂಸದ ಮಕ್ಕಳ ಸಾಹಿತ್ಯ ವಿಮರ್ಶಾ ಕೆಲಸವನ್ನು ಅತ್ಯಂತ ಗಂಭೀರವಾಗಿ ಸ್ವೀಕರಿಸಿ ಬಾಲಸಾಹಿತ್ಯ ಬಾಲಿಶವಾಗಬಾರದು, ಅದು ಬಲಿಷ್ಠವಾಗಬೇಕೆನ್ನುವ ಅದಮ್ಯ ಆಸೆ ಹೊಂದಿರುವ ಆನಂದ ಪಾಟೀಲರ ಆನಂದದ ಮಾತುಗಳಿಗಿಲ್ಲಿ ಕೊರತೆಯಿಲ್ಲ:

"ಸಾಮಾನ್ಯವಾಗಿ ಮಕ್ಕಳ ಸಾಹಿತ್ಯ ಸುಲಭವಲ್ಲ ಎನ್ನುವ ಮಾತುಗಳನ್ನು ಅನೇಕ ಲೇಖಕರು ವ್ಯಕ್ತಪಡಿಸಿದುದಿದೆ. ಆದರೆ ಅದರೊಂದಿಗೆ ಹಿನ್ನೆಲೆಯಲ್ಲಿ ಅದೊಂದು ಲಘುವಾದ ಸಾಹಿತ್ಯ, ಅದನ್ನ ಬರೆಯುವುದರಿಂದ ಏನನ್ನ ಸಾಧಿಸಿದಂತಾದೀತು ಎನ್ನುವ ಕೀಳರಿಮೆಯ, ಇಲ್ಲವೆ ಅಹಂಭಾವದ ಸಂಗತಿಗಳೂ ಇರಬಹುದಾದ ಗುಮಾನಿ ಎಷ್ಟೋ ಸಲ ಬರುತ್ತದೆ. ನಿಜ, ಒಬ್ಬ ಸಮರ್ಥ ಲೇಖಕನಿಗೆ ತನ್ನ ಅನುಭವದ ಸಾಮಗ್ರಿಯನ್ನು ಏನೆಲ್ಲ ಅಗತ್ಯ ಗಳಿಂದ ವ್ಯಕ್ತಪಡಿಸುವ ತವಕ ಇದ್ದೇ ಇರುತ್ತದೆ. ಅದಕ್ಕೆ ಮಕ್ಕಳ ಸಾಹಿತ್ಯ ತಕ್ಕುದಾದ ಪಾತ್ರೆಯಾಗಲಾರದು ಎನ್ನುವುದೂ ನಿಜವೇ. ಆದರೆ ಮಕ್ಕಳ ಸಾಹಿತ್ಯವನ್ನು ಎಲ್ಲರೂ ಬರೆಯಬೇಕು, ಪ್ರತಿಭಾನ್ವಿತರಾದ ಎಲ್ಲರೂ ಅತ್ತ ಹೊರಳಬೇಕು ಎನ್ನುವುದು ಒಂದು ಬಗೆಯಲ್ಲಿ ಉದಾರವಾದ ಮಾತು ಮಾತ್ರ. ಆ ಕಡೆಗೆ ತುಡಿಯುವ ಸಹಜದ ಮನಸ್ಸುಗಳಿರುತ್ತವೆ, ಅವರಿಂದ ಅದು ಸಾಧ್ಯವಾಗುತ್ತದೆ. ಅಂಥವರಿಗೇ ಅದರ ರಚನೆಯ ಕಷ್ಟ ಸುಖದ ಅರಿವಾಗುವುದು. ಹಾಗಾಗಿ ಸಾರಾ ಸಗಟಾಗಿ ಇದು ಸುಲಭದ್ದು, ಅಲ್ಲದ್ದು ಎಂದು ಹೇಳುವುದು ಕಷ್ಟ. ಇದೊಂದು ನಿಜಕ್ಕೂ ಸೃಜನಶೀಲತೆ ನಳನಳಿಸಬೇಕಾದ ಪ್ರಕ್ರಿಯೆಯೇ, ಹಾಗಾಗಿ ಒಂದಷ್ಟು ಕಷ್ಟದ, ಶ್ರಮದ ಅಗತ್ಯ ಇದ್ದೇ ಇದೆ."

ಮಕ್ಕಳಿಗಾಗಿ ಇಂದು ಬರೆಯುತ್ತಿರುವವರಲ್ಲಿ ಅತ್ಯಂತ ಪ್ರಮುಖ ಹೆಸರು ಎಚ್. ಎಸ್. ವೆಂಕಟೇಶಮೂರ್ತಿ. ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ಕೃಷಿ ಮಾಡಿರುವ ಇವರು ಮಕ್ಕಳಿಗೋಸ್ಕರ ಕಿನ್ನರ ಲೋಕದ ಮ್ಯಾಜಿಕ್ ಬುಕ್ಕನ್ನು ಬರೆದವರು. ರಾಮಾಯಣದಲ್ಲಿ ಬರುವ ಅತ್ಯಂತ ಕಿರಿಯ ಅಳಿಲನ್ನೇ ಹಿರಿದಾಗಿಸಿ ಅಳಿಲು ರಾಮಾಯಣ ನಾಟಕ ಬರೆದವರು. ಅವರ ಅಭಿಪ್ರಾಯದಲ್ಲಿ:

"ಸಾಹಿತ್ಯ ಕೃಷಿಯೊಂದು ವೃದ್ಧರಿಗೂ, ಪ್ರೌಢರಿಗೂ, ಮಕ್ಕಳಿಗೂ, ಎಲ್ಲರಿಗೂ ಸಲ್ಲುವಂತಿರಬೇಕು ಎನ್ನುವ ರೀತಿಯಲ್ಲಿ ರಚನೆ ಮಾಡುವ ಪದ್ಧತಿಯಿತ್ತು. ಆದರೆ, ಪಾಶ್ಚಾತ್ಯ ಸಾಹಿತ್ಯದ ಸಂಪರ್ಕ ಬಂದ ಮೇಲೆ ನಾವು ಮಕ್ಕಳಿಗೋಸ್ಕರ ಬರೆಯುವ ಅಗತ್ಯ ಕಂಡುಬಂತು. ಇಲ್ಲಿ ನಮ್ಮ ಅನೇಕ ಆಧುನಿಕ ಲೇಖಕರು ನವೋದಯದ ಪೂರ್ವದಲ್ಲಿ ಮಕ್ಕಳಿಗೋಸ್ಕರ ಬೇಕಾದಷ್ಟು ಕೃತಿಗಳನ್ನು ರಚನೆ ಮಾಡಿದ್ದಾರೆ. ಅವರಲ್ಲಿ ನಮಗೆ ಬಹಳ ಮುಖ್ಯರಾಗಿ ಕಾಣುವಂಥವರು ಪಂಜೆ, ಹೊಯ್ಸಳ, ರಾಜರತ್ನಂ,

# ಸಂ–ವೇದನೆ

ಕಾವ್ಯಲೋಕ

ಅಕ್ಕರೆಯ ಕೂಸು
ಅವನಿಗೀಗ ಹತ್ತು ವಯಸು
ಮುದ್ದಾಗಿ ಬೆಳೆದವನ
ಬದುಕಿನ ಚಿತ್ರ ಚೆಂದವಿತ್ತು
ಒಂದು ದಿನ. ಚಿತ್ರದಲ್ಲೊಂದು
ಹೊಸ ಬಣ್ಣ ಕಂಡಿತ್ತು
ಕಪ್ಪು–ಗೊತ್ತಿಲ್ಲ !

ಕೆಂಪು–ಗೊತ್ತಿಲ್ಲ !?
ಮಗನನ್ನು ಕೇಳಿದೆ
'ಅದೇನು ಬಣ್ಣ ?
ಅವನದೂ ಅದೇ ಉತ್ತರ
ಗೊತ್ತಿಲ್ಲ' ........!!!!
ಮೆಲ್ಲಗೆ ಕೇಳಿದೆ
ದನಿ ತುಂಬಿ ಬಂದಿತ್ತು

ನಾನಲ್ಲೆಲ್ಲೊ ಇರುವುದು
ಹೇಗನಿಸಿದೆ ?
ಏನು ಹೇಳುವುದು
ಗೊತ್ತಿಲ್ಲಮ್ಮಾ...
ಅಬೋಧ ಕಂಗಳಲ್ಲಿ
ಕಾಣಲಿಲ್ಲ ತುಂಟತನದ ಮಿಂಚು
ಹಾಗೇ ಹಾದುಹೋಯಿತು
ಅವನ ಟೀಚರಮ್ಮನ ಮಾತು
ಅವನಾಡುವ ಮಾತಲ್ಲೆಲ್ಲ
ನೀವೇ ಇರುತ್ತಿದ್ದಿರಿ
ಆದರೆ ಹೋದ ವಾರ ತರಗತಿಗೆ
ಬಂದವನೇ ಓಡಿಬಂದು
ಹೇಳಿದ
ನನ್ನ ಷರಟಿನ ಗುಂಡಿ ಕಿತ್ತಿದೆ
ಹೊಲಿಯಲು ಅಮ್ಮ ಇಲ್ಲಿಲ್ಲ ಬೈಯದಿರಿ
ಕಣ್ಣಲ್ಲೆರಡು ಹನಿ
ಚಿತ್ರದ ಮೇಲೆ ಬಿತ್ತಾ ?
ಗೊತ್ತಿಲ್ಲ
ಎಲ್ಲ ಮಸುಕು ಮಸುಕು

**ಕೆ. ವೈ. ಜಯಂತಿ**
ಆಕಾಶವಾಣಿ, ಧಾರವಾಡ – ೫೮೦ ೦೦೧




ಕುವೆಂಪು, ಕಾರಂತ, ಸಿದ್ದಯ್ಯ ಪುರಾಣಿಕರು, ಎಂ.ವಿ.ಸೀ. ಮುಂತಾದವರು. ಮಕ್ಕಳ ಸಾಹಿತ್ಯ ಕನ್ನಡದಲ್ಲಿ ನಿರ್ಮಾಣ ಮಾಡಿದವರಲ್ಲಿ ಹೆಚ್ಚಿನವರು ಪ್ರೈಮರಿ, ಮಾಧ್ಯಮಿಕ ಮತ್ತು ಹೈಸ್ಕೂಲ್ ಶಾಲೆಗಳ ಅಧ್ಯಾಪಕ ವೃಂದದವರೇ. ಅವರು ಶಾಲೆಯಲ್ಲಿ ಪಾಠ ಮಾಡಬೇಕಾದರೆ, ರೈಮ್ಸ್, ಪ್ರಾಸ, ಅನುಪ್ರಾಸ ಪದ್ಯಗಳು, ನಾನ್ಸೆನ್ಸ್ ಪೊಯಮ್‌ಗಳು, ಕಥನ ಕವನಗಳು, ಮಕ್ಕಳಿಗೆ ಹೇಳಬೇಕಾದ ಮಾತುಗಳು, ಅವರ ಕಲ್ಪನೆಗಳನ್ನು ಬೆಳೆಸುವಂಥ ಪದ್ಯಗಳನ್ನು ಬರೆಯಬೇಕಾದ ಅಗತ್ಯ ಕಂಡುಬಂತು. ಇಂಗ್ಲಿಷಿನಲ್ಲಿ ಅಂಥದ್ದು ಬೇಕಾಗಿದ್ದ ಕಾರಣ, ಅವೆಲ್ಲವೂ ಬರಬೇಕೆನ್ನುವ ನವೋದಯರವರ ಬಹಳ ದೊಡ್ಡ ಗುರಿಯಾದ ಕಾರಣ, ಮಕ್ಕಳ ಸಾಹಿತ್ಯ ಕನ್ನಡದಲ್ಲಿ ಕಾಣಲು ಶುರುವಾಯಿತು. ದೊಡ್ಡವರು ಮಕ್ಕಳಿಗಾಗಿ ಬರೆಯುವುದು ಸಾಹಸದ ಕೆಲಸ. ಅವರು ತಾವು ದೊಡ್ಡವರೆನ್ನುವುದನ್ನು ಮರೆತು ಮಕ್ಕಳಿಗೆ ಬರೆಯಬೇಕಾಗುತ್ತದೆ. ಅವರಲ್ಲಿ ಅನುಭವ ಇರುತ್ತೆ. ಆದರೆ ಮಕ್ಕಳಿಗೆ ಬರೆಯಬೇಕಾದರೆ ಮುಗ್ಧತೆಯನ್ನು ತಮ್ಮ ಮೇಲೆ ಎಳೆದುಕೊಂಡು ಬರೆಯಬೇಕಾಗುತ್ತದೆ."

"ಯಾವುದೇ ಸಾಹಿತ್ಯವನ್ನಾದರೂ ನಿರ್ಮಾಣ ಮಾಡುವುದು ಕಷ್ಟ. ನಾನು ಉತ್ತರಾಯಣ ಬರೆಯಬೇಕಾದರೆ ಎಷ್ಟು ಶ್ರಮ, ಧ್ಯಾನ, ಶ್ರದ್ಧೆ ವಹಿಸುತ್ತೇನೋ ಅಷ್ಟೇ ಶ್ರಮ, ಧ್ಯಾನ, ಶ್ರದ್ಧೆಯನ್ನು ಗುಬ್ಬಿ ಪದ್ಯವನ್ನು ಬರೆಯುವಾಗಲೂ ವಹಿಸಬೇಕು. ಪ್ರತಿಯೊಂದು ಸೃಜನಶೀಲ ಕೆಲಸವೂ ಸುಲಭದಿಂದ ಸಾಧ್ಯವಾಗುವಂಥದ್ದಲ್ಲ. ಅದರಲ್ಲಿ ಅಪಾರ ಶ್ರಮ, ತಾಳ್ಮೆ, ಪ್ರತಿಭೆ ಮೂರೂ ಮೇಳೈಸಿರಬೇಕಾಗುತ್ತದೆ. ಚಿಕ್ಕ, ಲಲಿತವಾದ ಪ್ರಾಸ ಪದ್ಯವನ್ನು ಬರೆಯುವಾಗಲೂ ಇದು ಅಗತ್ಯ. ಮಹಾಕಾವ್ಯವೊಂದನ್ನು ಬರೆಯುವಾಗಲೂ ಅಷ್ಟೆ. ರಾಮಾಯಣ ದರ್ಶನಂ ಬರೆಯುವಾಗ ಏನು ಪ್ರತಿಭೆ ವಿನಿಯೋಗವಾಯಿತೋ, ಕಿಂದರಿಜೋಗಿ ಬರೆಯುವಾಗಲೂ ಅದು ವಿನಿಯೋಗವಾಗದಿದ್ದರೆ ಅದೊಂದು ಕ್ಲಾಸಿಕ್ ಪೊಯೆಮ್ ಆಗುತ್ತಿರಲಿಲ್ಲ. ಮಕ್ಕಳ ಸಾಹಿತ್ಯ ಸುಲಭ, ಕಷ್ಟ ಎನ್ನುವ ಮಾತು ಅನುಚಿತ. ಪ್ರತಿಯೊಂದು ಸಾಹಿತ್ಯವೂ ಅತ್ಯಂತ ಗಹನವಾದ, ಜೀವವನ್ನು ಬಸಿಯುವ ಕ್ರಿಯೆ. ಮಕ್ಕಳ ಸಾಹಿತ್ಯ ಬರೆಯಬೇಕಾದರೆ ಅದೇ ಧ್ಯಾನ, ಏಕಾಗ್ರತೆ, ತನ್ಮಯತೆ ಇರಬೇಕು. ದೊಡ್ಡವರ ಸಾಹಿತ್ಯ ಬರೆಯಬೇಕಾದರೂ ಅದು ಇರಬೇಕು. ಹಾಗೆ, ಏನು ಬರೆಯಬೇಕಾದರೂ ಅದಕ್ಕೆ ನೂರಕ್ಕೆ ನೂರರಷ್ಟು ಅನುಭವವನ್ನು ನಿಕಷಕ್ಕೆ ಒಡ್ಡಿ ಬರೆಯಬೇಕಾಗುತ್ತದೆ. ಹಾಗಾಗಿ ಸಾಹಿತ್ಯ ಸುಲಭವಲ್ಲ, ಯಾವುದೇ ಕಲೆಯೂ ಸುಲಭವಲ್ಲ, ಯಾರು ಅದನ್ನು ಸುಲಭವೆಂದುಕೊಂಡಿರುತ್ತಾರೋ ಅವರು ಬಹುಬೇಗ ಅಧಃಪತನಗೊಳ್ಳುತ್ತಾರೆ."

ವೃತ್ತಿಯಲ್ಲಿ ಆಂಗ್ಲಭಾಷಾ ಉಪನ್ಯಾಸಕರಾಗಿರುವ ರಾಧೇಶ ತೋಳ್ಪಾಡಿಯವರು ನಾಡಿನ ಪ್ರತಿಭಾವಂತ ಲೇಖಕರಲ್ಲಿ ಒಬ್ಬರು. ಕಾವ್ಯದ ಮೂಲಕ ಸಾಹಿತ್ಯದ ಹದ ಹಿಡಿದವರು. ಅವರ ಪ್ರಕಾರ:

"ಮಕ್ಕಳ ಭಾವ ಪ್ರಪಂಚವನ್ನು ಅರಳಿಸುವ ಸಾಹಿತ್ಯವೇ ಮಕ್ಕಳ ಸಾಹಿತ್ಯ. ಅದು ಮಕ್ಕಳೇ ಮಕ್ಕಳಿಗಾಗಿ ಬರೆದದ್ದೂ ಆಗಿರಬಹುದು, ಹಿರಿಯರು ಮಕ್ಕಳಿಗಾಗಿ ಬರೆದದ್ದೂ ಆಗಿರಬಹುದು, ಲಿಖಿತ ರೂಪದಲ್ಲೂ ಇರಬಹುದು, ಮೌಖಿಕ ಸ್ವರೂಪದ್ದೂ ಆಗಿರಬಹುದು. ಮಕ್ಕಳ ಮನೋಲೋಕಕ್ಕೆ ಗ್ರಹಿಸಲು ಸಾಧ್ಯವಾಗುವ ವಸ್ತು ವಿವರಗಳಿಂದ ತೊಡಗಿ ಅವರ ಅರಿವು, ಕಲ್ಪನಾ ಶಕ್ತಿಯನ್ನು ವಿಸ್ತರಿಸುತ್ತಾ ಹೋಗುವಂತಹ ಸಾಹಿತ್ಯ ಪ್ರಕಾರವನ್ನು ಮಕ್ಕಳ ಸಾಹಿತ್ಯ ಎಂದು ಕರೆಯಬಹುದು.

ಕಥೆ, ಕವಿತೆ, ನಾಟಕ, ಮೂಲತಃ ಬರಹಗಾರನ ಮನಸ್ಸಿನಲ್ಲಿ ಸಂಭವಿಸುವಂಥದ್ದು... ಏನೂ ಸಂಭವಿಸದಿದ್ದಾಗ ಬರೆಯಹೊರಟರೆ ಆಗುವುದು ತಿಣುಕಾಡುವಷ್ಟೆ. ಆಗ ಬರೆಯುವುದು, ಬರೆದದ್ದನ್ನು ಕಲಾಕೃತಿ ಎನ್ನುವುದು ಎರಡೂ ಕಷ್ಟವೇ. ಇಷ್ಟಕ್ಕೂ ಲೇಖಕನಿಗೆ ಏನೋ ವಿಶಿಷ್ಟವಾದದ್ದು ಅನುಭವಕ್ಕೆ ಬಂದಾಗ, ಘಟಿಸಿದಾಗ, ಆ ಅನುಭವವೇ ತನ್ನನ್ನು ತಾನು ಬರೆದುಕೊಳ್ಳುತ್ತದೆ. ಲೇಖಕನು ಕೇವಲ ಲಿಪಿಕಾರ ಮಾತ್ರ ಆಗುತ್ತಾನೆ. ಆಗ ಬರವಣಿಗೆ ಲೀಲಾಜಾಲವಾಗುತ್ತದೆ. ತಾನು ಬರೆಯುತ್ತಿರುವುದು ಮಕ್ಕಳಿಗಾಗಿ ಎಂಬ ಅರಿವಿದ್ದಾಗ ಅದಕ್ಕೆ ತಕ್ಕ ಭಾಷಾಶರೀರ ರೂಪುಗೊಳ್ಳುತ್ತದೆ.

"ಓದುಗರಿಗೆ, ಮಕ್ಕಳಿರಲಿ, ಹಿರಿಯರಿರಲಿ ಸಾಹಿತ್ಯವು ಹೊಸದೇನನ್ನೋ ನೀಡಬೇಕು. ಅದರಲ್ಲಿ ರಸಾನುಭವವನ್ನು ಮೂಡಿಸುವಂತಿರಬೇಕು. ಕನ್ನಡದ ಶ್ರೇಷ್ಠ ಕವಿ ಮಂಜುನಾಥ ಹೇಳುವಂತೆ ಒಂದು ವಿಶಿಷ್ಟಕೋನದಲ್ಲಿ ಬೆಳಕು ಕಂಡದ್ದನ್ನು ಹೊಳೆಯಿಸುವಂತಿರಬೇಕು. ಇಲ್ಲವಾದರೆ ಬರೆಯಲೇಬಾರದು. ಅಂದರೆ ಎಲ್ಲರಿಗೂ ಗೊತ್ತಿರುವುದನ್ನೇ ಈವರೆಗೆ ಹತ್ತಾರು ಬಾರಿ ಹೇಳಿರುವುದನ್ನೇ ಬೇರೆ ಕಡೆಗಳಲ್ಲಿ ಹೇಳಿದಂತಿರಬಾರದು. ಲೇಖಕನಿಗೆ ತಾನು ವಿಶಿಷ್ಟವಾದ, ಅನನ್ಯವಾದ ಯಾವುದೋ ಅನುಭವವೊಂದನ್ನು ಹೇಳಬೇಕು ಎಂಬ ತುಡಿತವೂ ಎಚ್ಚರವೂ ಇರಬೇಕು. ಆಗ ಮಕ್ಕಳಾಗಿ, ಅರ್ಥಾತ್ ಓದುಗರಿಗೆ ನಿರಾಸೆಯಾಗುವುದಿಲ್ಲ, ಓದುಗರ ಸ್ಪಂದನಶೀಲತೆ ಹರಿತವೂ, ಸೂಕ್ಷ್ಮವೂ ಆಗುತ್ತಾ ರಸಾನುಭವ ಸಾಮರ್ಥ್ಯವೂ ಹೆಚ್ಚುತ್ತಾ ಹೋಗುತ್ತದೆ. ಹೀಗಾಗಿ ಲೇಖಕನಿಗೆ ತಾನು ಬರೆಯುತ್ತಿರುವ ಸಾಹಿತ್ಯ ಪರಂಪರೆಯ ಅರಿವೂ ಚೆನ್ನಾಗಿರಬೇಕಾಗಿರುತ್ತದೆ. ತನ್ನ ಬರವಣಿಗೆ ಹೇಗೆ ಅನನ್ಯವಾಗಿರಬೇಕು ಎನ್ನುವ ಸ್ಥೂಲ ಕಲ್ಪನೆ ಅವನಲ್ಲಿ ಇರುವುದು ಅತೀ ಅವಶ್ಯ."

ಹಿರಿಯರಿಗಾಗಿ ಕಥೆ, ಕಾದಂಬರಿ, ಕವಿತೆಗಳನ್ನು ಬರೆಯುತ್ತ ಬಂದಿರುವ ಭಾಗೀರಥಿ ಹೆಗಡೆಯವರು 'ಗುಬ್ಬಿಯ ಸ್ವರ್ಗ'ದ ಮೂಲಕ ಮಕ್ಕಳ ಲೋಕಕ್ಕೆ ತಮ್ಮನ್ನು ತೆರೆದುಕೊಂಡವರು. ಅವರು ಹೀಗೆನ್ನುತ್ತಾರೆ :

"ಮಕ್ಕಳಿಗೆ ಖುಷಿ ಕೊಡುವ, ಭಾಷೆಯನ್ನು ಕಲಿತ ಮಕ್ಕಳಿಗೆ ಹಾಡನ್ನು ಕೇಳುವ ಮತ್ತು ಕಥೆಯನ್ನು ಕೇಳಿ ಸಂತೋಷಪಡುವ ಅವಕಾಶವನ್ನು ಓದಲು ಕಲಿತ ಮಕ್ಕಳಿಗೆ ಓದಿನ ಸಂತೋಷವನ್ನು ನೀಡುವ ಸಾಹಿತ್ಯ ಮಕ್ಕಳ ಸಾಹಿತ್ಯ. ಅದು ಸರಳ, ಖುಷಿ ಕೊಡುವ, ಮಕ್ಕಳ ಮನಸ್ಸಿನ ಉತ್ಸಾಹ, ಉಲ್ಲಾಸ, ವಿಸ್ಮಯ ಜಗತ್ತನ್ನು ತಣಿಸುವಂತಿರಬೇಕು."

"ಮಕ್ಕಳ ಸಾಹಿತ್ಯ ಕಥಾರೂಪವಾಗಿ ಹೇಳುವುದಾದರೆ, ಸಲಾಭ (ನಿಪುರಾಣ) ಜನಪರ ಉಪದೇಶ ಮಾಡುವುದಾದರೆ ಸುಲಭ. ಆದರೆ ಮಕ್ಕಳ ಮನೋಭಾವನೆಯನ್ನು ಅರ್ಥೈಸಿಕೊಂಡು, ಇವತ್ತಿನ ತಂತ್ರಜ್ಞಾನ ಯುಗದಲ್ಲಿ ಪ್ರತಿಯೊಂದು ಮನೆಯ ಮಗುವಿಗೆ ಮೊಬೈಲು ಸಿಗುವ ಸಂದರ್ಭದಲ್ಲಿ ಸೃಜನಶೀಲತೆಯನ್ನು ಬಡಿದೆಬ್ಬಿಸುವ ಸಾಹಿತ್ಯ, ಕುತೂಹಲ ಹುಟ್ಟಿಸುವ ವ್ಯಕ್ತಿತ್ವ ನಿರ್ಮಾಣ ಮಾಡುವ ಸಾಹಿತ್ಯವಾಗಬೇಕು. ನಾವೇ ಮಗುವಾಗಿ ಅವರತನವನ್ನು ನಮ್ಮೊಳಗೆ ಆವಾಹಿಸಿಕೊಂಡು ಬರೆದರೆ ಉತ್ತಮ ಸಾಹಿತ್ಯ ಹೊರಬರುತ್ತದೆ."

"ಎಳೆಯ ಮಕ್ಕಳ ಭಾವಜಗತ್ತಿನ ವಿಕಾಸವೇ ಮಕ್ಕಳ ಸಾಹಿತ್ಯದ ಗುರಿಯಾಗಿರಬೇಕೆಂಬುದು ನನ್ನ ಅನಿಸಿಕೆ. ಮಕ್ಕಳ ಪಾಲಿಗೆ ಈ ಪ್ರಪಂಚ ಬೆರಗು ಹುಟ್ಟಿಸುವಂಥದ್ದು. ಕುತೂಹಲವನ್ನು ಪ್ರೇರೇಪಿಸುವಂಥದ್ದು, ಕಲ್ಪನೆಯನ್ನು ಕೆರಳಿಸುವಂಥದ್ದು. ಹೀಗಾಗಿ ಅವರಿಗಾಗಿ ರಚಿತವಾದ ಸಾಹಿತ್ಯ ಅವರೊಳಗಿನ ಬೆರಗಿನ ಭಾವವನ್ನು ಹೆಚ್ಚಿಸಿ ಕಲ್ಪನೆಯನ್ನು ವಿಸ್ತರಿಸುವಂತಿರಬೇಕು. ಅಂತಿಮವಾಗಿ ಪ್ರಶ್ನಿಸುವ ಮನೋಧರ್ಮವನ್ನು ಉತ್ತೇಜಿಸುವಂತಿರಬೇಕು. ಇವೆಲ್ಲವೂ ಸ್ವಾರಸ್ಯವೂ ರೋಚಕವೂ ಆಗಿರುವ ರೀತಿಯಲ್ಲಿ ಸಾಹಿತ್ಯದಲ್ಲಿ ಕಾಣಿಸಿಕೊಳ್ಳಬೇಕು. ನೇರವಾಗಿ ಜ್ಞಾನವನ್ನು ತುರುಕುವ, ಉಪದೇಶ ಮಾಡುವ ಕಥೆ, ಕವಿತೆಗಳು ಮಕ್ಕಳಿಗೆ ರುಚಿಸುವುದಿಲ್ಲ. ಮಕ್ಕಳಿಗಾಗಿ ರಚಿತವಾದ ಸಾಹಿತ್ಯದಲ್ಲಿ ಜ್ಞಾನ, ಬುದ್ಧಿವಾದ, ಪ್ರೀತಿ ಇವೇನಿದ್ದರೂ ಪರೋಕ್ಷವಾಗಿ ಅವರಿಗೆ ತಲುಪುವಂತಿರಬೇಕಾದ್ದು ಅತ್ಯಗತ್ಯ.

"ಮಕ್ಕಳ ಸಾಹಿತ್ಯ ರಚನೆ ಸುಲಭವಲ್ಲ ಎನ್ನುವ ಹೇಳಿಕೆಯನ್ನು ನಾನು ಅಲ್ಲಗಳೆಯುವುದಿಲ್ಲ. ಸ್ವತಃ, ತಾವೇ ಮಕ್ಕಳಿಗಾಗಿ ಬೆರಗಿನಿಂದ, ಕುತೂಹಲದಿಂದ ಜಗತ್ತನ್ನು ಪರಿಭಾವಿಸುವ ಮಗು ಮನಸ್ಸಿನಲ್ಲದವರಿಗೆ ಮಕ್ಕಳ ಸಾಹಿತ್ಯ ರಚನೆ ಸಾಧ್ಯವಿಲ್ಲ. ಕವಿ ಕುವೆಂಪು 'ನಿತ್ಯ ಕಿಶೋರತೆ' ಎಂಬ ಮಾತನ್ನು ಟಂಕಿಸಿದ್ದಾರೆ. ನಮ್ಮೆಲ್ಲರ ಹೃದಯದಲ್ಲೂ ಒಂದೊಂದು ಮಗುವಿದೆ. ಆದರೆ, ವಯಸ್ಸಿನಲ್ಲಿ

ಪ್ರಾಪಂಚಿಕ ಅನುಭವದಲ್ಲಿ ಹಿರಿಯರಾದ ನಾವು ಆ ಮಗುವಿನ ಇರುವಿಕೆಯನ್ನು ಮರೆತಿದ್ದೇವೆ. ನಾವು ಮಕ್ಕಳ ಭಾವಪ್ರಪಂಚದಿಂದ ದೂರವಿರುವುದರಿಂದ ಮಕ್ಕಳೊಂದಿಗೆ ಭಾವ ಸಂವಾದಿಸಲು ನಮಗೆ ಕಷ್ಟವಾಗುತ್ತದೆ. ಹೀಗಾಗಿ ಬಾಲ್ಯವನ್ನು ಆವಾಹಿಸಿಕೊಂಡು ಅದರ ಅನುಭವದಲ್ಲಿ ಮಕ್ಕಳ ಸಾಹಿತ್ಯವನ್ನು ರಚಿಸಬೇಕು."

ಕಾವ್ಯವನ್ನು ಪ್ರಧಾನ ಮಾಧ್ಯಮವಾಗಿಸಿಕೊಂಡು ಬರೆಯುತ್ತಾ 'ಜಂಗಮ ಜೋಗಿಯಾಗಿ, ಕಂದನ ಕವಿತೆ' ಹೆಣೆದ ಗೋವಿಂದರೆಡ್ಡಿಯವರು ವೃತ್ತಿಯಿಂದ ಉಪನ್ಯಾಸಕರಾಗಿ ಕಾರ್ಯನಿರ್ವಹಿಸಿ, ಮಕ್ಕಳೊಂದಿಗೆ ಬೆರೆಯುತ್ತಲೇ ಸಾಹಿತ್ಯವನ್ನು ಬೆಳೆಸಿದವರು. ಕುವೆಂಪುರವರ 'ಜಲಗಾರ' ನಾಟಕವನ್ನು ಪದ್ಯವಾಗಿಸಿದ ಪಾಂಡಿತ್ಯ ಅವರದು. ಮಕ್ಕಳ ಸಾಹಿತ್ಯ ಕುರಿತ ಬಗ್ಗೆ ಅವರ ಅಂಬೋಣ ಹೀಗಿದೆ :

"ಮಕ್ಕಳ ಸಾಹಿತ್ಯ ಇಂದು ನಿನ್ನೆಯದಲ್ಲ. ಇದರ ಬೇರನ್ನು ನಾವು ಜಾನಪದ ಪರಂಪರೆಯಲ್ಲಿಯೇ ಕಾಣಬಹುದು. ಅಜ್ಜಿ ಕಥೆಗಳು, ಪಂಚತಂತ್ರದ ಕಥೆಗಳು, ಆಟದ ಪದಗಳು ಇವುಗಳೆಲ್ಲ ಮಕ್ಕಳ ಮನಸ್ಸನ್ನು ಅರಳಿಸಲು ಹುಟ್ಟಿಕೊಂಡಂತಹುವೆ. ಆಧುನಿಕ ಸಾಹಿತ್ಯದಲ್ಲೂ 'ಗೋವಿನ ಹಾಡು', 'ತಿರುಕನ ಕನಸು' ಮಕ್ಕಳ ಗಮನವನ್ನು ಸೆಳೆಯುತ್ತಲೇ ಇವೆ. ಇಂಗ್ಲಿಷ್‌ನ ಸಹವಾಸವು ಕೂಡ ಮಕ್ಕಳ ಸಾಹಿತ್ಯವನ್ನು ಇನ್ನಷ್ಟು ಬೆಳೆಸಿದೆ. ಪಾಶ್ಚಾತ್ಯರಲ್ಲಿ ದಂಪತಿಗಳಿಬ್ಬರೂ ಉದ್ಯೋಗ ಮಾಡಲು ಹೋದಾಗ ಅವರ ಮಕ್ಕಳನ್ನು ನೋಡಿಕೊಳ್ಳುವ ಆಯಾಗಳಿಂದ ಶಿಶುಪ್ರಾಸಗಳು, ವಿವಿಧ ಹಾಡುಗಳು, ಕಥೆಗಳು ಹುಟ್ಟಿಕೊಂಡವು. ಪಾಶ್ಚಾತ್ಯರಲ್ಲಿ ಮಕ್ಕಳ ಸಾಹಿತ್ಯಕ್ಕೆ ಹೆಚ್ಚಿನ ಮನ್ನಣೆಯೂ ಇದೆ. ಆದರೆ ನಮ್ಮಲ್ಲಿ ಮಕ್ಕಳ ಸಾಹಿತ್ಯವನ್ನು ಕಡೆಗಣಿಸಲಾಗುತ್ತಿದೆ. ನಾಡಿನ ಮಾನವ ಸಂಪನ್ಮೂಲಗಳು ಅಭಿವೃದ್ಧಿ ಹೊಂದಬೇಕಾದರೆ ಎಳೆಯ ವಯಸ್ಸಿನಿಂದಲೇ ಮಕ್ಕಳಲ್ಲಿ ಸಾಹಿತ್ಯಾಭಿರುಚಿ ಮೂಡಿಸಬೇಕು. ಸಾಹಿತ್ಯವು ಮಾನವನ ವಿಚಾರಶಕ್ತಿಯನ್ನು ಹೆಚ್ಚಿಸುವುದಲ್ಲದೆ ಉತ್ತಮ ಸಂಸ್ಕಾರವಂತರನ್ನಾಗಿ ರೂಪಿಸುತ್ತದೆ. ಗಿಡವಾಗಿದ್ದಾಗ ನೀಡುವ ಉತ್ತಮ ನೀರು, ಗೊಬ್ಬರ ಹೇಗೆ ಅದನ್ನು ಬಲಾಢ್ಯ ಮರವನ್ನಾಗಿಸುತ್ತೋ ಹಾಗೆಯೇ ಮಕ್ಕಳನ್ನು ಉತ್ತಮ ಪ್ರಜೆಗಳನ್ನಾಗಿಸುವಲ್ಲಿ ಮಕ್ಕಳ ಸಾಹಿತ್ಯ ಪ್ರಮುಖ ಪಾತ್ರ ವಹಿಸುತ್ತದೆ."

ಮಕ್ಕಳ ಸಾಹಿತ್ಯದಲ್ಲಿ ಎರಡು ವಿಧಗಳನ್ನು ಕಾಣಬಹುದು. ಒಂದು, ಮಕ್ಕಳು ರಚಿಸುವ ಸಾಹಿತ್ಯ; ಇನ್ನೊಂದು, ಮಕ್ಕಳಿಗಾಗಿ ಹಿರಿಯರು ರಚಿಸುವ ಸಾಹಿತ್ಯ. ಹಿರಿಯರು ಮಕ್ಕಳಿಗಾಗಿ ಸಾಹಿತ್ಯ ರಚಿಸುವಾಗ ಅತ್ಯಂತ ಪ್ರಜ್ಞಾಪೂರ್ವಕವಾಗಿ ರಚಿಸ ಬೇಕಾಗುತ್ತದೆ. ಮಕ್ಕಳಲ್ಲಿ ತಾವೂ ಒಬ್ಬ ಮಗುವಾಗಿ ಅವರ ಮನೋಸಾಮರ್ಥ್ಯಕ್ಕನು ಗುಣವಾಗಿ ರಚನೆ ಮಾಡಬೇಕಾಗುತ್ತದೆ. ನಾವು ದೊಡ್ಡವರಾಗಿಬಿಟ್ಟಿದ್ದೇವೆ, ನಮಗೆಲ್ಲಾ ಗೊತ್ತಿದೆ ಎಂಬ ಭಾವದಿಂದ ಮಕ್ಕಳ ಮನಸ್ಸನ್ನು ಅರ್ಥಮಾಡಿಕೊಳ್ಳುವಲ್ಲಿ ಎಡವುತ್ತಿದ್ದೇವೆ. ಆದರೆ ನಾವು ದೊಡ್ಡವರಾಗಿ ಪಡೆದುಕೊಂಡದ್ದಕ್ಕಿಂತ ಕಳೆದುಕೊಂಡದ್ದು ಹೆಚ್ಚಾಗಿರುತ್ತದೆ. ದೊಡ್ಡವರಾಗುತ್ತಿದ್ದಂತೆ ಬಾಲ್ಯವನ್ನು ಕಳೆದುಕೊಳ್ಳುತ್ತೇವೆ; ಆ ಬಾಲ್ಯಸಹಜ ಕುತೂಹಲದಿಂದ ಕೂಡಿದ ಮನೋಭಾವವನ್ನು ಕಳೆದುಕೊಳ್ಳುತ್ತೇವೆ; ವಿಶಾಲ ಮನೋಭಾವ ದೂರವಾಗಿ ಸಂಕುಚಿತ ಮನೋಭಾವವನ್ನು ಬೆಳೆಸಿಕೊಳ್ಳುತ್ತೇವೆ. ಆದ್ದರಿಂದ ಮಕ್ಕಳ ಮನೋಭಿತ್ತಿಗನುಗುಣವಾಗಿ ಸಾಹಿತ್ಯರಚನೆ ಮಾಡುವುದು, ನಮಗೆ ಕಷ್ಟವಾಗಿ ಕಾಣುತ್ತದೆ. ನಾವು ಎಷ್ಟೇ ದೊಡ್ಡವರಾದರೂ ಎಷ್ಟೇ ಬುದ್ಧಿವಂತರಾದರೂ ಮಗುವಿನ ಮನಸ್ಸು ನಮ್ಮಲ್ಲಿ ಸುಪ್ತವಾಗಿ ಅಡಗಿಕೊಂಡಿರುತ್ತದೆ. ಅದು ಬಹಿರಂಗವಾಗಿ ಪ್ರಕಟವಾಗದಿದ್ದರೂ ಅಂತರಂಗದಲ್ಲಿ ಕಾಣುವ ಕನಸಿನ ರೂಪದಲ್ಲಿ ಜಾಗೃತವಾಗಿಯೇ ಇರುತ್ತದೆ. ಆದ್ದರಿಂದಲೇ ಮನುಷ್ಯ ವಯಸ್ಸಾಗುತ್ತಿದ್ದಂತೆ ಮಗುವಿನಂತಾಗುತ್ತಾನೆ. ಹಾಗಾಗಿ ಯಾರಲ್ಲಿ ಈ ಮಗುವಿನಂತಹ ಮನಸ್ಸಿರುತ್ತದೋ ಅವರು ಮಕ್ಕಳ ಸಾಹಿತ್ಯವನ್ನು ಉತ್ತಮವಾಗಿ ರಚಿಸಲು ಸಾಧ್ಯವಾಗುತ್ತದೆ.

ಮಕ್ಕಳನ್ನು ನಿಸರ್ಗದ ನೆಲುವಿಗೆ ತರುವಲ್ಲಿ ಕೃಷ್ಣಮೂರ್ತಿ ಬಿಳಿಗೆರೆ ಇವರ ಶ್ರಮ ಅಪಾರ. ಇದಕ್ಕಾಗಿ ಅವರು ಪದ್ಯದ ಮರ ಬೆಳೆಸಿದ್ದಾರೆ, ಚಗಡೆ ಹೂವನ್ನ ಅರಳಿಸಿದ್ದಾರೆ, ಗುಡು ಗುಡು ಗುಡ್ಡವನ್ನು ಏರಿ ಜೀರಿಂಬೆ ಹಾಡನ್ನು ಹಾಡಿರುವ ನೀರು, ನೆಲ, ಹಸಿರೆಂದು ಜಂಗಮ ಫಕೀರನಂತೆ ತಿರುಗಾಡುತ್ತಾ ನವಿಲೂರಿನ ಕತೆಯನ್ನು ಹೇಳುವ ಬಿಳಿಗೆರೆಯವರು ಮಕ್ಕಳ ಸಾಹಿತ್ಯ ಕುರಿತು ಹೀಗೆ ಹೇಳುತ್ತಾರೆ:

"ಮಕ್ಕಳ ಸಾಹಿತ್ಯ ಎನ್ನುವುದೊಂದು ಮನೋಸ್ಥಿತಿ. ಇದು ಮಾತಿನ (ಕಥೆ ಹೇಳುವ, ಹಾಡುವ) ರೂಪದಲ್ಲಿ, ಆಟದ ರೂಪದಲ್ಲಿ ಅಥವಾ ಚಿತ್ರದ ರೂಪದಲ್ಲಿ ಇರಬಹುದು. ಈಗ ಹೆಚ್ಚಾಗಿ ಅಕ್ಷರ ರೂಪದಲ್ಲಿ ವ್ಯಕ್ತಗೊಳ್ಳುತ್ತಿದೆ, ಅಷ್ಟೆ. ಪ್ರಕೃತಿಗೆ ಹಿಂದಿರುಗುವ ಮನಸ್ಸುಳ್ಳವರಿಗೆಲ್ಲಾ ಅಗತ್ಯವಾಗಿ ಬೇಕಾಗಿರುವ ಪರಿಕರವಿದು. ಆದರೀಗ ಈ ಪರಿಕರ ಬತ್ತುತ್ತಿರುವ ಅಂತರಗಂಗೆ."

"ಈಗಿನ ಪ್ರಶ್ನೆ ಮಕ್ಕಳ ಸಾಹಿತ್ಯ ರಚನೆ ಸುಲಭವೋ ಕಷ್ಟವೋ ಎಂಬುದಲ್ಲ. ಬದಲಾಗಿರುವ ಸಂದರ್ಭದಲ್ಲಿ ಮಕ್ಕಳ ಸಾಹಿತ್ಯ ರಚನೆಯಲ್ಲಿ ತೊಡಗುವುದೇ ಎಷ್ಟು ಕಷ್ಟ ಎಂಬುದು ಮುಖ್ಯ ವಿಷಯ. ಮಕ್ಕಳತ್ವವೆಂಬುದು ಮೂಲ ಪ್ರವೃತ್ತಿಗೆ ಹತ್ತಿರವಾದುದು. ಅದು ಪ್ರಕೃತಿ ಬೆಸುಗೆಗೆ ಹಾತೊರೆಯುತ್ತಿರುತ್ತದೆ. ಭಿನ್ನ ಭೇದಗಳನ್ನೂ, ಮನುಷ್ಯರ ಹೆಚ್ಚುಗಾರಿಕೆಯನ್ನೂ ಅದು ನಿರಾಕರಿಸುತ್ತದೆ. ಆದರೀಗ ಮಕ್ಕಳತ್ವಕ್ಕೆ ಗರ ಬಡಿದಿದೆ. ಮಕ್ಕಳ ಸಾಹಿತ್ಯ ಇದರಿಂದ ತಪ್ಪಿಸಿಕೊಳ್ಳಲು ಹೇಗೆ ಸಾಧ್ಯ? ಮಕ್ಕಳತ್ವ ಎಲ್ಲರೊಳಗೂ ಇರಬೇಕಾದ ಜೀವಾಳ. ಅದಕ್ಕೇ ಕುತ್ತು ಬಂದಿದೆಯೆಂದರೆ, ನಾವು ಎಷ್ಟು ಕಷ್ಟದಲ್ಲಿದ್ದೇವೆ ಎಂಬುದು ತಿಳಿಯುತ್ತದೆ. ಹಾಗೆಂದು ಯಾವುದೂ ನಿಂತಿಲ್ಲ, ನಿಲ್ಲುವುದೂ ಇಲ್ಲ. ಹಾಗಾಗಿಯೇ ನಾವೆಲ್ಲಾ ಬರೆಯುತ್ತಿದ್ದೇವೆ. ಆದರೆ ಕಾನ್ವೆಂಟೋತ್ತರ ಕಾಲದಲ್ಲಿ ಮಕ್ಕಳ ಸಾಹಿತ್ಯ ರಚನೆಯಲ್ಲಿ ತೊಡಗಿರುವ ತಲೆಮಾರೇ ನಾಪತ್ತೆಯಾಗಿರುವುದನ್ನು ಅಲ್ಲಗಳೆಯಲಾಗದು."

"ಮಕ್ಕಳತ್ವವನ್ನು ಕಳೆದುಕೊಂಡು ಅತಿ ಮನುಷ್ಯರಾಗಿರುವವರನ್ನು ಬದಲಿಸು ವಂತಹ, ಹಾಗೆ ಬದಲಾದವರ ಒಡನಾಟಕ್ಕೆ ಬಂದ, ಒಡಲೊಳಗೆ ಹುಟ್ಟಿದ ಮಕ್ಕಳೂ ಓದಿ ಸಹಜವಾಗಿ ಚಿಗುರೊಡೆದು ಬದುಕಲು ಅನುವಾಗುವ, ಸಾಹಿತ್ಯ ರೂಪುಗೊಳ್ಳ ಬೇಕು. ಹಾಗೆ ರೂಪುಗೊಳ್ಳುವ ಸಾಹಿತ್ಯ ಹಬ್ಬಿ ಬೆಳೆಯುವಂತಾಗಬೇಕು. ಮಕ್ಕಳತ್ವ ಎನ್ನುವುದು ನಿಸರ್ಗದ ಗುಣ. ಆದರೆ ನಾವಿಂದು ನಿಸರ್ಗದಿಂದ ವಿಮುಖರಾಗುತ್ತಿದ್ದೇವೆ. ಹಾಗಾಗಿ ದೊಡ್ಡವರೊಳಗಿನ ಕಳೆದುಹೋದ ಮಕ್ಕಳನ್ನು ಹುಡುಕಿಕೊಡುವ ಸಾಹಿತ್ಯ ನಮ್ಮನ್ನು ಮತ್ತೆ ನಿಸರ್ಗದೊಂದಿಗೆ ಬೆಸೆಯುವ ಸಾಹಿತ್ಯ ಇಂದು ಬೇಕಾಗಿದೆ."

ಮೇಲಿನ ಎಲ್ಲಾ ಮಾತುಗಳಾದ ಮೇಲೂ ಮತ್ತೆ ಬರೆಯುವುದು ಅನೌಚಿತ್ಯವೆನಿಸಿದರೂ, ಒಟ್ಟಾರೆಯಾಗಿ ಮಕ್ಕಳ ಸಾಹಿತ್ಯದ ಕುರಿತು ಇವರ ಅಂಬೋಣ ಏನೆಂಬುದನ್ನು ಸಂಕಲಿಸಿ ಹೇಳುವ ಕಾರ್ಯ ಸದ್ಯದ್ದು. ವಿಭಿನ್ನ ಮನೋಧರ್ಮದ, ಪ್ರದೇಶಗಳ ಬರಹಗಾರರು ಏನೆಲ್ಲಾ ಆಯಾಮಗಳನ್ನಿಟ್ಟುಕೊಂಡು ಮಕ್ಕಳಸಾಹಿತ್ಯ ರಚನೆ ಮಾಡಿದರೂ ಅಂತಿಮವಾಗಿ ಅದು ಮಕ್ಕಳನ್ನು ಮುಟ್ಟಬೇಕು ಎನ್ನುವ ತೀರ್ಮಾನಕ್ಕೆ ಎಲ್ಲರೂ ಬರುತ್ತಾರೆ ಎನ್ನುವುದು ಮಕ್ಕಳನ್ನು ನೆಚ್ಚಿ ಬರೆಯುವ ಪ್ರತಿಯೊಬ್ಬರ ಅಭಿಪ್ರಾಯ. ಈ ಕುರಿತು ವ್ಯಾಖ್ಯೆಯೊಂದು ನೀಡುವುದಾದರೆ; "ಮಕ್ಕಳ ಭಾವಪ್ರಪಂಚವನ್ನು ಅರಳಿಸುವ, ಕಲ್ಪನೆ, ರಂಜನೆ, ವಾಸ್ತವ ಸಂಗತಿಗಳನ್ನು ಒಳಗೊಂಡ ರಚನೆ, ಅವರ ಗ್ರಹಿಕೆಗೆ ನಿಲುಕಬಲ್ಲ ಬರಹವಾಗಿದ್ದು, ಅದು ವಯೋಭಿನ್ನತೆ ಅರಿತು ಅವರ ಅರಿವನ್ನು ವಿಸ್ತರಿಸುವ ಮತ್ತು ಶಬ್ದವನ್ನು ಗದ್ಯ ಸಂಗೀತವಾಗಿಸುವ, ಎಲ್ಲರಿಗೂ ಸಲ್ಲುವ ಸಾಹಿತ್ಯವೇ ಮಕ್ಕಳ ಸಾಹಿತ್ಯ ಎನ್ನಬಹುದು."

ಮಕ್ಕಳ ಸಾಹಿತ್ಯ ರಚನೆ ಮಾಡುವುದು ಮಗುಮನಸ್ಸು (ಮಕ್ಕಳತ್ವ) ಉಳ್ಳವರಿಗೆ ಸುಲಭದ ಕೆಲಸ. ಅದೇ ಮನುಷ್ಯನ ಜೀವಾಳ ಕೂಡ. ಲೇಖಕ ಬರೆಯುವಾಗ ಮಕ್ಕಳ ಬರಹವೆಂದು ಉದಾಸೀನ ಮಾಡದೆ ತನ್ನ ಅನುಭವವನ್ನು ನೂರಕ್ಕೆ ನೂರರಷ್ಟು ನಿಕಷಕ್ಕೆ ಒಡ್ಡಿ ಬರೆಯಬೇಕು. ಆಗ ಅದು ಮಕ್ಕಳ ಮಟ್ಟಕ್ಕೆ ಇಳಿಯುವ ಪ್ರಕ್ರಿಯೆಯಲ್ಲ, ಏರುವ ಪ್ರಕ್ರಿಯೆಯಾಗುತ್ತದೆ. ಇಂತಹ ಸೃಜನಶೀಲತೆ ನಳನಳಿಸಬೇಕಾದ ಪ್ರಕ್ರಿಯೆಯಲ್ಲಿ ಸಾಣೆ ಹಿಡಿಯುವ ಶ್ರಮ ಇದ್ದೇ ಇರುತ್ತದೆ ಎಂಬುದನ್ನು ಎಲ್ಲರೂ ಮನಗಾಣಬೇಕಿದೆ.

ಬರಹಗಾರನೊಬ್ಬ ಯಾವುದೇ ಕಾಲಘಟ್ಟದ ಕಥೆ ರಚನೆ ಮಾಡುವಾಗಲೂ ವರ್ತಮಾನದ ಜಾಗ್ರತೆಯಿಲ್ಲದೆ, ಅದರ ಪ್ರತಿಬಿಂಬವಾಗದೆ ಹೋದರೆ, ತಂತ್ರಜ್ಞಾನದ ಅರಿವು, ಹೊಸತನ ಇಲ್ಲದಿದ್ದರೆ, ಅವನ ಬರಹವನ್ನು ಯಾರೂ ಮೂಸುವುದಿಲ್ಲ. ಹಾಗಾಗಿ ಇಂದು ಲೇಖಕನ ಬರಹ ಯಶಸ್ವಿಯಾಗಬೇಕಾದರೆ ಪರಂಪರೆಯ ಸಮೃದ್ಧತೆಯನ್ನು ಗ್ರಹಿಸಿಕೊಂಡು ಇನ್ನೂ ಬರೆಯದ ವಸ್ತು, ವಿಷಯಗಳ ಕಡೆಗೆ ಗಮನ ನೀಡಬೇಕಿದೆ. ಹಾಗೂ ಅವನ ಬರಹ ಎಲ್ಲಾ ವರ್ಗ, ಜಾತಿ, ಪ್ರದೇಶಗಳನ್ನು ಮುಟ್ಟುವ ಸಾಹಿತ್ಯವಾಗಬೇಕಿದೆ. ಬುದ್ಧಿಮಾಂದ್ಯ ಮಕ್ಕಳು ಮತ್ತು ಹೆಣ್ಣುಮಕ್ಕಳ ಕುರಿತೂ ಬರಹಗಳು ಹೆಚ್ಚಾಗಿ ಬರಬೇಕಾಗಿದೆ. ಸೃಜನಶೀಲ ಲೇಖಕನಿಗೆ ಮಕ್ಕಳು ಮುಖ್ಯವೇ ಹೊರತು ಅಕಾಡೆಮಿಗಳು, ಲೈಬ್ರರಿಗಳು ಅಲ್ಲ. ಈ ಕುರಿತು ಇಂದು ವ್ಯಾಪಕ ಮೌತ್ ಮೀಡಿಯಾದ ಅವಶ್ಯಕತೆ ಇದೆ. ಅದನ್ನು ನಾವು ನೀವೆಲ್ಲಾ ಸೇರಿ ಮಾಡಬೇಕಾಗಿದೆ ಎನ್ನುವುದೇ ನಮ್ಮ ಈ ಲೇಖಕರ ಒಟ್ಟು ಅಭಿಪ್ರಾಯ.

**ಕೆ. ಶಿವಲಿಂಗಪ್ಪ ಹಂದಿಹಾಳು**
ಹಂದಿಹಾಳು ಅಂಚೆ, ಬಳ್ಳಾರಿ ತಾ॥ ಜಿ. – ೫೮೩ ೧೦೩




# ಶಿವಾಜಿ ಹಾಗೂ ಕೆಲವು ತಪ್ಪು ತಿಳಿವಳಿಕೆಗಳು

ಕಳೆದ ವರ್ಷ ಮಹಾರಾಷ್ಟ್ರದಲ್ಲಿ ಮತಾಂಧ ಶಕ್ತಿಗಳಿಂದ ಹತರಾದ ಖ್ಯಾತ ಚಿಂತಕ, ಹೋರಾಟಗಾರ, ಕಮ್ಯುನಿಸ್ಟ್ ಧುರೀಣ ಗೋವಿಂದ ಪಾನಸರೆಯವರು ಬರೆದ 'ಶಿವಾಜಿ ಯಾರು?' (ಕೋಣ ಹೋತಾ ಶಿವಾಜಿ) ಕೃತಿ ಶಿವಾಜಿ ಕುರಿತು ಹಲವಾರು ಸತ್ಯಗಳನ್ನು ಬಹಿರಂಗಗೊಳಿಸಿದೆ. ಮತಾಂಧ ಶಕ್ತಿಗಳು ಶಿವಾಜಿಯ ಹೆಸರನ್ನು ದುರ್ಬಳಕೆ ಮಾಡಿಕೊಂಡು ಸಾಮಾಜಿಕ ಶಾಂತಿ ಕದಡುತ್ತಿದ್ದರು, ಪಾನಸರೆಯವರ ಈ ಕೃತಿ ಶಿವಾಜಿಯ ನಿಜವಾದ ವ್ಯಕ್ತಿತ್ವವನ್ನು ಅನಾವರಣಗೊಳಿಸಿತು. ಮರಾಠಿ ಮಾತ್ರವಲ್ಲದೆ ಕನ್ನಡವನ್ನೂ ಒಳಗೊಂಡು ಹಲವಾರು ಭಾಷೆಗಳಲ್ಲಿ ಅನುವಾದಗೊಂಡಿತು. ಶಿವಾಜಿಯ ನಿಜವಾದ ವ್ಯಕ್ತಿತ್ವ ತಿಳಸಿದ್ದು ಸಹ ಪಾನಸರೆ ಹತ್ಯೆಗೆ ಕಾರಣವಾಯಿತು. ಆ ಕೃತಿಯ ಪರಿಚಯ ಇಲ್ಲಿದೆ.

ಶಿವಾಜಿ ಯಾರು?
ಗೋವಿಂದ ಪಾನಸರೆ
ಕನ್ನಡಕ್ಕೆ : ಚಂದ್ರಕಾಂತ ಪೋಕಳೆ

ಮರಾಠಿ ಮೂಲ :
**ಗೋವಿಂದ ಪಾನಸರೆ**
ಅನುವಾದಕರು :
**ಚಂದ್ರಕಾಂತ ಪೋಕಳೆ**
ಬೆಲೆ : ರೂ. ೪೦/– ಪುಟಗಳು : ೮೦
ಪ್ರಕಾಶಕರು :
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಬೆಂಗಳೂರು – ೫೬೦ ೦೦೧

**ಶಿ**ವಾಜಿ ನಿಧನವಾಗಿ ಸುಮಾರು ಮೂರೂವರೆ ಶತಮಾನಗಳಾಗಿವೆ. ಶಿವಸೇನೆ ಹಾಗೂ ಕೆಲವು ಮತೀಯ ಸಂಘಟನೆಗಳು ತಮ್ಮ ರಾಜಕೀಯ ಲಾಭಕ್ಕಾಗಿ ಅವನನ್ನು ತಮ್ಮ ಸೊತ್ತು ಮಾಡಿಕೊಂಡಿವೆ. ಶಿವಾಜಿ ಹಿಂದೂ ಧರ್ಮ ಪ್ರತಿಪಾದಕ, ಸಂರಕ್ಷಕ ಎಂದು ಪ್ರಚಾರ ಮಾಡಿ ತಮ್ಮದೇ ಆದ ಕೋಟೆಯೊಳಗೆ ಆತನನ್ನು ಬಂಧಿ ಮಾಡಿವೆ. ಕೋಮುವಾದಿ ಶಕ್ತಿಗಳು ಈ ದಿಶೆಯಲ್ಲಿ ಸ್ವಲ್ಪಮಟ್ಟಿಗೆ ಯಶಸ್ಸು ಕಂಡಿರಬಹುದು. ಶಿವಾಜಿಯ ನೈಜ ವ್ಯಕ್ತಿತ್ವ, ಆತನ ಧರ್ಮನಿರಪೇಕ್ಷ ಧೋರಣೆಗಳ ಬಗ್ಗೆ ಜನಸಾಮಾನ್ಯರಿಗೆ ಅರಿವು ಉಂಟಾಗಲಿ, ಎಂಬ ಸದುದ್ದೇಶದಿಂದ ಶ್ರೀ ಗೋವಿಂದ ಪಾನಸರೆಯವರು "ಕೋಣ ಹೋತಾ ಶಿವಾಜಿ" (ಶಿವಾಜಿ ಯಾರು?) ಎಂಬ ಕಿರುಗ್ರಂಥವನ್ನು ಮರಾಠಿಯಲ್ಲಿ ರಚಿಸಿದ್ದಾರೆ. ಅದು ಕನ್ನಡದಲ್ಲೂ ನವಕರ್ನಾಟಕ ಪ್ರಕಾಶನದಿಂದ ಪ್ರಕಟಗೊಂಡಿದೆ.

ಶಿವಾಜಿ ಕಾಲದಲ್ಲಿ ಹಿಂದೂಸ್ತಾನದಲ್ಲಿ ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿ ಸಂಕೀರ್ಣ ಹಾಗೂ ಅಯೋಮಯವಾಗಿತ್ತು. ಆಗ ರಾಜ ಅಕ್ಷರಶಃ ಅಪ್ರತ್ಯಕ್ಷವಾಗಿ ದರೋಡೆಗಾರನಾಗಿದ್ದ. ತಾನು ದರೋಡೆಯಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸುತ್ತಿದ್ದಿಲ್ಲವಾದರೂ ತನ್ನ ಸರದಾರರಿಗೆ ಜಹಗೀರದಾರರಿಗೆ ಲೂಟಿ ಮಾಡಲು ಆತನ ಅಭಯ ಹಸ್ತವಿರುತ್ತಿತ್ತು. ಶಿವಾಜಿ ಜನರಲ್ಲಿ ಆಳವಾಗಿ ಬೇರೂರಿದ್ದ ಈ ಭಾವನೆಗಳನ್ನು ಬೇರು ಸಹಿತ ಕಿತ್ತೆಸೆದ, ಶಿವಾಜಿ ವಂಶಪರಂಪರೆ ಅಥವಾ ಹಕ್ಕಿನಿಂದ ರಾಜನಾಗಿರಲಿಲ್ಲ. ಆತ ಸ್ವತಃ ಹೋರಾಡಿ ರಾಜ್ಯ ನಿರ್ಮಾಣ ಮಾಡಿದ್ದ. ಎಲ್ಲ ಸ್ತರದ ಜನರ ಜೊತೆ ಆತನ ಒಡನಾಟವಿತ್ತು. ಸಾಮಾನ್ಯ ಜನರು ಅನುಭವಿಸುತ್ತಿರುವ ಕಷ್ಟ ಸುಖಗಳ ಪರಿಚಯವಿತ್ತು. ಅವರ ನಾಡಿಮಿಡಿತಗಳನ್ನು ಚೆನ್ನಾಗಿ ಬಲ್ಲವನಾಗಿದ್ದ. ಈ ಮೊದಲು ಮನಬಂದಂತೆ ಕರಗಳನ್ನು ಆಕರಿಸುವ ಪದ್ಧತಿ ಇತ್ತು, ಅದಕ್ಕೆ ಆತ ತಿಲಾಂಜಲಿ ಹಾಕಿದ. ಭೂಮಿಯ ಅಳತೆ ಮಾಡಿದ. ಹೊಲಗಳ ಕ್ಷೇತ್ರಫಲ ಹಾಗೂ ಅಲ್ಲಿ ಬೆಳೆಯುವ ಬೆಳೆಗಳ ಮೌಲ್ಯೀಕರಣದ ಮೇಲಿಂದ ಕರ ವಸೂಲಿ ಮಾಡುವ ಶಾಸ್ತ್ರೀಯ ಪದ್ಧತಿಯನ್ನು ಜಾರಿಗೆ ತಂದ. ನೇಗಿಲಯೋಗಿಗೆ ಯಾವುದೇ ರೀತಿಯಿಂದ ಅನ್ಯಾಯವನ್ನು ಮಾಡಬಾರದಾಗಿ ತನ್ನ ಸೈನಿಕರಿಗೆ ಕಟ್ಟುನಿಟ್ಟಾದ ಎಚ್ಚರಿಕೆ ಕೊಟ್ಟ. ಸೈನಿಕರು ಈ ಮೊದಲು ರೈತರ ಹೊಲದಲ್ಲಿ ತಮ್ಮ ಕುದುರೆಗಳನ್ನು, ಆನೆಗಳನ್ನು ಬಿಟ್ಟು ನಾಶ ಮಾಡುತ್ತಿದ್ದರು. ಅವರಿಂದ ಉಚಿತವಾಗಿ ದವಸ ಧಾನ್ಯಗಳನ್ನು ಒತ್ತಾಯದಿಂದ ವಸೂಲಿ ಮಾಡುತ್ತಿದ್ದರು. ಅವರ ದುರ್ವರ್ತನೆಯ ಮೇಲೆ ಯಾರದೂ ಅಂಕುಶವಿರುತ್ತಿರಲಿಲ್ಲ. ಆದರೆ ಶಿವಾಜಿ ಇದಕ್ಕೆ ತಡೆ ಹಾಕಿದ. ಸೈನಿಕರಿಂದ ರೈತರಿಗೆ ಅನ್ಯಾಯವಾದರೆ ನೇರವಾಗಿ ತನ್ನನ್ನು ಸಂಪರ್ಕಿಸಬಹುದು ಎಂದು ಭರವಸೆ ಕೊಟ್ಟ. ಈ ತೆರನಾದ ಜನಹಿತ ಕಾರ್ಯಕ್ರಮಗಳಿಂದ ಆತ ಪ್ರಜೆಗಳ ರಾಜನಾದ. ತಮ್ಮ ಬಗ್ಗೆ ಕಳಕಳಿ ಇರುವ ರಾಜನ ಬಗ್ಗೆ ರೈತರಿಗೆ, ಪ್ರಜೆಗಳಿಗೆ ಸಹಜವಾಗಿ ಪ್ರೀತಿ ನಿರ್ಮಾಣವಾಯಿತು. ರಾಜನಿಗಾಗಿ ಪ್ರಾಣ ತ್ಯಾಗ ಮಾಡಲು ಸಿದ್ಧರಾದರು. ಹೀಗಾಗಿ ಶಿವಾಜಿಯ ಸೈನ್ಯದಲ್ಲಿ ತರಬೇತಿ ಪಡೆದ ಸೈನಿಕರಲ್ಲದೆ ಸಾಮಾನ್ಯ ಜನರಾದ ರೈತರು, ಕಮ್ಮಾರರು, ಬಡಗಿಗಳು, ಕೂಲಿಕಾರರು ಕೂಡ ಇರುತ್ತಿದ್ದರು.

ಪ್ರಕಾಶ ಪರ್ವತೀಕರ

ಬಾಲ್ಯದಲ್ಲಿ ಶಿವಾಜಿ ರಾಮಾಯಣ ಮಹಾಭಾರತ ಕಥೆಗಳನ್ನು ಕೇಳುತ್ತ ಬೆಳೆದ. ಸಂಸ್ಕಾರವಂತನಾದ. ಹೀಗಾಗಿ ಸ್ತ್ರೀಯರ ಬಗ್ಗೆ ಆತನಲ್ಲಿ ಅಪಾರ ಆದರ ಹಾಗೂ ಗೌರವ ನಿರ್ಮಾಣವಾಗಿತ್ತು. ಪರಸ್ತ್ರೀಯರು ಯಾವುದೇ ಜಾತಿಯವರಿರಲಿ ಅವರ ಮಾನ ಕಾಪಾಡುವದು ತನ್ನ ಧರ್ಮವೆಂದು ತಿಳಿದುಕೊಂಡಿದ್ದ. ರಾಂಜಿಯ ಒಬ್ಬ ಪಾಟೀಲ ಒಬ್ಬ ಬಡ ರೈತನ ಮಗಳನ್ನು ಅಪಹರಿಸಿ ಬಲಾತ್ಕಾರ ಮಾಡಿದ್ದ. ಈ ಸುದ್ದಿ ತಿಳಿದ ಶಿವಾಜಿ ಪಾಟೀಲನನ್ನು ಬಂಧಿಸಿ ಅವನ ಕೈ ಹಾಗೂ ಕಾಲುಗಳನ್ನು ಕಡಿಯಲು ಆಜ್ಞಾಪಿಸಿದ. ಶಿವಾಜಿಯ ಸೇನಾಪತಿ ಸಕುಜಿ ಗಾಯಕವಾಡ, ಬೆಳವಡಿಯ ಕೋಟೆಗೆ ಮುತ್ತಿಗೆ ಹಾಕಿದ. ಆ ಕೋಟೆಯ ರಾಣಿ ಸಾವಿತ್ರಿಬಾಯಿ ದೇಸಾಯಿ ಇಪ್ಪತ್ತೇಳು ದಿನ ಕಲಿತನದಿಂದ ಯುದ್ಧ ಮಾಡಿ ಸೋತಳು. ಗಾಯಕವಾಡ ಆಕೆಯನ್ನು ಬಂಧಿಸಿ ಸೆರೆಮನೆಗೆ ತಳ್ಳಿದ. ಅಲ್ಲದೆ ಆಕೆಯನ್ನು ಬಲಾತ್ಕರಿಸಿದ. ಇದನ್ನು

ತಿಳಿದ ಶಿವಾಜಿ ಗಾಯಕವಾಡನ ಎರಡೂ ಕಣ್ಣುಗಳನ್ನು ಕೀಳಿಸಿದ. ಯುದ್ಧದಲ್ಲಿ ಸೆರೆ ಸಿಕ್ಕ ಸ್ತ್ರೀಯರಿಗೆ ಆತ ಅರಿಶಿಣ, ಕುಂಕುಮ, ಬಳೆ, ಹೂ ನೀಡಿ ಉಡಿ ತುಂಬಿ ಕಳಿಸುತ್ತಿದ್ದ. ಸೆರೆ ಸಿಕ್ಕ ಶತ್ರು ಪಕ್ಷದ ಸ್ತ್ರೀಯರನ್ನು ಮಾತೃ ಸಮಾನರಾಗಿ ಕಾಣುತ್ತಿದ್ದ. ಒಮ್ಮೆ ಸೆರೆಯಾಳಾಗಿ ಸಿಕ್ಕ ಮುಸಲ್ಮಾನ ಸ್ತ್ರೀಯನ್ನು ನೋಡಿ, "ನನ್ನ ತಾಯಿಯೂ ಇವಳಷ್ಟೇ ಸುಂದರಿ ಆಗಬೇಕಾಗಿತ್ತು" ಎಂದು ಉದ್ಗಾರ ತೆಗೆದನಂತೆ. ಇಂಥ ಉದ್ಗಾರಗಳು ಚರಿತ್ರಸಂಪನ್ನ ಹಾಗೂ ಸೌಂದರ್ಯದ ಸಲುವಾಗಿ ನಿರ್ಮಲ ದೃಷ್ಟಿಕೋನ ಇದ್ದ ಮಾನವನಿಗೆ ಮಾತ್ರ ಬರುತ್ತವೆ. ಅಂದರೆ ಆತನ ಕಾಲದಲ್ಲಿ ಹೆಣ್ಣುಮಕ್ಕಳು ಸುರಕ್ಷಿತರಾಗಿದ್ದರು ಎಂದು ಅರ್ಥ.

ಶಿವಾಜಿ ಮುಸಲ್ಮಾನರ ವೈರಿಯಾಗಿದ್ದ, ಅವರ ಬಗ್ಗೆ ಅವನ ರಕ್ತದಲ್ಲಿ ದ್ವೇಷ ಭಾವನೆ ಕುದಿಯುತ್ತಿತ್ತು, ಅವನು ಹಿಂದೂ ಧರ್ಮ ಸಂರಕ್ಷಕನಿದ್ದ, ಗೋಬ್ರಾಹ್ಮಣ ಪ್ರತಿಪಾದಕನಾಗಿದ್ದ, ಇತ್ಯಾದಿಯಾಗಿ ಅವನ ಬಗ್ಗೆ ಪ್ರಚಾರ ಮಾಡಲಾಗುತ್ತಿದೆ. ಶಿವಾಜಿ ಮತ್ತು ಹಿಂದೂ ಧರ್ಮವನ್ನು ತಳಕು ಹಾಕುವ ಹುನ್ನಾರ ನಡೆಯುತ್ತಿದೆ. ಕೆಲ ಜನರು ಅವನನ್ನು ಮಹಾದೇವನ ಅವತಾರವೆಂದೂ ದೈವತ್ವದ ಪಟ್ಟಕ್ಕೆ ತಂದು ಕೂಡಿಸುವ ಪ್ರಯತ್ನ ಕೂಡ ಮಾಡಿದ್ದಾರೆ. ಭವಾನಿ ಮಾತೆ ಧರ್ಮ ಸಂರಕ್ಷಣೆಗಾಗಿ, ದುಷ್ಟರ ಸಂಹಾರಕ್ಕಾಗಿ ಅವನಿಗೆ ಖಡ್ಗವನ್ನು ದಯಪಾಲಿಸಿದ್ದಾಳೆ ಎಂದು ಪ್ರಚಾರ ಮಾಡುತ್ತಿದ್ದಾರೆ. ಇವೆಲ್ಲ ಸುಳ್ಳಿನಿಂದ ತುಂಬಿವೆ. ಇವೆಲ್ಲ ಅಂತೆ ಕಂತೆಗಳ ಸಂತೆ. ವಸ್ತುಸ್ಥಿತಿ ಬೇರೆಯೇ ಇದೆ. ಆಗ ಧರ್ಮಕ್ಕಾಗಿ ಯುದ್ಧಗಳು ಆಗಲೇ ಇಲ್ಲ. ಕೇವಲ ರಾಜ್ಯಪ್ರಾಪ್ತಿಗಾಗಿ ಮಾತ್ರ ಕದನಗಳಾಗುತ್ತಿದ್ದವು. ಮೊದಮೊದಲು ಬಂದ ಮುಸ್ಲಿಂ ಆಕ್ರಮಣಕಾರರು ಸುಲಿಗೆ ಮಾಡಿಕೊಂಡು ಹೋದರು, ದೌರ್ಜನ್ಯ ಎಸಗಿದ್ದು ಮಾತ್ರ ಸತ್ಯ.

ನಿಜಾಮಶಾಹಿಯ ಮೂಲ ಪುರುಷ ಗಾಂಗವೀ ಒಬ್ಬ ಬ್ರಾಹ್ಮಣನಾಗಿದ್ದ. ಅಹಮದನಗರದ ಬಾದಶಹಾನ ತಂದೆ ಹಿಂದೂ ಆಗಿದ್ದ. ಆದಿಲ್‌ಶಾಹಿ ಹಿಂದೂ (ಮರಾಠಿ) ಹುಡುಗಿಯನ್ನು ಲಗ್ನವಾಗಿದ್ದ. ಬೀದರದ ಕಾಸೀಮ ಬರೀದನ ಮಗ ಕೂಡ ಹಿಂದೂ ಸ್ತ್ರೀಯನ್ನು ಲಗ್ನವಾಗಿದ್ದ. ಶಿವಾಜಿಯ ತಂದೆ ಶಹಾಜಿ ಆದಿಲಶಾಹಿಯ ಸೇನಾಪತಿ ಆಗಿದ್ದ. ಅಂದರೆ ಎಲ್ಲಿಯವರೆಗೆ ಹಿಂದೂಗಳಿಂದ ಅಪಾಯ ವಾಗುವದಿಲ್ಲವೋ, ಹಾಗೂ ಹಿಂದೂ ಸರದಾರರು ಮುಸ್ಲಿಂ ರಾಜರಿಗೆ ಸಹಾಯ ಮಾಡುತ್ತಿದ್ದರೋ, ಅಲ್ಲಿಯವರೆಗೆ ಮುಸ್ಲಿಂ ರಾಜ್ಯಕರ್ತರು ಹಿಂದೂ ಧರ್ಮಸಹಿಷ್ಣುಗಳಾಗಿದ್ದರು. ಅಂದರೆ ಹಿಂದೂ ಮುಸ್ಲಿಂ ಧರ್ಮಗಳು ಮುಖ್ಯವಾಗಿರಲಿಲ್ಲ. ರಾಜ್ಯ ಪ್ರಾಪ್ತಿ ಮುಖ್ಯವಾಗಿತ್ತು. ಅಕಬರನ ಬಗ್ಗೆ ಹೆಚ್ಚು ಹೇಳುವ ಕಾರಣವಿಲ್ಲ. ಔರಂಗಜೇಬನ ಹೊರತು ಉಳಿದೆಲ್ಲ ಮೊಗಲ ರಾಜರು ಧರ್ಮಸಹಿಷ್ಣು ಗಳಾಗಿದ್ದರು. ಅವರ ರಾಜ್ಯದಲ್ಲಿ ಹಿಂದೂಗಳು ದೊಡ್ಡ ದೊಡ್ಡ ಹುದ್ದೆಗಳಲ್ಲಿದ್ದರು. ಇನ್ನು ಶಿವಾಜಿಯ ಸೈನ್ಯದಲ್ಲಿ, ಆಡಳಿತದಲ್ಲಿ ಸಾಕಷ್ಟು ಮುಸಲ್ಮಾನರಿದ್ದರು. ಕೋಕಣ ಪಟ್ಟಿಯ ಭೂಭಾಗ ಸಂರಕ್ಷಣ ದೃಷ್ಟಿಯಿಂದ




ಅತಿ ಸಂವೇದನಾತ್ಮಕವಾಗಿತ್ತು. ಈ ಪ್ರದೇಶದಲ್ಲಿ ದರ್ಯಾಸಾರಂಗ ದೌಲತಖಾನ್ ಎಂಬುವವನು ಶಿವಾಜಿಯ ಮುಖ್ಯ ಸೇನಾಪತಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ. ಮದ್ದುಗುಂಡು ತೋಫುಖಾನೆ ತಯಾರಿಕೆಯಲ್ಲಿ ನುರಿತವನಾಗಿದ್ದ. ಈತ ಶಿವಾಜಿಯ ಎಡಗೈ ಬಂಟನಾಗಿದ್ದ. ಶಿವಾಜಿಯ ಅಂಗರಕ್ಷಕ ಮದಾರಿ ಮ್ಹೇತರನೂ ಮುಸ್ಲಿಮನೆ. ಶಿವಾಜಿ ಹುಲಿ ಉಗುರು ಧರಿಸಿ ಅಫಝುಲಖಾನನ ವಧೆ ಮಾಡಿದ ಪ್ರಸಂಗ ಇತಿಹಾಸದಲ್ಲಿ ಬಹು ಪ್ರಸಿದ್ಧವಾದದ್ದು. ಈ ಘಟನೆ ನಡೆದ ವೇಳೆಯಲ್ಲಿ ಅಲ್ಲಿ ಉಪಸ್ಥಿತಿಯಿದ್ದ ಶಿವಾಜಿಯ ವಕೀಲ ಕಾಜಿ ಹೈದರ ಮುಸ್ಲಿಂನಾಗಿದ್ದರೆ, ಅಫಝುಲಖಾನನ ವಕೀಲ ಕೃಷ್ಣಾಜಿ ಭಾಸ್ಕರ ಒಬ್ಬ ಚಿತ್ಪಾವನ ಬ್ರಾಹ್ಮಣನಿದ್ದ. ರಾಯಭಾಗ ಸಮೀಪ ನಡೆದ ಯುದ್ಧದಲ್ಲಿ ಶಿವಾಜಿಯ ಸೇನಾಪತಿ ಸಿದ್ಧಿ ಹಲಾಲ ಎಂಬ ಮುಸಲ್ಮಾನನಾಗಿದ್ದರೆ, ಆದಿಲಶಾಹಿಯ ಕಡೆಯಿಂದ ರುಸ್ತುಮ ಜಮಾ ಎಂಬ ಮುಸಲ್ಮಾನ ಸೇನಾಪತಿಯಿದ್ದ. ಶಿವಾಜಿಯನ್ನು ಸೋಲಿಸಿ ಅವನನ್ನು ಬಂಧಿಸಿ ದಿಲ್ಲಿಗೆ ಕರೆತಂದವನು ಹಿಂದೂ ಧರ್ಮೀಯನಾದ ಮಿರಝಾ ಜಯಸಿಂಹ, ಶಿವಾಜಿಯ ಸೈನ್ಯದಲ್ಲಿ ಸಾವಿರ ಸಂಖ್ಯೆಯಲ್ಲಿ ಪಠಾಣರಿದ್ದರು. ಶಹಜಹಾನನ ಸೈನ್ಯದಲ್ಲಿ ಸುಮಾರು ಐನೂರು ಹಿಂದೂ ಸರದಾರರಿದ್ದರು. ಅಂದರೆ ೨೩% ಹಿಂದೂಗಳಿದ್ದರು. ಅಕಬರನ ಸೈನ್ಯದ ನೇತೃತ್ವ ವಹಿಸಿದವನು, ರಾಜಾ ಮಾನಸಿಂಗ. ಆಗ ಆತನ ಸೈನ್ಯದಲ್ಲಿ ೬೦,೦೦೦ ಮೊಗಲ ಸೈನಿಕರಿದ್ದರೆ, ೪೦,೦೦೦ ಹಿಂದೂ ಸೈನಿಕರಿದ್ದರು. ವಿಚಿತ್ರವೆಂದರೆ ಔರಂಗಜೇಬನ ಸೈನ್ಯದಲ್ಲಿ ಹಿಂದೂ ಸರದಾರರ ಸಂಖ್ಯೆಯಲ್ಲಿ ಏರಿಕೆಯಾಗಿ ಅದು ೩೨%ಗೆ ತಲುಪಿತು. ಈ ಔರಂಗಜೇಬ ಕುಶಲ ಸೇನಾಪತಿ ಹಾಗೂ ಯುದ್ಧನೀತಿ ತಜ್ಞನಾಗಿದ್ದ. ೧೬೮೧ರಲ್ಲಿ ಆತ ದಕ್ಷಿಣದ ಆದಿಲಶಾಹಿ ಹಾಗೂ ಕುತುಬಶಾಹಿಯ ಹಾಗೂ ಸಂಭಾಜಿಯ ಮೇಲೆ ದಾಳಿ ಮಾಡಲು ಹೊರಟ. ಆಗ ಆತನ ಸೈನ್ಯದಲ್ಲಿ ಹಿಂದೂಗಳ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿತ್ತು. ಸ್ವಧರ್ಮೀಯರಾದ ಶತ್ರುಗಳ ಬಗ್ಗೆ ದಯೆ ತೋರಿಸದೆ, ಮುಸಲ್ಮಾನ ರಾಜರನ್ನು ಸಮೂಲವಾಗಿ ನಾಶ ಮಾಡಿದ. ಸಂಭಾಜಿಯನ್ನು ಸೆರೆ ಹಿಡಿದ. ವಿಚಿತ್ರವೆಂದರೆ ಒಂದು ಕಡೆಗೆ ಮುಸಲ್ಮಾನರಾದ ಆದಿಲಶಾಹಿ ಹಾಗೂ ಕುತುಬಶಾಹಿ ಮತ್ತು ಹಿಂದೂ ಸಂಭಾಜಿ ಒಂದು ಕಡೆಗೆ ಇದ್ದರೆ ಇನ್ನೊಂದು ಕಡೆಗೆ ಮುಸಲ್ಮಾನ ಔರಂಗಜೇಬ ಹಾಗೂ ಆತನ ಅಸಂಖ್ಯ ಹಿಂದೂಗಳನ್ನೊಳಗೊಂಡ ಸೈನ್ಯವಿತ್ತು. ಮುಸಲ್ಮಾನರು ಮುಸಲ್ಮಾನರ ಕೂಡ ಹಿಂದೂಗಳು ಸ್ವಧರ್ಮೀಯರ ವಿರುದ್ಧ, ಯುದ್ಧ ಮಾಡುವ ಸ್ಥಿತಿ ಉಂಟಾಗಿತ್ತು. ಅದರರ್ಥ ಆಗ ಧರ್ಮದ ರಾಜಕಾರಣ ಇರಲೇ ಇಲ್ಲ. ಧರ್ಮನಿಷ್ಠೆಗಿಂತ ರಾಜನಿಷ್ಠೆ ಮುಖ್ಯವಾಗಿತ್ತು. ಮುಸಲ್ಮಾನ ರಾಜರಿಗೆ ನಿಷ್ಠರಾಗಿ, ತಮ್ಮ ಸ್ವಜಾತಿಯ ಹಿಂದೂಗಳ ಕೂಡ ಹೋರಾಡಿದ ಹಿಂದೂಗಳಿಗೆ ಧರ್ಮ ದ್ವೇಷಿಗಳು ಎಂದು ಯಾರೂ ದೂಷಿಸಲಿಲ್ಲ.

ಮುಸಲ್ಮಾನ ರಾಜರು ಕ್ರೂರರಿದ್ದರು, ಹಿಂದೂ ದೇವಾಲಯಗಳನ್ನು ನಾಶ ಮಾಡಿದರು. ನಮ್ಮ ಹಿಂದೂ ಧರ್ಮವನ್ನು ಭ್ರಷ್ಟ ಮಾಡುವ ಅವರನ್ನು ನಾವು ಸಂಘಟಿತರಾಗಿ ಎದುರಿಸಬೇಕು, ಎಂದು ಈಗಿನ ಕೆಲ ಹಿಂದೂ ಸಂಘಟನೆಗಳ ಯುಕ್ತಿವಾದವಾದರೆ, ಮುಸ್ಲಿಂ ಜಾತೀಯವಾದಿಗಳು, "ಹಿಂದೂಗಳ ಧರ್ಮ, ಕಾಫೀರರ ಧರ್ಮ. ಹೀಗಾಗಿ ಹಿಂದಕ್ಕೆ ನಮ್ಮ ಪೂರ್ವಜರು ಅವರನ್ನು ಬಗ್ಗು ಬಡೆದಿದ್ದರಲ್ಲಿ ತಪ್ಪೇನೂ ಇಲ್ಲ" ಎಂದು ತಮ್ಮ ವಾದ ಮಂಡಿಸುತ್ತಾರೆ. ಸುಮಾರು ಮೂರೂವರೆ ಶತಮಾನ ರಾಜ್ಯವಾಳಿದ ತಾವು ರಾಜಸತ್ತೆಯಿಂದ ವಂಚಿತರಾಗಿದ್ದಕ್ಕೆ ಮುಸಲ್ಮಾನರಿಗೆ ಕೋಪವಿದ್ದದ್ದು, ಸಹಜವಾಗಿದೆ. ಪ್ರಾರಂಭದಲ್ಲಿ ರಾಜ್ಯ ವಿಸ್ತಾರ ಮಾಡುವಾಗ ಮುಸ್ಲಿಂ ಆಕ್ರಮಣಕಾರರು ದೇವಾಲಯಗಳನ್ನು ಒಡೆದು ಮೂರ್ತಿಗಳನ್ನು ಭಂಜಿಸಿದ್ದು ನಿಜ. ಆದರೆ ಇದು ಅರ್ಧ ಸತ್ಯವಾಗಿದೆ. ಅರಬ, ತುರ್ಕಿ ಹಾಗೂ ಅಫ್‌ಘಾನ್ ಮುಸ್ಲಿಂ ರಾಜರು ತಮ್ಮ ಸೈನಿಕರಿಗೆ ನಿಯಮಿತವಾಗಿ ವೇತನ ಕೊಡುತ್ತಿರಲಿಲ್ಲ. ಲೂಟಿ ಮಾಡಿದ ಸಂಪತ್ತಿನಿಂದ ಸೈನಿಕರಿಗೆ ವೇತನ ಕೊಡಲಾಗುತ್ತಿತ್ತು. ಆಗ ದೇವಾಲಯಗಳು ಧಾರ್ಮಿಕ ಕೇಂದ್ರವಾಗಿದ್ದವಲ್ಲದೆ, ಸತ್ತೆ ಹಾಗೂ ಸಂಪತ್ತಿನ ಕೇಂದ್ರವಾಗಿದ್ದವು. ಹಿಂದೂ ದೇವಸ್ಥಾನಗಳಲ್ಲಿ ಅಪಾರ ಸಂಪತ್ತು ಇದೆ ಎಂದು ತಿಳಿದ ಅನ್ಯಧರ್ಮೀಯರು ಲೂಟಿ ಮಾಡುತ್ತಿದ್ದದ್ದು ಸತ್ಯವಾಗಿತ್ತು. ಅಲ್ಲದೆ ಇದರಿಂದ ಅವರಿಗೆ ಇನ್ನೊಂದು ಲಾಭವಾಗುತ್ತಿತ್ತು. ಕಾಫೀರರ ಮಂದಿರವನ್ನು ಹಾಗೂ ಧರ್ಮವನ್ನು ನಾಶ ಮಾಡಿದ್ದೇವೆ ಎಂದು ಪ್ರಚಾರ ಮಾಡಿ ಮುಲ್ಲಾ ಮೌಲವಿ ಹಾಗೂ ಮುಸ್ಲಿಂ ಸಮಾಜದಿಂದ ಶಬ್ಬಾಶಿಕೆ ಸಿಗುತ್ತಿತ್ತು. ಧರ್ಮಾಂಧ ಔರಂಗಜೇಬ ಹಿಂದೂಗಳಿಗೆ ಅನ್ಯಾಯ ಮಾಡಿದ್ದಂತೂ ನಿಜವೆ. ಆದರೆ ಅದೇ ವೇಳೆಗೆ ಆತ

ಅನೇಕ ದೇವಾಲಯಗಳಿಗೆ ದಾನ ಮಾಡಿದ್ದು ಅಷ್ಟೇ ಸತ್ಯ. ಜಗನ್ನಾಥ ಮಂದಿರಕ್ಕೆ ೨೦೦ ಹಳ್ಳಿಗಳನ್ನು ಇನಾಮಾಗಿ ಕೊಟ್ಟ. ಮಥುರೆ ಹಾಗೂ ಬನಾರಸದಲ್ಲಿಯ ಕೆಲವು ಗುಡಿಗಳಿಗೆ ದಾನ ಮಾಡಿದ. ಹೀಗೆ ದಾನ ಮಾಡುವ ಕಾರ್ಯದ ಹಿಂದೆ ರಾಜಕಾರಣವಿತ್ತು. ಹಿಂದೂ ಪ್ರಜೆಗಳು ಸಂತೋಷದಿಂದಿರಲಿ, ತಮ್ಮ ಬಗ್ಗೆ ಇದ್ದ ತಪ್ಪು ಭಾವನೆ ದೂರವಾಗಿ ಅವರಿಂದ, ತಮ್ಮ ರಾಜ್ಯ ಸತ್ತೆಗೆ ಯಾವುದೇ ತೊಂದರೆಯಾಗದಿರಲಿ, ತಾವು ಸುರಕ್ಷಿತವಾಗಿರಲಿ ಎಂಬ ಉದ್ದೇಶವಿತ್ತು ಅಷ್ಟೇ. ಕೇವಲ ಅನ್ಯ ಮತೀಯರೇ ಹಿಂದೂ ದೇವಾಲಯಗಳನ್ನು ಲೂಟಿ ಮಾಡಿದರೆನ್ನುವದು ತಪ್ಪು ತಿಳಿವಳಿಕೆ. ಕಾಶ್ಮೀರದ ರಾಜ ಹರ್ಷದೇವ ದೇವತಾಮೂರ್ತಿಗಳನ್ನು ಕದ್ದು ಕರಗಿಸಿ ಮಾರುತ್ತಿದ್ದನಂತೆ. ಪೇಶ್ವೆಯವರು ಶೃಂಗೇರಿಯ ಮೇಲೆ ದಾಳಿ ಮಾಡಿ ಲೂಟಿ ಮಾಡಿದ್ದು ಐತಿಹಾಸಿಕ ಸತ್ಯ. ಅಂದರೆ ರಾಜರಿಗೆ ಧರ್ಮ ಎರಡನೇ ಸ್ಥಾನದಲ್ಲಿತ್ತು. ರಾಜ್ಯ ಗಳಿಕೆ ಮುಖ್ಯವಾಗಿತ್ತು. ಅದನ್ನು ಸ್ಥಾಪನೆ ಮಾಡಲಿಕ್ಕೆ ಧರ್ಮದ ಆಧಾರ ಬೇಕಾಗಿತ್ತು. ಅದೇ ಮುಖ್ಯವಾಗಿರಲಿಲ್ಲ.

ಶಿವಾಜಿ ಕೇವಲ ಮುಸ್ಲಿಂ ರಾಜರ ಕೂಡ ಹೋರಾಡಿದನೆಂಬ ತಪ್ಪು ಕಲ್ಪನೆ ಬಹಳಷ್ಟು ಜನರಲ್ಲಿದೆ. ತಮ್ಮ ಸ್ವಜಾತೀಯ ಮರಾಠಾ ಸರದಾರರಾದ ಮೋಹಿತೆ, ಮೋರೆ, ಸಾವಂತ, ದಳವಿ, ಸುರ್ವೆ ಹಾಗೂ ನಿಂಬಾಳಕರ ಇವರ ವಿರುದ್ಧ ಸಹಿತ ಹೋರಾಡಿದ. ಈ ಸರದಾರರೆಲ್ಲ ಹಿಂದೂ ಧರ್ಮದ ಮೇಲೆ ಅಪಾರ ಶ್ರದ್ಧೆ ಉಳ್ಳವರೆ. ಹಾಗಾದರೆ ಈ ಜನ ಹಿಂದೂ ಧರ್ಮ ಸಂರಕ್ಷಣೆ ಮಾಡುವ ಶಿವಾಜಿಯನ್ನು ಏಕೆ ವಿರೋಧಿಸಿದರು ? ಅದಕ್ಕೆ ಕಾರಣ ಬೇರೆಯಿತ್ತು. ಮೊಗಲ ಹಾಗೂ ಆದಿಲಶಾಹಿಯ ವಿರುದ್ಧ ತಾನು ನಡೆಸಿರುವ ಯುದ್ಧಕ್ಕೆ ತಮ್ಮ ಬೆಂಬಲ ನೀಡಬೇಕೆಂಬ ಶಿವಾಜಿಯ ಬೇಡಿಕೆಯನ್ನು ತಿರಸ್ಕರಿಸಿದರು. ಹೀಗಾಗಿ ಅವರ ಅಧಿಕಾರ ವ್ಯಾಪ್ತಿಯಲ್ಲಿರುವ ರೈತರಿಗೆ ಕರ ಕೊಡದಿರುವಂತೆ ಶಿವಾಜಿ ಪ್ರಚೋದಿಸುತ್ತಿದ್ದ. ಹೀಗಾಗಿ ಅವರಿಗೆ ಶಿವಾಜಿಯ ಮೇಲೆ ಸಿಟ್ಟಿತ್ತು. ಅಂದರೆ ಇಲ್ಲಿ ಎಲ್ಲರಿಗೆ ವೈಯಕ್ತಿಕ ಲಾಭ ಮುಖ್ಯವಾಗಿತ್ತು. ಧರ್ಮವಾಗಿರಲಿಲ್ಲ. ಶಿವಾಜಿಯ ವಿರೋಧಕರಲ್ಲಿ ಬಹಳಷ್ಟು ಜನ ಅವನ ಮನೆತನದವರು ಹಾಗೂ ರಕ್ತ ಸಂಬಂಧಿಕರೂ ಆಗಿದ್ದರು. ವ್ಯಂಕೋಜಿ ಹಾಗೂ ಮಂಬಾಜಿ ಭೋಸಲೆ, ಜಿವಾಜಿರಾವ ಹಾಗೂ ರುಸ್ತುಮರಾವ್ ಇವರು ಶಿವಾಜಿಯ ಸೋದರ ಮಾವಂದಿರು ತಾಯಿಯ ಬಳಗದವರು. ಕೊನೆಯ ತನಕ ಶಿವಾಜಿಯ ಮೇಲೆ ಹಗೆ ಸಾಧಿಸಿದವರು.

ಶಿವಾಜಿ ಹಿಂದೂವಾಗಿದ್ದ, ತನ್ನ ಧರ್ಮದ ಮೇಲೆ ಅಪಾರ ಶ್ರದ್ಧೆ ಇತ್ತು. ಧಾರ್ಮಿಕ ಕಾರ್ಯದಲ್ಲಿ ತೊಡಗಿರುತ್ತಿದ್ದ. ದೇವರನ್ನು, ಸಂತರನ್ನು ಪೂಜಿಸುತ್ತಿದ್ದ, ದಾನ ಮಾಡುತ್ತಿದ್ದ. ಇದೆಲ್ಲ ಸರಿ, ಇದರ ಅರ್ಥ ಆತ ಇಸ್ಲಾಂಅನ್ನು ದ್ವೇಷ ಮಾಡುತ್ತಿದ್ದನೇ ? ಹಾಗೂ ಹಿಂದೂಸ್ತಾನವನ್ನು ಕೇಸರೀಕರಣ ಮಾಡುವ ಅವನ ಉದ್ದೇಶವಿತ್ತೇ ? ಇದಕ್ಕೆಲ್ಲ ಉತ್ತರ ಇಲ್ಲವೆಂದೇ ಹೇಳಬೇಕು. ಸುರತ್ ಹಾಗೂ ಜುನ್ನರವನ್ನು ಶಿವಾಜಿ ಲೂಟಿ ಮಾಡಿದ ಸಂಪೂರ್ಣ ವಿವರಗಳು ದೊರಕುತ್ತವೆ. ಈ ಪ್ರಸಂಗಗಳಲ್ಲಿ ಆತ ಒಂದೂ ಮಸೀದಿಯನ್ನು ಕೆಡವಿದ ಉದಾಹರಣೆಗಳು ಕಾಣಬರುವದಿಲ್ಲ. ಮಸೀದಿ ಹಾಗೂ ದರ್ಗಾಗಳಿಗೆ ಆತ ದಾನ ಮಾಡಿದ ಸಾಕಷ್ಟು ಉದಾಹರಣೆಗಳಿವೆ. ಮುಸ್ಲಿಂ ಸಾಧು ಹಾಗೂ ಫಕೀರರನ್ನು ಆದರದಿಂದ ನೋಡುತ್ತಿದ್ದ. ಅವನ ಆಧ್ಯಾತ್ಮಿಕ ಗುರು "ಯಾಕುತ ಬಾಬಾ" ಒಬ್ಬ ಸೂಫಿ ಸಂತನಾಗಿದ್ದ. ಖಾಫೀಖಾನ ಎಂಬ ಮುಸ್ಲಿಂ ಇತಿಹಾಸಕಾರನು ಶಿವಾಜಿಯ ಬಗ್ಗೆ ಒಂದು ಕಡೆಗೆ ಹೀಗೆ ನೊಂದು ಹೇಳಿದ್ದಾನೆ. ಶಿವಾಜಿ ತನ್ನ ಸೈನಿಕರಿಗೆ ಕಟ್ಟುನಿಟ್ಟಿನ ಆಜ್ಞೆ ಮಾಡಿದ್ದ, ಮಸೀದಿ ಲೂಟಿ ಮಾಡಬಾರದು. ಕುರಾನ್ ಗ್ರಂಥಕ್ಕೆ ಅಪಮಾನ ಮಾಡಬಾರದು. ಒಂದು ವೇಳೆ ಕುರಾನ್ ಗ್ರಂಥ ಹಸ್ತಗತವಾದರೆ ಅದನ್ನು ತಮ್ಮ ಮುಸ್ಲಿಂ ಸಿಬ್ಬಂದಿಯ ಕಡೆಗೆ ಕೊಡಬೇಕು, ಮುಸ್ಲಿಂ ಸ್ತ್ರೀಯರನ್ನು ಅಗೌರವದಿಂದ ನೋಡಬಾರದು, ಇತ್ಯಾದಿ ಇತ್ಯಾದಿ. ಶಿವಾಜಿ ಔರಂಗಜೇಬನಿಗೆ ಪತ್ರ ಬರೆದಿದ್ದು ಬಹು ಪ್ರಸಿದ್ಧವಾಗಿದೆ. ಅದು ಹೀಗಿದೆ, "ತಾವು ಹಿಂದೂಗಳಿಗೆ ಝಿಝಿಯಾ ಕರ ಹಾಕಿದ್ದು ಮುಗಲ ರಾಜಸತ್ತೆಯ ಮೂಲ ಸಿದ್ಧಾಂತಕ್ಕೆ ವಿರೋಧವಾಗಿದೆ. ನಿಮ್ಮ ಹಿರೆ ಅಜ್ಜ ಅಕಬರ ೫೨ ವರ್ಷ ನ್ಯಾಯದಿಂದ ರಾಜ್ಯವಾಳಿದರು. ಅವರು ಪ್ರಜೆಗಳ ಮೇಲೆ ಝಿಝಿಯಾ ಕರ ಹೇರಲಿಲ್ಲ. ಹೀಗಾಗಿ ಅವರಿಗೆ ಜಗದ್ಗುರು ಎಂಬ ಪದವಿ ಪ್ರಾಪ್ತಿಯಾಯಿತು. ಆದರೆ ತಾವು ಮಾಡಿದ ಕೃತಿ ವಿವೇಚನೆಗೆ ಹೊರತಾಗಿದೆ. ಬಡ ಹಿಂದೂಗಳಿಗೆ ಮಾಡಿದ ಅನ್ಯಾಯವಾಗಿದೆ. ಕುರಾನ್ ಇದು ಈಶ್ವರನ ವಾಣಿಯಾಗಿದೆ. ಈಶ್ವರನೆಂದರೆ ಕೇವಲ ಮುಸ್ಲಿಂರ ಈಶ್ವರನಲ್ಲ, ಅವನು ಎಲ್ಲ ಮನದವರ ದೇವನು. ಎಲ್ಲರ ದೇವನೂ ಒಬ್ಬನೇ. ಆದ್ದರಿಂದ ನೀವು ಹಿಂದೂಗಳ ಮೇಲೆ ಮಾಡುವ



ನಾವು ಕಾಫಿ, ಟಿಗೆ 5ರೂ ಹೆಚ್ಚಿಗೆ ಮಾಡಿದ್ದೇವೆ ಅಷ್ಟೇ ಕಣಯ್ಯ...!

ಅನ್ಯಾಯ ಅಲ್ಲಾನಿಗೆ ಸಮ್ಮತವಿಲ್ಲ. ದಯವಿಟ್ಟು ಅದನ್ನು ಹಿಂದೆ ತೆಗೆದುಕೊಳ್ಳಬೇಕು."

ಶಿವಾಜಿ ಮಹಾರಾಜನ ಹೆಸರಿನ ಹಿಂದೆ 'ಗೋಬ್ರಾಹ್ಮಣ ಪ್ರತಿಪಾದಕ' ಎಂಬ ಬಿರುದು ಇದೆ. ಶಿವಾಜಿಯ ಅಧಿಕೃತ ಪತ್ರಗಳು ಸಾಕಷ್ಟು ಉಪಲಬ್ಧವಿವೆ. ಆದರೆ ಇವುಗಳಲ್ಲಿ, ಗೋಬ್ರಾಹ್ಮಣ ಪ್ರತಿಪಾದಕ ಎಂಬ ಬಿರುದಾವಳಿ ಎಲ್ಲಿಯೂ ಕಂಡುಬಂದಿಲ್ಲ. ವೇದ ಕಾಲದಲ್ಲಿ ರಾಜನನ್ನು ಹೊಗಳುವಾಗ ಬ್ರಾಹ್ಮಣರು ಗೋಬ್ರಾಹ್ಮಣ ಪ್ರತಿಪಾದಕ ಎಂದು ಹೊಗಳುತ್ತಿದ್ದರು. ಅದೇ ಹೊಗಳುವಿಕೆಯನ್ನು ಬ್ರಾಹ್ಮಣರು ಮುಂದುವರಿಸಿದ್ದಾರೆ ಅಷ್ಟೆ.

ಹಿಂದೂಸ್ತಾನದಲ್ಲಿ ಬಹಳಷ್ಟು ಬ್ರಾಹ್ಮಣರು ಶಿವಾಜಿಯ ವಿರೋಧಿಗಳೇ ಆಗಿದ್ದರು. ಇದನ್ನು ಪುಷ್ಟೀಕರಿಸಲು ಇಲ್ಲಿ ಒಂದು ಪ್ರಸಂಗವನ್ನು ಹೇಳಲೇಬೇಕಾಗುತ್ತದೆ. ಸಾವಿರ ಸಂಖ್ಯೆಯಲ್ಲಿ ಬ್ರಾಹ್ಮಣರು ಕೋಟಿ ಚಂಡಿ ಯಜ್ಞ ಮಾಡಿದ ಒಂದು ಪ್ರಸಂಗ ಶಿವಚರಿತ್ರೆಯಲ್ಲಿ (ಈ ಗ್ರಂಥ ಶಿವಾಜಿ ಕುರಿತು ಇದೆ) ಬರುತ್ತದೆ. ರಾಜಾ ಮಾನಸಿಂಗ ಔರಂಗಜೇಬನ ಶೂರ ಸೇನಾಪತಿ. ಶಿವಾಜಿಯನ್ನು ಬಂಧಿಸಲು ರಾಜ ಆತನಿಗೆ ಆಜ್ಞೆ ಮಾಡಿದನು. ಈಗಾಗಲೇ ಶಿವಾಜಿಯ ಶೌರ್ಯದ ಸಾಕಷ್ಟು ಕಥೆಗಳನ್ನು ಕೇಳಿದ ಮಾನಸಿಂಗ್ ಚಿಂತಾಗ್ರಸ್ತನಾದ. ತನ್ನ ಕಾರ್ಯದಲ್ಲಿ ಯಶಸ್ಸು ಸಿಗಬಹುದೇ ಎಂಬ ಸಂಶಯ ಅವನನ್ನು ಕಾಡಲಾರಂಭಿಸಿತು. ಆಗ ಕಾಶಿಯ ಪುರೋಹಿತನೊಬ್ಬ ಅವನಿಗೆ ಕೋಟಿ ಚಂಡಿ ಯಜ್ಞ ಹಾಗೂ ಹನ್ನೊಂದು ಕೋಟಿ ಲಿಂಗ ಸ್ಥಾಪನೆ ಮಾಡಿ ಸಾವಿರ ಬ್ರಾಹ್ಮಣರಿಂದ ಅನುಷ್ಠಾನ ಮಾಡಿಸಿದರೆ ಖಂಡಿತ ವಿಜಯ ಪ್ರಾಪ್ತವಾಗುವದೆಂದು ಸಲಹೆ ಕೊಟ್ಟನಂತೆ. ಅದರಂತೆ ಎಲ್ಲ ಕಾರ್ಯಗಳನ್ನು ಸಾಂಗೋಪಸಾಂಗವಾಗಿ ಮಾಡಲಾಯಿತು. ಬ್ರಾಹ್ಮಣರಿಗೆ ಭರ್ಜರಿಯಾಗಿ ದಾನ ಹಾಗೂ ದಕ್ಷಿಣೆ ಕೊಡಲಾಯಿತು. ಒಂದು ವೇಳೆ ಶಿವಾಜಿ ಗೋಬ್ರಾಹ್ಮಣ ಪ್ರತಿಪಾದಕನಾಗಿದ್ದುದು ನಿಜವೆಂದಾದರೆ ಶಿವಾಜಿಗೆ ಅಪಯಶ ಕೋರುವ ಇಷ್ಟೊಂದು ದೊಡ್ಡ ಪ್ರಮಾಣದ ಯಜ್ಞವನ್ನು ಬನಾರಸದ ಬ್ರಾಹ್ಮಣರು ಮಾಡುತ್ತಿದ್ದರೆ ? ಇನ್ನು, ಶಿವಾಜಿಯ ರಾಜ್ಯಾಭಿಷೇಕಕ್ಕೆ ಬ್ರಾಹ್ಮಣರ ವಿರೋಧವಿತ್ತು. ಶಿವಾಜಿ ಕ್ಷತ್ರಿಯನೇ ಅಲ್ಲ ಎಂಬ ಅವರ ವಾದವಿತ್ತು. ಪರಶುರಾಮನು ಪೃಥ್ವಿಯಲ್ಲಿರುವ ಎಲ್ಲ ಕ್ಷತ್ರಿಯರನ್ನು ನಾಶ ಮಾಡಿದ್ದಾನೆ. ನಂದನ ನಂತರ ಕ್ಷತ್ರಿಯರು ಹುಟ್ಟಿಯೇ ಇಲ್ಲವೆಂದು ಅವರ ಅಭಿಪ್ರಾಯವಿತ್ತು. ಶಿವಾಜಿ ತನ್ನ ಸ್ವಬಲದ ಮೇಲೆ ರಾಜ್ಯ ಗಳಿಸಿದ್ದಿರಬಹುದು. ಆದರೆ ಆತ ಕ್ಷತ್ರಿಯನಲ್ಲ. ಆತನ ಉಪನಯನವಾಗಿದ್ದಿಲ್ಲ, ಹಾಗೂ ಮಂತ್ರವಿಧಿಯ ಪ್ರಕಾರ ಮದುವೆ ಕೂಡ ಆಗಿರಲಿಲ್ಲ, ಈ ಕಾರಣಗಳನ್ನು ಮುಂದೆ ಮಾಡಿ ಬ್ರಾಹ್ಮಣರು ಪಟ್ಟಾಭಿಷೇಕ ಮಾಡಲು ಮುಂದೆ ಬರದಿದ್ದಾಗ ಕಾಶಿಯಿಂದ ಗಾಗಾಭಟ್ಟ ಎಂಬ ಬ್ರಾಹ್ಮಣನನ್ನು ಕರೆಸಿ ಕಾರ್ಯಕ್ರಮ ನೆರವೇರಿಸಲಾಯಿತು. ಮತ್ತೆ ಶಿವಾಜಿಯ ೪೪ನೇ ವರ್ಷದಲ್ಲಿ ಉಪನಯನ ಮಾಡಲಾಯಿತು. ಮದುವೆಯನ್ನು ಮತ್ತೊಮ್ಮೆ ವೈದಿಕ ವಿಧಾನದಿಂದ

ಮಾಡಲಾಯಿತು. ಆದರೆ ದುರ್ದೈವದಿಂದ ಮುಂದೆ ಹದಿನೈದು ದಿನಗಳಲ್ಲಿ ಶಿವಾಜಿಯ ತಾಯಿ, ಹೆಂಡತಿ ಹಾಗೂ ಪ್ರತಾಪರಾವ್ ಗುರ್ಜರ ಎಂಬ ಶೂರ ಸೇನಾಪತಿಯ ನಿಧನವಾಯಿತು. ವೇದೋಕ್ತ ವಿಧಾನಗಳಿಂದ ಮಾಡಲಾದ ಪಟ್ಟಾಭಿಷೇಕ ಹಾಗೂ ಮುಂಜಿ, ಮದುವೆಯಲ್ಲಿ ದೋಷವಿದ್ದುದರಿಂದ ಈ ಎಲ್ಲ ಅಪಶಕುನ ಉಂಟಾಗಿವೆ ಎಂದೂ ಅವುಗಳ ನಿವಾರಣೆಗಾಗಿ ತಾಂತ್ರಿಕ ಪದ್ಧತಿಯಿಂದ ಮತ್ತೆ ಪಟ್ಟಾಭಿಷೇಕ ಮತ್ತು ಮುಂಜಿ ಕಾರ್ಯಕ್ರಮಗಳನ್ನು ಮಾಡಲಾಯಿತು. ಈ ಕೈಂಕರ್ಯಕ್ಕೆ ನಿಶ್ಚಲಪುರಿ ಗೋಸಾವಿ ಎಂಬ ತಾಂತ್ರಿಕ ಅಧ್ವರ್ಯುವಾಗಿದ್ದ. ಹೀಗೆ ಕಾರ್ಯಕ್ರಮಗಳನ್ನು ಎರಡೆರಡು ಸಾರೆ ಮಾಡುವ ವಿಚಿತ್ರ ಹಾಗೂ ಹಾಸ್ಯಾಸ್ಪದ ಘಟನೆಗಳಿಗೆ ಸಾಕ್ಷಿಯಾಗಲು ಮಹಾರಾಷ್ಟ್ರದ ಬ್ರಾಹ್ಮಣರು ಹಿಂದೇಟು ಹಾಕಲು ಕಾರಣ ಬೇರೆಯೇ ಇತ್ತು. ಅವರು ಶಿವಾಜಿಯ ವಿರುದ್ಧವಿದ್ದರು ಎಂಬ ನಿರ್ಧಾರಕ್ಕೆ ಬರುವುದು ಕೂಡ ತಪ್ಪು. ಯಾಕೆಂದರೆ ಇದು ವ್ಯಕ್ತಿಗತ ಅಥವಾ ಜಾತಿ ಪ್ರಶ್ನೆ ಆಗಿರಲಿಲ್ಲ. ಮೂಲ ಪ್ರಶ್ನೆ ಚಾತುರ್ವರ್ಣ್ಯದಲ್ಲಿತ್ತು. ಸನಾತನ ಧರ್ಮದಲ್ಲಿತ್ತು. ಈಗಲೂ ಇದು ಅಸ್ತಿತ್ವದಲ್ಲಿದೆ. ರಾಜನಲ್ಲಿ ದೇವರ ಅಂಶವಿರುತ್ತದೆ. ಆದರೆ ಈ ಶೂದ್ರನಲ್ಲಿ ದೇವರ ಅಂಶವಿರುವದಿಲ್ಲ. ಆದ್ದರಿಂದ ಶೂದ್ರನು ರಾಜನಾಗಲು ಅರ್ಹನಲ್ಲ ಎಂದು ಧರ್ಮಶಾಸ್ತ್ರದಲ್ಲಿತ್ತು. ವಿಚಿತ್ರವೆಂದರೆ ಮುಸಲ್ಮಾನ ರಾಜನಾಗಬಹುದಿತ್ತು, ಆದರೆ ಶೂದ್ರನು ರಾಜನಾಗಲು ಅನರ್ಹನಾಗಿದ್ದ.

ಶಿವಾಜಿ ವಿಶಾಲ ಹೃದಯದವನಾಗಿದ್ದ. ಆತನ ಕಾಲದಲ್ಲಿ ಹಿಂದೂ ಧರ್ಮ ತ್ಯಜಿಸಿ ಬೇರೆ ಧರ್ಮಕ್ಕೆ ಮತಾಂತರ ಮಾಡಿದವನು ಸತ್ತಂತೆ ಎಂದು ತಿಳಿಯಲಾಗಿತ್ತು. ಸುನ್ನತಿ ಮಾಡಿಸಿಕೊಂಡ ನೇತಾಜಿ ಪಾಲ್ಕರ ಎಂಬುವವನನ್ನು ಶಿವಾಜಿ ಮತ್ತೆ ಹಿಂದೂ ಧರ್ಮಕ್ಕೆ ಕರೆತಂದ. ಬಜಾಜಿ ನಿಂಬಾಳಕರ ಮುಸಲ್ಮಾನನಾಗಿ ಸುನ್ನತಿ ಮಾಡಿಸಿಕೊಂಡಿದ್ದ. ಈತನನ್ನೂ ಕೂಡ ಹಿಂದೂ ಧರ್ಮಕ್ಕೆ ಕರೆತಂದು ಅಳಿಯನಾಗಿ ಮಾಡಿಕೊಂಡ.

ಶಿವಾಜಿಯನ್ನು ಪರಮೇಶ್ವರನ ಅವತಾರ ಎಂದು ಹಾಡಿ ಹೊಗಳುವದುಂಟು. ಆತನ ಶೌರ್ಯದ ಬಗ್ಗೆ ವೀರತನದ ಬಗ್ಗೆ ಅತಿಶಯೋಕ್ತಿಯಾಗಿ ಬಣ್ಣಿಸುವದುಂಟು. ಭಾವನೆಯ ಸೆಳೆತನಕ್ಕೆ ಬಲಿ ಬೀಳದೆ ವೈಚಾರಿಕ ದೃಷ್ಟಿಯಿಂದ ವಿಚಾರ ಮಾಡಿದರೆ ಶಿವಾಜಿಯ ನೈಜ ವ್ಯಕ್ತಿತ್ವ ಕಂಡುಬರುತ್ತದೆ, ಶಿವಾಜಿ ನಮ್ಮ ಹಾಗೆ ಸಾಮಾನ್ಯ ಮನುಷ್ಯನಾಗಿದ್ದ. ಆದರೆ ಕುಶಾಗ್ರಮತಿಯವನಾಗಿದ್ದ. ನೀತಿವಂತನೂ ದೂರ ದೃಷ್ಟಿಯವನಾಗಿದ್ದ. ಕುಶಲ ಸಂಘಟಕನಾಗಿದ್ದ. ಅಸಾಮಾನ್ಯ ಶೂರನೂ ಧೀರನೂ ಆಗಿದ್ದ. ಆದರೆ ಆತ ದೇವರಾಗಿರಲಿಲ್ಲ. ಅವತಾರ ಪುರುಷನಾಗಿರಲಿಲ್ಲ.

ಭವಾನಿ ಮಾತೆ ಶಿವಾಜಿಗೆ ತಲವಾರ ಕೊಟ್ಟಳೆಂದೂ ಶಿವಾಜಿಯ ಯಶಸ್ಸಿಗೆ ಅದುವೇ ಕಾರಣವೆಂದೂ ಮುಗ್ಧರಾದ ಜನತೆಯ ತಲೆಯಲ್ಲಿ ತುಂಬಲಾಗುತ್ತದೆ. ಆದರೆ ಈ ತಲವಾರ ಪೋರ್ಚುಗೀಸರದು ಎಂದು ಇತ್ತೀಚಿನ ಶೋಧದಿಂದ ತಿಳಿದುಬಂದಿದೆ. ಅದನ್ನು ಗೋವಾ ಮಾರ್ಗದಿಂದ ರಾಯಗಢಕ್ಕೆ ತರಲಾಯಿತು. ಇಂತಹದೇ ತಲವಾರ ಸತಾರಾದ ವಸ್ತು ಸಂಗ್ರಹಾಲಯದಲ್ಲಿ ಇದೆ. ಅದರ ಮೇಲೆ ಪೋರ್ಚುಗೀಸ್ ಅಕ್ಷರಗಳನ್ನು ನೀವು ಕಾಣಬಹುದು. ಜನರ ಅಜ್ಞಾನವನ್ನು ಬಂಡವಾಳ ಮಾಡಿಕೊಂಡು ತಮ್ಮ ಬೇಳೆ ಬೇಯಿಸುವವರ ಬಗ್ಗೆ ಎಚ್ಚರವಹಿಸಬೇಕು.

ಔರಂಗಜೇಬನ ಹಿರಿಯ ಸಹೋದರನಾದ ದಾರಾಶುಕಾ ಪರಮ ವಿದ್ವಾಂಸನಾಗಿದ್ದ. ಹಿಂದೂ ತತ್ವಜ್ಞಾನವನ್ನು ತುಲನಾತ್ಮಕವಾಗಿ ಅಭ್ಯಾಸ ಮಾಡಿ ಉಪನಿಷತ್ತು ಹಾಗೂ ಪುರಾಣಗಳನ್ನು ಪಾರಸೀ ಭಾಷೆಗೆ ಭಾಷಾಂತರ ಮಾಡಿಸಿದ. ಆತ ನಿಜ ಅರ್ಥದಲ್ಲಿ ಪರಧರ್ಮಸಹಿಷ್ಣುವಾಗಿದ್ದ. ಶಹಜಹಾನನ ಹಿರಿಯ ಮಗ ದಾರಾಶುಕಾ ದಿಲ್ಲಿಯ ಸಿಂಹಾಸನಕ್ಕೆ ಹಕ್ಕುದಾರನಾಗಿದ್ದ. ತಂದೆ ಶಹಜಹಾನನ ಇಚ್ಛೆಯೂ ಅದೇ ಆಗಿತ್ತು. ಹಾಗೆ ಆತ ಘೋಷಿಸಿದ್ದ ಕೂಡ. ಆದರೆ ಧರ್ಮಾಂಧನಾಗಿದ್ದ ಔರಂಗಜೇಬನ ಕುತಂತ್ರಕ್ಕೆ ಬಲಿಯಾಗಿ ಕೊಲ್ಲಲ್ಪಟ್ಟ. ಈ ದುರಂತ ಘಟನೆ ದೇಶಕ್ಕೆ ಮಾರಕವಾಗಿ ಪರಿಣಮಿಸಿತು. ಒಂದು ವೇಳೆ ವಿಶಾಲ ಹೃದಯಿಯಾಗಿದ್ದ ದಾರಾಶುಕಾ ಮೊಗಲ ಸಾಮ್ರಾಟನಾಗಿದ್ದರೆ, ಸಮಗ್ರ ದೇಶ ಏಕೀಕರಣವಾಗಿ ಒಂದು ಬಲಿಷ್ಠ ದೇಶವಾಗುತ್ತಿತ್ತು. ಬಿಳಿಯರು ಬೆಳೆಯಲು ಆಸ್ಪದ ಸಿಗುತ್ತಿರಲಿಲ್ಲ. ಆದರೆ ಈ ಅವಕಾಶ ತಪ್ಪಿ ಹೋಯಿತು. ಹಿಂದೂ ಮುಸಲ್ಮಾನರ ನಡುವೆ ಇದ್ದ ಮತಭೇದಗಳು ಮಾಯವಾಗುವ ಆಶೆಗಳು ಕರಗಿಹೋದವು. ಆದರೆ ಈ ವೇಳೆಗೆ ರಾಜನಾದ. ದಾರಾಶುಕಾನಿಂದ ಆಗಲಾರದ ಈ ಕೆಲಸ ಓರ್ವ ಹಿಂದೂ ರಾಜನಿಂದ ಕೆಲಮಟ್ಟಿಗೆ ಆಯಿತು ಎಂದರೆ ಉತ್ಪ್ರೇಕ್ಷೆಯೇನಲ್ಲ.


**ಪ್ರಕಾಶ ಪರ್ವತೀಕರ**
ಕೆ. ಆರ್. ಸಿ. ಅಪಾರ್ಟ್‌ಮೆಂಟ್, ಪೂರ್ಣಚಿತ್ರ ಬ್ಲಾಕ್
ಪ್ಲಾಟ್ ನಂ. ೨೦೪, ಗಾಂಧಿನಗರ, ತಿರುಪುರ
ತಮಿಳುನಾಡು – ೬೪೧ ೬೦೩







## ನಿನಗಾಗಿ ಕಾದಿರುವೇ ಓ ಒಲವೇ

ಪ್ರೀತಿಯೆಂಬ ಬೆಳೆಯು
ಮೊಳಕೆಯಲ್ಲೇ ಬಾಡುತ್ತಿರಲು
ಮಳೆಯಾಗಿ ಆವರಿಸು ನೀನು

ಉಕ್ಕಿ ಹರಿಯುತ್ತಿರುವ ಕಣ್ಣೀರಿನ ನದಿಯು
ಬತ್ತುವ ಮುನ್ನವೇ
ಕಡಲಾಗಿ ಸೇರು ನನ್ನನು ನೀನು

ಬಾಳಿನ ಗಾಳಿಪಟದ ಸೂತ್ರವು
ಕಡಿಯುವ ಮುನ್ನವೇ
ಸೆರೆಯಾಗು ನನ್ನಲ್ಲಿ ನೀನು

ಜೀವನವೆಂಬ ಗಡಿಯಾರದ ಸಮಯವು
ನಿಲ್ಲುವ ಮುನ್ನವೇ
ಅದರ ಕೀಲಿಯಾಗಿ ಕೂಡಿಕೊಳ್ಳು ನೀನು

ನಿನ್ನ ನೆನಪಿನ ಅಂಗಳದಲ್ಲಿ
ನಾನು ಕಳೆದು ಹೋಗುವ ಮುನ್ನವೇ
ನನ್ನಲ್ಲಿ ಬೆರೆತುಬಿಡು ನೀನು

ನಿನ್ನ ದಾರಿಯ ಕಾಯುತ್ತಿರುವ
ಈ ಜೀವವು ಅಸುನಿಗುವ ಮುನ್ನವೇ
ಉಸಿರಾಗಿ ಆವರಿಸು ನೀನು


ನಾಗರಾಜ. ಭದ್ರಾ
ಕಲಬುರಗಿ

ಗೂಡಲೂರು ಒಂದು ಪುಟ್ಟ ಪೇಟೆ. ಮೈಸೂರು ಮತ್ತು ಕಲ್ಲಿಕೋಟೆ ಕಡೆಗೆ ರಸ್ತೆ ಕವಲೊಡೆಯುತ್ತದೆ. ಒಂದು ಬಗೆಯ ಟ್ರಾನ್‌ಸಿಟ್ ಸ್ಥಳ. ಊಟಿಯಿಂದ ಬರುವಾಗ ಗೂಡಲೂರುವರೆಗೆ ಟೀ ತೋಟಗಳು, ಕಾರ್ಮಿಕರು ದಾರಿಯಲ್ಲಿ ಸಿಗುತ್ತಿದ್ದರು. ಗೂಡಲೂರು ದಾಟಿದ ನಂತರ ಕಾಡಿನ ಮಧ್ಯೆ ಹಾಯುವ ರಸ್ತೆಯಲ್ಲಿ ಜನರ ಸುಳಿವಿರುತ್ತಿರಲಿಲ್ಲ. ತೊರಪಳ್ಳಿ, ತೆಪ್ಪಕಾಡು ಮುಂತಾದ ಕಡೆ ಆದಿವಾಸಿಗಳು ಅಪರೂಪಕ್ಕೆ ನೋಡಸಿಗುತ್ತಿದ್ದರು. ಮುಂದೆ ಬಂಡಿಪುರದವರೆಗೆ ದಟ್ಟಕಾಡಿನ ಮಧ್ಯೆ ಹೋಗುವಾಗ ಹಲವು ಕಾಡುಪ್ರಾಣಿಗಳು ಸಿಗುತ್ತಿದ್ದವು. ಅಲ್ಲಿಂದ ಬಸ್ಸು ನಂಜನಗೂಡು ಸೇತುವೆ ದಾಟುವಾಗ ಮೈಸೂರು ನೋಡುವ ತವಕ ಪ್ರಾರಂಭವಾಗುತ್ತಿತ್ತು !

# ರಾಷ್ಟ್ರೀಯ ಹೆದ್ದಾರಿಯಲ್ಲಿ ಸಫಾರಿ!



ಇದ್ದಲ್ಲೇ ಬಿದ್ದುಕೊಂಡಿರುವ ಒಂದು ರಸ್ತೆ ಮತ್ತು ಒಬ್ಬ ವ್ಯಕ್ತಿಯ ಮಧ್ಯೆ ಭಾವನಾತ್ಮಕ ಸಂಬಂಧ ಇರಲು ಸಾಧ್ಯವೇ ?

ಮೈಸೂರು–ಊಟಿ ರಸ್ತೆಯಲ್ಲಿ ತಿರುಗಾಡುವಾಗ ಮನಸ್ಸಿನಲ್ಲಿ ಉಕ್ಕುವ ಸಂಭ್ರಮದ ಭಾವನೆ ಅಂಥ ಭಾವನಾತ್ಮಕ ಸಂಬಂಧ ಇರಲು ಸಾಧ್ಯ ಎಂಬುದರ ಸಂಕೇತ ಎನ್ನಿಸುತ್ತದೆ ನನಗೆ.

ಬಯಲಿನಿಂದ ಬೆಟ್ಟಕ್ಕೇರುವ ಅಥವಾ ಬೆಟ್ಟದಿಂದ ಬಯಲಿಗಿಳಿಯುವ ರಸ್ತೆ ಅದು. ಊಟಿ ಮತ್ತು ಮೈಸೂರು ನಗರಗಳ ನಡುವಣ ದೂರ ಬರೀ ನೂರು ಮೈಲು. ೧೯೪೦ರ ದಶಕದಿಂದ (ಅಥವಾ ಅದಕ್ಕೂ ಮುಂಚಿನಿಂದ) ಇಂದಿನವರೆಗೆ ಆ ರಸ್ತೆಯಲ್ಲಿ ಹಲವಾರು ಬಾರಿ ತಿರುಗಾಡಿದ್ದೇನೆ. ಆ ಸಂದರ್ಭದಲ್ಲಿ ಮಳೆ ಹೊಯ್ಯುತ್ತಿರಲಿ ಅಥವಾ ಇಲ್ಲದಿರಲಿ, ಹಳತೆಲ್ಲ ನೆನಪಾಗುತ್ತದೆ !

ಬೆಳಗಿನ ಹೊತ್ತು ಹಗಲು, ಸಂಜೆ ಮತ್ತು ರಾತ್ರಿಯ ವೇಳೆಯಲ್ಲಿ, ಮಳೆಗಾಲದಲ್ಲಿ, ಚಳಿಗಾಲದಲ್ಲಿ, ಬೇಸಿಗೆಯಲ್ಲಿ, ಮರಗಿಡಗಳು ಎಲೆಯುದುರಿಸಿಕೊಂಡು ಬೋಳುಬೋಳಾಗಿದ್ದಾಗ, ಕಾಡಿಗೆ ಬೆಂಕಿ ಹತ್ತಿ ಉರಿದು ಮರಗಳು ಕರಕಲಾಗಿದ್ದಾಗ, ಮತ್ತೆ ಅವು ಚಿಗುರಿ ಹಸುರು ತುಂಬಿಕೊಂಡು ನಳನಳಿಸಿ ಹೂ ಅರಳಿಸಿ ನಿಂತಾಗ ಆ ರಸ್ತೆಯಲ್ಲಿ ಹೋಗಿಬಂದಿದ್ದೇನೆ. ಕಿಟಕಿಯಿಂದ ರಾಚುವ ಕುಳಿರ್ಗಾಳಿಗೆ ಮುದುರಿ ಕುಳಿತಾಗಲೂ ಕಣ್ಣು ತೆರೆದುಕೊಂಡು, ಪ್ರಯಾಣದ ಪ್ರತಿಕ್ಷಣವನ್ನು ಕುತೂಹಲದಿಂದ ನೋಡಿದ್ದೇನೆ.

ನನಗೆ ನೆನಪಿರುವಂತೆ, ಆಗ ಗೂಡಲೂರು ಒಂದು ಪುಟ್ಟ ಪೇಟೆ. ಮೈಸೂರು ಮತ್ತು ಕಲ್ಲಿಕೋಟೆ ಕಡೆಗೆ ರಸ್ತೆ ಕವಲೊಡೆಯುತ್ತದೆ. ಒಂದು ಬಗೆಯ ಟ್ರಾನ್‌ಸಿಟ್ ಸ್ಥಳ. ಊಟಿಯಿಂದ ಬರುವಾಗ ಗೂಡಲೂರುವರೆಗೆ ಟೀ ತೋಟಗಳು, ಕಾರ್ಮಿಕರು ದಾರಿಯಲ್ಲಿ ಸಿಗುತ್ತಿದ್ದರು. ಗೂಡಲೂರು ದಾಟಿದ ನಂತರ ಕಾಡಿನ ಮಧ್ಯೆ ಹಾಯುವ ರಸ್ತೆಯಲ್ಲಿ ಜನರ ಸುಳಿವಿರುತ್ತಿರಲಿಲ್ಲ. ತೊರಪಳ್ಳಿ, ತೆಪ್ಪಕಾಡು ಮುಂತಾದ ಕಡೆ ಆದಿವಾಸಿಗಳು ಅಪರೂಪಕ್ಕೆ ನೋಡಸಿಗುತ್ತಿದ್ದರು. ಮುಂದೆ ಬಂಡಿಪುರದ ವರೆಗೆ ದಟ್ಟಕಾಡಿನ ಮಧ್ಯೆ ಹೋಗುವಾಗ ಹಲವು ಕಾಡುಪ್ರಾಣಿಗಳು ಸಿಗುತ್ತಿದ್ದವು. ಅಲ್ಲಿಂದ ಬಸ್ಸು ನಂಜನಗೂಡು ಸೇತುವೆ ದಾಟುವಾಗ ಮೈಸೂರು ನೋಡುವ ತವಕ ಪ್ರಾರಂಭವಾಗುತ್ತಿತ್ತು !

**ಪರಂಜ್ಯೋತಿ**

ಈಗ ವೋಲ್ವೊ ಬಸ್ಸುಗಳ ಕಾಲ. ಹೊರಗಿನ ಹಿತವಾದ ಗಾಳಿಯ ಸಂಪರ್ಕವಿಲ್ಲದೆ ಬೆಚ್ಚಗೆ ಕುಳಿತು, ಅಥವಾ ಸ್ವಲ್ಪ ನಡುಗುತ್ತ ಪ್ರಯಾಣ ಮಾಡಬಹುದು ! ಈ ರಸ್ತೆಯಲ್ಲಿ ಪೆಟ್ರೋಲ್ ಎಂಜಿನ್ ಬಸ್ಸುಗಳಲ್ಲಿ, ಎರಡನೇ ಪ್ರಪಂಚ ಯುದ್ಧದ ಸಂದರ್ಭದಲ್ಲಿ ಎಲ್ಲ ಪೆಟ್ರೋಲ್ ಮಿಲಿಟರಿ ಉಪಯೋಗಕ್ಕೆ ಬಳಕೆಯಾಗ ತೊಡಗಿದ್ದಾಗ ಆವಿಷ್ಕಾರಗೊಂಡಿದ್ದ ಹಬೆ ಎಂಜಿನಿನ ಬಸ್ಸುಗಳಲ್ಲಿ, ಮುಂದೆ ಡೀಸೆಲ್ ಎಂಜಿನಿನ ಬಸ್ಸುಗಳಲ್ಲಿ ಪಯಣ ಮಾಡಿದ್ದು ನೆನಪಿಗೆ ಬರುತ್ತದೆ. ಹಾಗೆಯೇ ತಿರುವಿನ ರಸ್ತೆಯಲ್ಲಿ ಬಸ್ಸು ಚಲಿಸುವಾಗ ಕರುಳು ತೊಳಸಿದಂತಾಗಿ ರಸ್ತೆಯುದ್ದಕ್ಕೂ ಕಾರಿಕೊಳ್ಳುತ್ತಾ ಸುಸ್ತಾಗುತ್ತಿದ್ದ ಜನರ ನೆನಪಾಗುತ್ತದೆ !

ಅದೀಗ 'ರಾಷ್ಟ್ರೀಯ ಹೆದ್ದಾರಿ ೭೬' – ಎಂಬ ಹಣೆಪಟ್ಟಿ ಹಚ್ಚಿಕೊಂಡಿದೆ. ಕಚ್ಚಾ ರಸ್ತೆ, ಟಾರ್ ರಸ್ತೆ, ಕಾಂಕ್ರೀಟ್ ರಸ್ತೆ – ಹೀಗೆ ಅದು ಹಲವು ಘಟ್ಟಗಳನ್ನು ಹಾದುಬಂದಿದೆ.

ನದೀಕೊಳ್ಳದಲ್ಲಿ ಹೊಸ ನಾಗರಿಕತೆ ಮೂಡಿಬರುವಂತೆ, ಗೂಡಲೂರು ರಸ್ತೆಯ ಆಸುಪಾಸಿನಲ್ಲಿ ಶ್ರೀಲಂಕಾ ನಿರಾಶ್ರಿತರು, ಕೇರಳದ ನೆಲಸಿಗರು ಸೇರಿ ಹೊಸ ಜನವಸತಿಗಳು ಮೂಡಿಬಂದಿವೆ. ಕವಲು ರಸ್ತೆಗಳಾಗಿವೆ. ಕಾಡು ನಾಡಾಗಿದೆ. ದಾರಿಯಲ್ಲಿ ಸಿಕ್ಕುವ ಮುದುಮಲೆ ಮತ್ತು ಬಂಡಿಪುರ ವನ್ಯಜೀವಿ ತಾಣಗಳು ಮಾನ್ಯತೆ ಪಡೆದು ಸಾಕಷ್ಟು ಮಂದಿ ನಿಸರ್ಗ ಪ್ರಿಯರನ್ನು ಪ್ರಾಣಿ–ಪಕ್ಷಿವೀಕ್ಷಕರನ್ನು ಆಕರ್ಷಿಸುತ್ತಿವೆ. ತೆಪ್ಪಕಾಡಿನ ಆನೆ ಪಳಗಿಸುವ ಕೇಂದ್ರ ಸಹ ಪ್ರವಾಸಿಗಳನ್ನು ಆಕರ್ಷಿಸುತ್ತದೆ. ಹಿಂದಿನಂತೆ ಪ್ರಾಣಿಗಳ ಬೇಟೆ ನಡೆಯುತ್ತಿಲ್ಲ. ಆದರೆ ಉತ್ಸಾಹಿಗಳು ಅವುಗಳಿಗೆ ನೀಡುವ ಕಿರುಕುಳ ನಿಂತಿಲ್ಲ. ಹಾಗಾಗಿ ಅವು ಮತ್ತಷ್ಟು ದಟ್ಟಕಾಡಿನತ್ತ ಸರಿಯುವಂತಾಗಿದೆ. ವಲಸಿಗರ ಒತ್ತಡದ ಕಾರಣ ಕಾಡಿನ ಮಕ್ಕಳಾದ ಆದಿವಾಸಿಗಳು ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಬದುಕುವಂತಾಗಿದೆ.

ಅರಣ್ಯ ಇಲಾಖೆ ಜೀಪುಗಳಲ್ಲಿ ಕಾಡಿನೊಳಕ್ಕೆ ಬಹಳ ದೂರ ಸಾಗಿ ವನ್ಯಜೀವಿಗಳನ್ನು ಅವುಗಳ ನೆಲೆಯಲ್ಲೇ ನೋಡಿ ಆನಂದಿಸುವ, ಅವುಗಳ ಛಾಯಾಚಿತ್ರ ತೆಗೆದು ಹಿಗ್ಗುವ ಅವಕಾಶ ಕಲ್ಪಿಸಿಕೊಟ್ಟಿದೆ. ರೆಸಾರ್ಟ್‌ಗಳ ಸಂಖ್ಯೆಯೂ ಹೆಚ್ಚಿದೆ. ಅರಣ್ಯ ಇಲಾಖೆಗೂ ಲಾಭ, ಖಾಸಗಿ ಕುಳಗಳಿಗೂ ಲಾಭ ! ಈ ಚಟುವಟಿಕೆಗಳಿಂದ ಕಾಡಿನ ಪ್ರಶಾಂತತೆಗೆ ಭಂಗ ಉಂಟಾಗುವುದನ್ನು ವನ್ಯಜೀವಿಗಳು ಯಾರಲ್ಲಿ ಹೇಳಿಕೊಳ್ಳಬೇಕು ?

ಹಗಲು, ಜಿಟಿಜಿಟಿ ಮಳೆಯಲ್ಲಿ ಬಸ್ಸು ಸಾಗುತ್ತಿರುವಾಗ, ರಸ್ತೆ ಬದಿಯಲ್ಲಿ ಮೂರು ನಾಲ್ಕು ಆನೆಗಳ ಹಿಂಡು ಕಾಣಿಸುತ್ತದೆ. ಸಲಗ ಮರದ ರೆಂಬೆ ಮುರಿಯುತ್ತದೆ. ಆ ಪೈಕಿ ಒಂದು ಮರಿ ಆನೆಯೂ ಇದೆ ! ಒಂದು ಕ್ಷಣದಲ್ಲಿ ಬಸ್ಸು ಮುಂದಕ್ಕೆ ಸಾಗಿ ಹೋಗಿರುತ್ತದೆ.

ಮುಂದೆ ಮತ್ತೊಂದು ತಿರುವಿನಲ್ಲಿ ಜಿಂಕೆಗಳ ಹಿಂಡು, ಮತ್ತಷ್ಟು ದೂರದಲ್ಲಿ ನಾಲ್ಕೈದು ಕಡವೆಗಳು, ಬಸ್ಸಿನ ಸದ್ದಿಗೆ ಬೆದರಿ ಕಿವಿಗಳು ನಿಮಿರಿಸಿ ನಿಲ್ಲುತ್ತವೆ. ಅದೂ ಒಂದು ಕ್ಷಣದಲ್ಲಿ ಮರೆಯಾಗುವ ದೃಶ್ಯ. ಬಸ್ಸಿನ ಡ್ರೈವರ್ ಒಂದಿಷ್ಟೂ ಇಂಗಿತ ಇಲ್ಲದವ, ಈ ಮಹಾರಾಯ ಪ್ರಾಣಿಗಳನ್ನು ಒಂದು ಕ್ಷಣ ನೋಡಲೂ ಬಿಡದೆ ವೇಗವಾಗಿ ಹೋಗುತ್ತಿದ್ದಾನಲ್ಲ ಎಂಬ ಅಸಮಾಧಾನ ನನಗೆ. ಆದರೆ ಉಪಾಯವಿಲ್ಲ. ಆತ ಕಾಯಕ ಜೀವಿ, ಕರ್ತವ್ಯನಿರತ !

ಆ ಸಂದರ್ಭದಲ್ಲಿ, ಒಂದೇ ಒಂದು ದಿನ ಈ ರಸ್ತೆಯಲ್ಲಿ ನಿಧಾನವಾಗಿ ತಿರುಗಾಡಬೇಕೆಂಬ ಬಯಕೆ ಉಂಟಾಗುತ್ತಿತ್ತು. ಬಸ್ಸಿನ ಪಯಣದಲ್ಲಿ ಅದು ಸಾಧ್ಯವಲ್ಲದ್ದು. ಅಲ್ಲಿ ಮುಕುರುತ್ತಿದ್ದ ಪ್ರಕೃತಿ ಪ್ರಿಯರ ಮೇಲೂ ನನಗೆ ಅಸೂಯೆ ! ಈ ಮಂದಿ ಎಷ್ಟು ಆರಾಮವಾಗಿ ತಿರುಗಾಡುತ್ತ ಪ್ರಕೃತಿಯನ್ನು ಆಸ್ವಾದಿಸುತ್ತಾರಲ್ಲ ಎಂದು. ಅಂಥ ಆರಾಮ ತಿರುಗಾಟದ ದಿನಕ್ಕಾಗಿ ಬಹಳ ವರ್ಷ ಕಾಯಬೇಕಾಯಿತು.

ಈ ರಸ್ತೆಯ ತಿರುಗಾಟದ ಅನುಭವವೇ ರೋಚಕ. ನನ್ನ 'ಮಂಜಿನೆಡೆಯ ಚಿತ್ರಗಳು' ಕೃತಿಯಲ್ಲಿ ಮತ್ತಷ್ಟು ಸ್ವಾರಸ್ಯಕರ ಅನುಭವಗಳ ಚಿತ್ರಣವಿದೆ ! ಇಲ್ಲಿ ಅದನ್ನು ಮತ್ತೆ ಹೇಳುವುದು ಬೇಡವೆನ್ನಿಸುತ್ತದೆ.

✶ ✶ ✶

'ರಾಷ್ಟ್ರೀಯ ಹೆದ್ದಾರಿಯಲ್ಲಿ ಸಫಾರಿ' ಮಾಡುವ ಬಹಳ ವರ್ಷಗಳ ನನ್ನ ಕನಸು ನನಸಾಗುವ ಕಾಲ ಕೂಡಿಬಂತು.

೨೦೧೩–೨೦೧೪ರ ವರ್ಷ 'ನೀಲಗಿರಿ : ಸಾಂಸ್ಕೃತಿಕ ಸಾಮಾಜಿಕ ಕಣ್ನೋಟ' ಕೃತಿಯ ಕ್ಷೇತ್ರಕಾರ್ಯಕ್ಕೆಂದು ಮೂರು ನಾಲ್ಕು ಬಾರಿ ಗೂಡಲೂರಿನಲ್ಲಿ ಉಳಿದು ಕೊಳ್ಳುವುದು ಅನಿವಾರ್ಯವಾಗಿತ್ತು. ಅಲ್ಲಿಂದ ಬೇರೆ ಬೇರೆ ಕಡೆಗಳಲ್ಲಿರುವ ಆದಿವಾಸಿ ಊರುಗಳಿಗೆ ಹೋಗಿ ಬರಲು ಅನುಕೂಲವಾಗಿತ್ತು.

ಅಂದು ಮಧ್ಯಾಹ್ನವೇ ಗೂಡಲೂರು ತಲಪಿದ್ದೆವು. ಆದಿವಾಸಿ ಊರುಗಳಿಗೆ ಹೋಗಬೇಕಾಗಿದ್ದುದು ಮರುದಿನ. ಅಂದಿನ ಅರ್ಧ ದಿನವನ್ನು ಸಫಾರಿಗೆ ಬಳಸಬಹುದೆನ್ನಿಸಿ, ನಮ್ಮ ಮಾರ್ಗದರ್ಶಿ ಮತ್ತು ಜೀಪು ಚಾಲಕ ಮುಹಮದ್ ಅಲಿಗೆ ಕರೆ ಮಾಡಿದೆ. ಅಂದು ಆತ ಗೂಡಲೂರು ಪೇಟೆಗೆ ಬಂದಿರಲಿಲ್ಲ. ಅಲ್ಲಿಂದ ಐದಾರು ಕಿ. ಮೀ. ದೂರದಲ್ಲಿರುವ ಶ್ರೀಮದುರೆ ಎಂಬಲ್ಲಿನ ಅವರ ಮನೆಯಲ್ಲಿದ್ದ. ಮೊದಲು ಬಂದಿದ್ದಾಗ ಆತನಲ್ಲಿ ಸಫಾರಿ ಪ್ರಸ್ತಾಪ ಮಾಡಿದ್ದುದು ಆತನ ನೆನಪಿನಲ್ಲಿತ್ತು.

"ಊಟ ಮಾಡಿ ಸ್ವಲ್ಪ ರೆಸ್ಟ್ ತಗೊಳ್ಳಿ, ಮೂರು ಗಂಟೆ ಸುಮಾರಿಗೆ ಬರುತ್ತೇನೆ, ರೆಡಿಯಾಗಿರಿ !" ಎಂದ ಆತ.

ಈ ಬಾರಿ ಪತ್ನಿಯೂ ಜೊತೆಯಲ್ಲಿದ್ದಳು. ಒಂಟಿ ಸಫಾರಿಯಲ್ಲ, ನನ್ನ ಕುತೂಹಲ ಗರಿಗೆದರಿ ಹಾರಾಡತೊಡಗಿತು.

ಅಲಿ ಲಾಡ್ಜಿನ ಎದುರು ಜೀಪು ನಿಲ್ಲಿಸಿ ನಮಗೆ ಕರೆ ಮಾಡಿದಾಗ ಹೊರಗೆ ಮಳೆ ಜೊರಜೊರ ಹಿಂಡುತ್ತಿತ್ತು. ಆಕಾಶ ಕಪ್ಪಾಗಿ ಕತ್ತಲೆ ಕವಿದಂತಿತ್ತು. ಕೆಳಗಿಳಿದು ಬರುವಷ್ಟರಲ್ಲಿ ನನ್ನ ಉತ್ಸಾಹ ಜರ್‍ರನೆ ಇಳಿಯಿತು. ನಮ್ಮ ಸಫಾರಿಯನ್ನು ಮತ್ತೊಂದು ಸಂದರ್ಭಕ್ಕೆ ಮುಂದೂಡಬಹುದೆನ್ನಿಸಿತು. ನನ್ನ ಸಲಹೆ ತಿಳಿದಾಗ ಅಲಿಯ ಮುಖ ಸಪ್ಪಗಾಯಿತು. ಅಂದಿನ ಸವಾರಿ ತಪ್ಪಿಹೋಗಬಹುದೆಂಬ ಆತಂಕ ವಾಗಿರಬಹುದು. ಈ ಮಳೆಯಲ್ಲಿ ಎಂಥ ಸಫಾರಿ ಸಾಧ್ಯ ಎಂಬುದು ನನ್ನ ತರ್ಕ.

"ಇನ್ನು ಹತ್ತಿಪ್ಪತ್ತು ನಿಮಿಷದಲ್ಲಿ ಮಳೆ ನಿಲ್ಲುತ್ತೆ ಸಾರ್ !" ಎಂದು ಆತ ಪುಸಲಾಯಿಸುವ ದನಿಯಲ್ಲಿ ಹೇಳಿದ.

ಮಳೆಯ ರಭಸ ಕಡಿಮೆಯಾಯಿತು. ಹನಿ ನಿಂತಿರಲಿಲ್ಲ. 'ಇಂಥ ಸಂದರ್ಭದಲ್ಲಿ ಕಾಡುಪ್ರಾಣಿಗಳು ನೋಡ ಸಿಗುತ್ತವೆಯೆ ? ಮಂದ ಬೆಳಕಿನಲ್ಲಿ ತೆಗೆಯುವ ಫೋಟೋಗಳ ಗುಣಮಟ್ಟ ಚೆನ್ನಾಗಿರುತ್ತದೆಯೆ ? ಎಂಬ ಆತಂಕ ನನ್ನದು. ಸಂಜೆ ವೇಳೆಗಿಂತ ಬೆಳಗಿನ ವೇಳೆಯಾಗಿದ್ದರೆ ಸಫಾರಿ ಚೆನ್ನಾಗಿರುತ್ತಿತ್ತು' ಎನ್ನಿಸಿತು.

"ನೋಡುತ್ತಿರಿ, ಗೂಡಲೂರು ಎಲ್ಲೆಯಾಚೆ ಮಳೆಯಿರುವುದಿಲ್ಲ. ಅಲ್ಲದೆ ಪ್ರಾಣಿಗಳು ಹಗಲೆಲ್ಲ ಕಾಡಿನಲ್ಲಿ ಮೇವಿಗಾಗಿ ತಿರುಗಾಡಿ ತಮ್ಮ ತಾಣಗಳಿಗೆ ಹಿಂದಿರುಗುವ ಹೊತ್ತು ಇದು" ಎಂದು ಅಲಿ ನನಗೆ ಉತ್ಸಾಹ ತುಂಬಲು ಪ್ರಯತ್ನಿಸಿದ.

ನನ್ನ ಜಾಗ ಅಲಿಯ ಪಕ್ಕದಲ್ಲಿ ಮುಂದುಗಡೆ. ಹಿಂದಿನ ಸೀಟಿನಲ್ಲಿ ಇಬ್ಬರು ಮಕ್ಕಳು ಮಳೆಯಲ್ಲಿ ಸದ್ದಿಲ್ಲದೆ ಕುಳಿತಿದ್ದುದು ಗಮನಕ್ಕೆ ಬಂದಾಗ ನಮಗೆ ಆಶ್ಚರ್ಯ.

ಅಂದು ಶಾಲೆಗೆ ರಜೆ. ಮನೆಯಲ್ಲಿದ್ದ ಮಕ್ಕಳು ಅಲಿಗೆ ದುಂಬಾಲು ಬಿದ್ದು ಸಫಾರಿಗೆ ಹೊರಟಿದ್ದವು. 'ಬೇರೆಯವರಾಗಿದ್ದರೆ ಮಕ್ಕಳನ್ನು ಕರೆತರುತ್ತಿರಲಿಲ್ಲ. ನೀವಾದ್ದರಿಂದ ಕರೆತಂದೆ !' ಎಂದು ಅಲಿ ಹೇಳಿದಾಗ ನಮಗೆ ಸಂತೋಷವೇ ಆಯಿತು. ಮಕ್ಕಳ ಉತ್ಸಾಹಕ್ಕೆ ತಣ್ಣೀರೆರಚಲು ಮನಸ್ಸಾಗಲಿಲ್ಲ. ಅಲ್ಲದೆ ನಾವು ಹೀಗೆ ಅಲೆದಾಡುವಾಗ ಒಂದು ಪ್ರಕೃತಿ ದೃಶ್ಯವನ್ನೋ ಕಾಡುಪ್ರಾಣಿಯನ್ನೋ, ತುಂಬಿ ಹರಿಯುವ ಹೊಳೆಯನ್ನೋ, ಆದಿವಾಸಿಗಳನ್ನೋ ನೋಡಿದಾಗಲೆಲ್ಲ, ನಮ್ಮ ಮೊಮ್ಮಕ್ಕಳಲ್ಲಿ ಯಾರನ್ನಾದರೂ ಕರೆತರಬಹುದಾಗಿತ್ತು, ಇಂಥದ್ದನ್ನೆಲ್ಲ ಅವೆಲ್ಲಿ ನೋಡಿಯಾವು ಎಂದು ಪತ್ನಿ ಗೊಣಗಿಕೊಳ್ಳುತ್ತಿದ್ದಳು. ಈಗ ಅಲಿಯ ಮಕ್ಕಳು ನಮ್ಮೊಂದಿಗಿದ್ದವು. ಆ ಮಕ್ಕಳ ಕಾರಣ ಅಂದಿನ ನಮ್ಮ ಸಫಾರಿ ಯಾತ್ರೆ ಫ್ಯಾಮಿಲಿ ಸಫಾರಿಯಾಯಿತು !

ಆದಿಲಾ ಒಂಬತ್ತು ವರ್ಷದ ಹುಡುಗಿ. ಆದಿಲ್ ಆರು ವರ್ಷದವ. ಹಿಂದಿನ ಸೀಟಿನಲ್ಲಿ ಕುಳಿತಿದ್ದ ಅಜ್ಜಿ ಮಕ್ಕಳ ಹೆಸರು, ಯಾವ ಕ್ಲಾಸು, ತಮಿಳು ಮಾತಾಡಲು













ಬರುತ್ತದೆಯೆ ಇತ್ಯಾದಿ ಮಾಹಿತಿ ಸಂಗ್ರಹಿಸುತ್ತ, ಅವರೊಂದಿಗೆ ಸ್ನೇಹ ಬೆಳೆಸಲು ಪ್ರಯತ್ನಿಸಿದ್ದಳು.

ಅಲಿ ಹೇಳಿದಂತೆಯೇ, ಜೀಪು ಗೂಡಲೂರು ಪೇಟೆ ದಾಟಿ ಸ್ವಲ್ಪ ದೂರ ಹೋಗುವಷ್ಟರಲ್ಲಿ ಮಳೆ ನಿಂತಿತು. ತೊರಪಳ್ಳಿಯವರೆಗೆ ಮಳೆ ತಲುಪಿರಲಿಲ್ಲ. ಹಿಂದೆ ತೊರಪಳ್ಳಿ ಮೂರು ನಾಲ್ಕು ಮನೆಗಳಿದ್ದ ಸಣ್ಣ ಊರು. ಆದಿವಾಸಿಗಳ ಹಾಡಿಯ ಹುಲ್ಲು ಗುಡಿಸಲುಗಳು ರಸ್ತೆಗೆ ಕಾಣಿಸುತ್ತಿದ್ದವು. ಈಗ ಅದು ಪುಟ್ಟ ಪೇಟೆಯಾಗಿದೆ. ಅಂಗಡಿಗಳು, ಹೋಟೆಲುಗಳು, ಒಂದು ಆಧುನಿಕ ಚರ್ಚ್ ಇವೆ. ರೆಸಾರ್ಟ್‌ಗಳಿವೆ. ಕಾಯ್ದಿಟ್ಟ ಅರಣ್ಯ ಅಲ್ಲಿಂದ ಪ್ರಾರಂಭವಾಗುತ್ತದೆ.

ಫೋಟೋಗ್ರಫಿ ಮತ್ತು ಸಫಾರಿಯಲ್ಲಿ ಆಸಕ್ತಿಯಿರುವ ಕೆಲವು ಮಿತ್ರರು ಒಂದೆರಡು ಬಾರಿ ಬಂಡಿಪುರಕ್ಕೆ ಸಫಾರಿಗೆ ಬರಲು ನನ್ನನ್ನು ಆಹ್ವಾನಿಸಿದ್ದರು. ವೆಚ್ಚದ ದೃಷ್ಟಿಯಿಂದ ಅವರೊಂದಿಗೆ ಹೋಗಲು ಸಾಧ್ಯವಾಗಿರಲಿಲ್ಲ. ಸಫಾರಿಯಿಂದ ಹಿಂದಿರುಗಿದ ಮಿತ್ರರು, "ನೀವು ಬಾರದಿದ್ದುದು ಒಳ್ಳೆಯದೇ ಆಯಿತು. ಕ್ಯಾಮರಾ ಕಣ್ಣಿಗೆ ಒಂದು ಪ್ರಾಣಿಯೂ ಕಾಣಿಸಲಿಲ್ಲ" ಎಂದು ತಮ್ಮ ಅನುಭವ ಹಂಚಿಕೊಂಡಾಗ ಸದ್ಯ ಪಾರಾದೆ ಎನ್ನಿಸಿತ್ತು.

ನಮ್ಮ ಸಫಾರಿ ಹಾಗಾಗಬಾರದು. ಅಲಿಯ ಮಕ್ಕಳು ಜೊತೆಗಿವೆ. ಪ್ರಾಣಿಗಳ ದರ್ಶನವಿಲ್ಲದೆ ನಮಗೆ ನಿರಾಶೆಯಾದರೂ ಚಿಂತೆಯಿಲ್ಲ. ಈ ಮಕ್ಕಳ ಸಲುವಾಗಿಯಾದರೂ ಅವು ನಮಗೆ ಮುಖ ತೋರಿಸಲೇಬೇಕು.

ರಸ್ತೆಯ ಎರಡೂ ಬದಿಯಲ್ಲಿ ಬೆಳೆದಿರುವ ಬಿದಿರು ಹಿಂಡುಗಳ ಮಧ್ಯೆ ಮೂರು ನಾಲ್ಕು ಕಿ. ಮೀ. ದಾಟಿದ ನಂತರ ರಸ್ತೆಯಲ್ಲಿ ಎದುರಿಗೆ ಬರುವ ವಾಹನಗಳನ್ನಲ್ಲದೆ, ಕಾಡನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಅಲಿ ಏನನ್ನೋ ಕಂಡು ಜೀಪಿನ ವೇಗ ತಗ್ಗಿಸಿದ. ರಸ್ತೆಯ ಎಡಬದಿಯಲ್ಲಿ ಕಾಡು ಹಂದಿಯೊಂದು ರಸ್ತೆ ದಾಟಲು ಕಾಯುತ್ತ ನಿಂತಿತ್ತು. ನಾನು ಕುಳಿತಲ್ಲಿಂದಲೇ ಅದರ ಒಂದೆರಡು ಫೋಟೋ ಕ್ಲಿಕ್ಕಿಸಿದೆ. ಮೊದಲಿಗೇ ವರಾಹ ದರ್ಶನ !

ಅಲಿ, 'ಎಡಾ ಪನ್ನಿ!' – ಎಂದ ಮಲಯಾಳದಲ್ಲಿ. 'ಎಲಾ ಹಂದಿ !' – ಎಂದರೆ ಅದು ಬೈಗುಳದ ಮಾತು. ಆದರೆ ಅಲಿ "ಹಂದಿ ನಿಂತಿದೆ ನೋಡು ಮಗನೆ !" – ಎಂದು ತನ್ನ ಮಗನನ್ನು ಉದ್ದೇಶಿಸಿ ಹೇಳಿದ ಮಾತು ಅದು.

ತೂಕಡಿಕೆಗೆ ಜಾರಿದ್ದ ಆದಿಲ್‌ನನ್ನು ಎಚ್ಚರಿಸಿ ಹಂದಿ ತೋರಿಸಿದೆವು. ನಾವು ಒಂದೆರಡು ನಿಮಿಷ ಅಲ್ಲಿ ನಿಂತಿದ್ದೆವು. ನಾವು ಮುಂದೆ ಹೋದ ನಂತರ ಅದು ರಸ್ತೆ ದಾಟಿರಬಹುದು !

ವನ್ಯಜೀವಿಗಳ ರಾತ್ರಿ ಸಂಚಾರಕ್ಕೆ ಭಂಗವಾಗಬಾರದೆಂಬ ಕಾರಣಕ್ಕೆ, ಬಂಡಿಪುರ ಮತ್ತು ಮುದುಮಲೆ ವನ್ಯಜೀವಿ ತಾಣಗಳ ಮಧ್ಯೆ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ. ಅದೇ ರೀತಿ ಹಗಲು ಪ್ರವಾಸಿಗಳ ಒತ್ತಡ ಹೆಚ್ಚಾಗಿ ವನ್ಯಜೀವಿಗಳಿಗೆ ಉಂಟಾಗುತ್ತಿದ್ದ ಕಿರಿಕಿರಿಯನ್ನು ತಪ್ಪಿಸಲೆಂದು ತೆಪ್ಪಕಾಡಿನಲ್ಲಿ ನಡೆಯುತ್ತಿದ್ದ ಆನೆಗಳ ದರ್ಶನ, ಸಫಾರಿ ಇತ್ಯಾದಿಯನ್ನು ಸಹ ನಿಷೇಧಿಸಲಾಗಿತ್ತು. ಇದರಿಂದ ಪ್ರಾಣಿಗಳು ನಿಸೂರಾಗಿ ತಿರುಗಾಡುತ್ತವೆ, ಸುಲಭವಾಗಿ ನೋಡಬಹುದು ಎನ್ನಿಸಿತು.

ವನ್ಯಜೀವಿಗಳಿಗೆ ಯಾವ ರೀತಿಯಲ್ಲೂ ಕಿರಿಕಿರಿಯುಂಟಾಗಬಾರದು, ಅದೇ ರೀತಿ ಮನುಷ್ಯರಿಗೂ ಅವುಗಳಿಂದ ಅಪಾಯವಾಗಬಾರದು ಎಂಬ ಉದ್ದೇಶದಿಂದ ಅರಣ್ಯ ಇಲಾಖೆಯವರು ಅಲ್ಲಲ್ಲಿ ಎಚ್ಚರಿಕೆಯ ಫಲಕಗಳನ್ನು ಹಾಕಿದ್ದಾರೆ. ಇಂಥ ಪ್ರಾಣಿಗಳು, ಪಕ್ಷಿಗಳು ಕಾಣಸಿಗುತ್ತವೆ ಎಂಬ ಮಾಹಿತಿಯೊಂದಿಗೆ, ಪ್ರಾಣಿಗಳು ರಸ್ತೆ ದಾಟುವಾಗ ವಾಹನ ನಿಲ್ಲಿಸಿರಿ, ಹಾರ್ನ್ ಬಾರಿಸಿ ಅವನ್ನು ಕೆಣುಕಬೇಡಿ, ವಾಹನದಿಂದ ಇಳಿಯಬೇಡಿ, ಪ್ಲಾಸ್ಟಿಕ್ ವಸ್ತುಗಳನ್ನು ಚೆಲ್ಲಬೇಡಿ, ಪ್ರಾಣಿಗಳಿಗೆ ತಿಂಡಿ ನೀಡಬೇಡಿ... ಇತ್ಯಾದಿ.

ಆದರೆ ಮನುಷ್ಯರೋ ಮಂದಬುದ್ಧಿಯ ವಿಚಿತ್ರ ಸ್ವಭಾವದವರು. ಆನೆಗಳು ತಮ್ಮಷ್ಟಕ್ಕೆ ಮೇವು ಮೇಯುತ್ತಿರುವಾಗ ಅಲ್ಲಿಯೇ ವಾಹನ ನಿಲ್ಲಿಸಿ ಶಿಳ್ಳೆ ಹಾಕುತ್ತಾರೆ. ಜೋರು ದನಿಯಲ್ಲಿ ಅವುಗಳೊಂದಿಗೆ ಮಾತಾಡಲು ಪ್ರಯತ್ನಿಸುತ್ತಾರೆ ಅಥವಾ ಬೆದರಿಸುತ್ತಾರೆ. ಮೊಬೈಲುಗಳಲ್ಲಿ ಫೋಟೋ ತೆಗೆಯುತ್ತಾರೆ, ಫ್ಲಾಶ್ ಹಾಕಬಾರದು ಎಂಬ ನಿಯಮ ಮೀರುತ್ತಾರೆ. ಆನೆಗಳು ಹಿನ್ನೆಲೆಯಲ್ಲಿರುವಂತೆ ಸೆಲ್ಫೀ ತೆಗೆಯುತ್ತಾರೆ !

ವನ್ಯಜೀವಿಗಳನ್ನು ಅವುಗಳಷ್ಟಕ್ಕೆ ಇರಲು ಬಿಡಿ, ಅವುಗಳಿಗೆ ಕಿರಿಕಿರಿಯಾಗದಂತೆ ನೋಡಿ ಸಂತೋಷಪಡುವುದನ್ನು ರೂಢಿಸಿಕೊಳ್ಳಿ – ಎಂಬುದನ್ನು ಅವರಿಗೆ ಯಾರು ಹೇಳಿಕೊಡಬೇಕು ?

ಅಲಿ ಆ ರಸ್ತೆಯಲ್ಲಿ ಅನೇಕ ಬಾರಿ ತಿರುಗಾಡಿದ ಅನುಭವವಿದ್ದವ. ಪ್ರಾಣಿಗಳು ಕಣ್ಣಿಗೆ ಬಿದ್ದಾಗ ನಾವಿರುವಲ್ಲಿಂದಲೇ ಅವುಗಳ ಫೋಟೋ ತೆಗೆಯಲು ಅನುಕೂಲವಾಗುವಂತೆ ಜೀಪಿನ ವೇಗ ತಗ್ಗಿಸುತ್ತಿದ್ದ, ಅಪಾಯಕಾರಿ ಪ್ರಾಣಿಗಳಲ್ಲದಿದ್ದರೆ ಜೀಪು ನಿಲ್ಲಿಸುತ್ತಿದ್ದ. ರಸ್ತೆ ನಿಯಮ ಮೀರುವ, ಬೇಜವಾಬ್ದಾರಿ ತೋರಿಸುವ ಡ್ರೈವರ್‌ಗಳಿಗೆ 'ಅಣ್ಣಾ' ಎಂದು ವಿನಯದಿಂದ ಅವರ ತಪ್ಪು ತಿದ್ದಲು ಪ್ರಯತ್ನಿಸುತ್ತಿದ್ದ. ಕ್ಷೇತ್ರಕಾರ್ಯಕ್ಕಾಗಿ ನಮ್ಮನ್ನು ಆದಿವಾಸಿ ಗ್ರಾಮಗಳಿಗೆ ಕರೆದೊಯ್ಯುವಾಗಲೂ ಅಲಿಯದು ಅದೇ ಜಾಗರೂಕ ನಡವಳಿಕೆ !

ತಮ್ಮನ್ನು ಸಫಾರಿಗೆ ಕರೆದೊಯ್ಯಲು ಅಪ್ಪ ಒಪ್ಪಿದ ಸಂತೋಷದಲ್ಲಿ ಆದಿಲ್ ಮಧ್ಯಾಹ್ನ ಊಟವನ್ನೂ ಮಾಡದೆ ಹೊರಟುಬಂದಿದ್ದ ! ತೆಪ್ಪಕಾಡಿನಲ್ಲಿ ಏನಾದರೂ ಕೊಡಿಸಬಹುದಿತ್ತು. ಆದರೆ ಯಾವಾಗಲೂ ಜನರಿಂದ ತುಂಬಿರುತ್ತಿದ್ದ ತೆಪ್ಪಕಾಡು ಜಂಕ್ಷನ್ ಬಿಕೊ ಎನ್ನುವಂತಿತ್ತು ! ಟೂರಿಸ್ಟ್ ಚಟುವಟಿಕೆಗಳನ್ನು ನಿಷೇಧಿಸಿದ್ದುದರಿಂದ ಅಲ್ಲಿದ್ದ ಟೀ ಅಂಗಡಿಗಳನ್ನು ಮುಚ್ಚಿದ್ದರು.

ತೆಪ್ಪಕಾಡಿನಿಂದ ಕಕ್ಕನಳ್ಳದ ಕಡೆಗೆ ಆರೇಳು ಕಿ. ಮೀ. ಹೋಗಿ ಹಿಂದಿರುಗಿದೆವು. ಅಲ್ಲಿಂದ ಮಸಣಗುಡಿ ರಸ್ತೆಯಲ್ಲಿ ಆರೇಳು ಕಿ.ಮೀ. ಹೋದೆವು. ಕಾಡು ಹಂದಿ, ಕಾಡೆಮ್ಮೆ, ಜಿಂಕೆ ಹಿಂಡು, ಆನೆಗಳು, ನವಿಲು, ಪ್ರವಾಸಿಗರು ನೀಡಿದ ತಿಂಡಿ ತಿಂದು ಅವರ ವಾಹನದ ಮೇಲೇರಿ ಅವರನ್ನು ಕಾಡಿಸುತ್ತಿದ್ದ ಕಪಿಗಳ ಹಿಂಡು – ಹೀಗೆ ಎಲ್ಲವನ್ನೂ ನೋಡುತ್ತ ಸಫಾರಿಯ ತೃಪ್ತಿ ಅನುಭವಿಸಿದೆವು. ಆದಿಲ್ ಹಸಿವನ್ನು ಮರೆತಿದ್ದ !

ಸೂರ್ಯ ಪಶ್ಚಿಮದತ್ತ ಇಳಿಯತೊಡಗಿದ್ದ. ಆ ಬೆಳಕಿನಲ್ಲಿಯೇ ಕೆಲವು ಫೋಟೋ ತೆಗೆಯಲು ಸಾಧ್ಯವಾಯಿತು.

ಅಲಿ ಹೇಳಿದ : "ನೀವು ಅದೃಷ್ಟವಂತರು ಸಾರ್ ! ಒಂದೊಂದು ದಿನ ಯಾವ ಪ್ರಾಣಿಯೂ ಕಣ್ಣಿಗೆ ಬೀಳುವುದಿಲ್ಲ. ಮಕ್ಕಳಿಗೂ ಖುಷಿಯಾಗಿದೆ, ಇದನ್ನ ಕೇಳಿದರೆ ಇವರ ಅಮ್ಮ ತನ್ನನ್ನು ಕರೆದೊಯ್ಯಲಿಲ್ಲ ಎಂದು ತರಾಟೆಗೆ ತೆಗೆದುಕೊಳ್ಳುತ್ತಾಳೆ !"

ಪ್ರಾಯಶಃ ಮಕ್ಕಳ ಅದೃಷ್ಟವೇ ಇರಬೇಕು! ಪ್ರಾಣಿಗಳು ದರ್ಶನ ನೀಡಿದವು ! ತೊರಪಳ್ಳಿಗೆ ಹಿಂದಿರುಗುವಷ್ಟರಲ್ಲಿ ಆದಿಲ್ ಹಸಿವಿನಿಂದ ಸೊರಗಿಹೋಗಿದ್ದ. ಅಲ್ಲಿ ಬಿಸಿ ಬಿಸಿ ಬೋಂಡಾ ತಿಂದು ಚಾ ಕುಡಿದ ನಂತರ ಗೆಲುವಾದ. 'ನಮ್ಮ ಮೊಮ್ಮಕ್ಕಳನ್ನು ಕರೆತರಬೇಕಾಗಿತ್ತು !' ಎಂಬ ಬಯಕೆಯನ್ನು ಆದಿಲಾ–ಆದಿಲ್ ಪೂರೈಸಿದ್ದರು !

ಅಂದಿನ ನಮ್ಮ ಸಫಾರಿ ನಿಸರ್ಗ ಸ್ನೇಹಿ, ಪ್ರಾಣಿ ಸ್ನೇಹಿ ಸಫಾರಿಯಾಗಿತ್ತು. ನೆನಪಿನಲ್ಲಿ ಬಹಳ ಕಾಲ ಉಳಿಯುವಂಥದಾಗಿತ್ತು. ಒಂದು ಅರ್ಥದಲ್ಲಿ ನಮ್ಮದು, 'ಆರಾಮ ಸಫಾರಿ !', ಬೆಟ್ಟ ಹತ್ತಿ ಇಳಿಯುವ, ಕಾಡಿನಲ್ಲಿ ನಡೆಯುವ, ಹೊಳೆ ದಾಟುವ, ಪ್ರಾಣಿಗಳ ದರ್ಶನಕ್ಕಾಗಿ ಉಸಿರು ಬಿಗಿಹಿಡಿದು ಕಾಯುವ ಶ್ರಮವಿಲ್ಲದ ಸಫಾರಿ.

---

ಚಿತ್ರಲೇಖನ : **ಪರಂಜ್ಯೋತಿ**
ನಂ. ೧೦, ೧ನೇ ಮಹಡಿ, ೨೧–ಬಿ ಕ್ರಾಸ್, ಶ್ರೀರಾಮ ದೇವಾಲಯ ರಸ್ತೆ, ಈಜಿಪುರ, ವಿವೇಕನಗರ ಅಂಚೆ, ಬೆಂಗಳೂರು –೫೬೦ ೦೪೭

## ಬ್ರಿಟನ್ ಮತ್ತು ಯೂರೋಪಿಯನ್ ಯೂನಿಯನ್

ಇಪ್ಪತ್ತೊಂದನೇ ಶತಮಾನದ ಪ್ರಾರಂಭದಲ್ಲಿ ಬಂಡವಾಳಶಾಹಿ ದೇಶಗಳಲ್ಲಿ ತಲೆದೋರಿದ ಆರ್ಥಿಕ ಮುಗ್ಗಟ್ಟು ಯೂರೋಪಿಯನ್ ಯೂನಿಯನ್ ಸಂಘಟನೆಯ ಮುಂದುವರಿಕೆಯನ್ನೇ ಆತಂಕಕ್ಕೀಡುಮಾಡಿತ್ತು. ಅದಾದ ಮೇಲೆ ಯೂರೋಪಿನ ಅತ್ಯಂತ ಚಿಕ್ಕ ಹಾಗೂ ಪುರಾತನ ರಾಷ್ಟ್ರ ಗ್ರೀಸಿನಲ್ಲಿ ತಲೆದೋರಿದ ಆರ್ಥಿಕ ಪರಿಸ್ಥಿತಿ, ಹಣಕಾಸಿನ ಬಿಕ್ಕಟ್ಟು ಹಾಗೂ ಸಾಲದ ಹೊರೆ ಯೂರೋಪಿನ ಈ ಸಂಘಟನೆಯ ಬುಡವನ್ನೇ ಅಲುಗಾಡಿಸಿತ್ತು. ಈಗ ಈ ವರ್ಷ ಜೂನ್ ತಿಂಗಳಲ್ಲಿ ಬ್ರಿಟನ್ ಈ ಯೂನಿಯನ್ನಿನಲ್ಲಿ ಇರಬೇಕೆ ಬೇಡವೆ ಎನ್ನುವುದು ನಿರ್ಧಾರವಾಗಲಿದೆ. ಬ್ರಿಟನ್ನಿನ ಪ್ರಧಾನಿ ಡೇವಿಡ್ ಕಾಮೆರೂನ್ ಈ ವಿಷಯ ಕುರಿತು ಜೂನ್ ೨೩ರಂದು ಜನಮತ ಗಣನೆ ನಡೆಸಲು ತೀರ್ಮಾನಿಸಿದ್ದಾರೆ. ಫಲಿತಾಂಶ ಏನೇ ಆದರೂ ಅದು ಯೂನಿಯನ್ನಿನ ಭವಿಷ್ಯದ ಮೇಲೆ ಏನೂ ಪರಿಣಾಮ ಬೀರದು ಎಂದು ಹೇಳಲಾಗುತ್ತಿದೆ. ಏಕೆಂದರೆ ಬ್ರಿಟನ್ ಸಂಘಟನೆಯ ಪ್ರಮುಖ ರಾಷ್ಟ್ರಗಳಲ್ಲಿ ಒಂದಾಗಿದ್ದರೂ ಒಂದು ರೀತಿ ಹೊರಗೇ ಉಳಿದಿದೆ ಎನ್ನಬಹುದು. ಈ ಒಕ್ಕೂಟದ ಎಲ್ಲ ಸೌಲಭ್ಯಗಳನ್ನೂ ಅನುಭವಿಸುತ್ತಿರುವ ಬ್ರಿಟನ್‌ಗೆ ಆರ್ಥಿಕವಾಗಿ ಹೆಚ್ಚು ನಷ್ಟವಾದೀತೆ ಹೊರತು ಸಂಘಟನೆಯ ಮೇಲೆ ಏನೂ ಪರಿಣಾಮ ಬೀರದು ಎಂಬ ಅಭಿಪ್ರಾಯ ಇದೆ.

ಶೀತಯುದ್ಧದ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಯೂರೋಪಿಯನ್ ಆರ್ಥಿಕ ಸಮುದಾಯವೇ ಮುಂದೆ ಯೂರೋಪಿಯನ್ ಯೂನಿಯನ್ ಎಂದಾಯಿತು. ಮುಕ್ತ ವ್ಯಾಪಾರ ವಹಿವಾಟೇ ಈ ಒಕ್ಕೂಟದ ಆಧಾರ. ೧೯೪೯ರಲ್ಲಿ ಸೋವಿಯೆತ್ ಯೂನಿಯನ್ ಮತ್ತು ಪೂರ್ವ ಯೂರೋಪಿನ ದೇಶಗಳು ಪರಸ್ಪರ ಸಹಕಾರಕ್ಕಾಗಿ ಒಂದು ಸಂಘಟನೆ ಸ್ಥಾಪಿಸಿಕೊಂಡವು. ಕೌನ್ಸಿಲ್ ಫಾರ್ ಮ್ಯೂಚುಯಲ್ ಎಕನಾಮಿಕ್ ಅಸಿಸ್ಟೆನ್ಸ್, ಹ್ರಸ್ವವಾಗಿ ಸಿಎಂಇಎ ಎಂದು ಅದು ಆಗ ಪ್ರಸಿದ್ಧವಾಗಿತ್ತು. ಇದಕ್ಕೆ ಸಮವಾಗಿ ಹತ್ತು ವರ್ಷಗಳಾದ ಮೇಲೆ ೧೯೫೭ರಲ್ಲಿ ಪಶ್ಚಿಮ ರಾಷ್ಟ್ರಗಳು ಯೂರೋಪಿನ ಆರ್ಥಿಕ ಸಮುದಾಯ, ಇಂಗ್ಲಿಷಿನಲ್ಲಿ ಯೂರೋಪಿಯನ್ ಎಕನಾಮಿಕ್ ಕಮ್ಯುನಿಟಿ (ಇಇಸಿ) ಸ್ಥಾಪಿಸಿಕೊಂಡವು. ಪ್ರಾರಂಭದಲ್ಲಿ ಅದು ಜರ್ಮನಿ, ಫ್ರಾನ್ಸ್, ಇಟಲಿ, ಬೆಲ್ಜಿಯಮ್, ನೆದರ್‌ಲ್ಯಾಂಡ್ಸ್, ಲಕ್ಸೆಂಬರ್ಗ್, ಡೆನ್ಮಾರ್ಕ್, ಗ್ರೇಟ್‌ಬ್ರಿಟನ್ ಈ ಎಂಟು ದೇಶಗಳನ್ನು ಒಳಗೊಂಡಿದ್ದುವು. ಈ ದೇಶಗಳ ಮಧ್ಯೆ ಸರಕು ಸಾಗಾಣಿಕೆಗೆ ವಿಧಿಸಲಾಗುತ್ತಿದ್ದ ಸುಂಕವನ್ನು ಏಕರೂಪಗೊಳಿಸಿ, ಮುಕ್ತ ವ್ಯವಹಾರ ನಡೆಸುವುದು ಮುಖ್ಯ ಉದ್ದೇಶವಾಗಿತ್ತು. ಕೆಲವು ವರ್ಷಗಳ ನಂತರ ಈ ಸಮುದಾಯ ವಿಸ್ತಾರಗೊಂಡು ಯೂರೋಪಿಯನ್ ಯೂನಿಯನ್ ಎಂದಾಯಿತು. ಈ ಒಕ್ಕೂಟ ರಾಜಕೀಯಕ್ಕಿಂತ ಮಿಗಿಲಾಗಿ ಆರ್ಥಿಕ ಆಧಾರದ ಮೇಲೆ ರೂಪುಗೊಂಡಿತ್ತು. ಮೊದಲಿನಲ್ಲಿ ಯೂರೋಪಿಯನ್ ಯೂನಿಯನ್ ಒಂದು ಸಾಮಾನ್ಯ ಮಾರುಕಟ್ಟೆಯ ಸ್ಥಾಪನೆ ಮತ್ತು ಮುಕ್ತ ವಾಣಿಜ್ಯ ವಲಯ ರೂಪಿಸುವ ಗುರಿ ಹೊಂದಿತ್ತು. ಯೂರೋಪಿನ ೨೮ ರಾಷ್ಟ್ರಗಳ ಸದಸ್ಯತ್ವ ಹೊಂದಿರುವ ಈ ಒಕ್ಕೂಟ ಸಾಕಷ್ಟು ದೀರ್ಘ ಕಾಲದಿಂದ ಉಳಿದುಕೊಂಡು ಬಂದಿರುವುದಾಗಿದೆ. ಅದು ತನ್ನದೇ ಆದ ಪ್ರಾತಿನಿಧ್ಯ ನಿಯಮಗಳನ್ನು, ಸದಸ್ಯರಾಷ್ಟ್ರಗಳ ಪ್ರತಿನಿಧಿಗಳನ್ನು ಒಳಗೊಂಡ ಒಂದು ಪಾರ್ಲಿಮೆಂಟ್ ಹಾಗೂ ಆಡಳಿತ ಮಂಡಳಿಯನ್ನು ಹೊಂದಿದೆ. ಬ್ರಿಟನ್, ಸ್ವಿಟ್ಜರ್ಲೆಂಡ್ ಮುಂತಾದ ಕೆಲವು ದೇಶಗಳನ್ನು ಬಿಟ್ಟು ಉಳಿದೆಲ್ಲ ದೇಶಗಳೂ 'ಷೆಂಗೆನ್ ವೀಸಾ' ಎಂದು ಕರೆಯುವ ಏಕರೂಪದ ವೀಸಾ ವ್ಯವಸ್ಥೆಯನ್ನು ಜಾರಿಗೆ ತಂದಿವೆ. ಇದರಿಂದಾಗಿ ಈ ದೇಶಗಳ ಮಧ್ಯೆ ಜನಸಂಚಾರವನ್ನು ಮುಕ್ತವಾಗಿಸಿವೆ. ಹಾಗೆಯೇ ಈ ದೇಶಗಳು ಹಿಂದಿನಿಂದ ಬಂದಿದ್ದ ತಮ್ಮ ಕರೆನ್ಸಿಯನ್ನು ರದ್ದುಗೊಳಿಸಿ 'ಯೂರೋ' ಎಂಬ ಏಕರೂಪದ ನಾಣ್ಯವನ್ನು ಜಾರಿಗೆ ತಂದಿದೆ. ಬ್ರಿಟನ್ ಹಾಗೂ ಕೆಲ ದೇಶಗಳು ಮಾತ್ರ ಈ ಏಕರೂಪದ ನಾಣ್ಯದಿಂದ ಹೊರಗುಳಿದಿವೆ. ಪ್ರವಾಸಿಗರು ಷೆಂಗೆನ್ ವೀಸಾ ಪಡೆದುಕೊಂಡು ಯೂರೋಪಿನ ಒಕ್ಕೂಟದ ಸದಸ್ಯರಾಷ್ಟ್ರಗಳಲ್ಲಿ ಮುಕ್ತವಾಗಿ ಸಂಚರಿಸಬಹುದು.

ಇಷ್ಟೆಲ್ಲ ಆದರೂ ಯೂರೋಪಿನ ದೇಶಗಳು ಹಲವು ಹತ್ತು ಸಮಸ್ಯೆಗಳನ್ನು ಎದುರಿಸುತ್ತಿವೆ. ಕಳೆದೊಂದು ದಶಕದಲ್ಲಿ ತಲೆದೋರಿದ ಆರ್ಥಿಕ ಮುಗ್ಗಟ್ಟು ಹಾಗೂ ಸ್ಪೇನ್, ಇಟಲಿ, ಗ್ರೀಸ್ ಮುಂತಾದ ದೇಶಗಳ ಸಾಲದ ಹೊರೆಯಿಂದ ಒಕ್ಕೂಟ ತತ್ತರಿಸುತ್ತಿತ್ತು. ಒಂದು ಹಂತದಲ್ಲಿ ಗ್ರೀಸ್ ಒಕ್ಕೂಟದಿಂದ ಹೊರಹೋಗುವ ವಿಚಾರವೂ ಇತ್ತು. ಈಗ ಯೂರೋಪಿನ ದೇಶಗಳು ಎದುರಿಸುತ್ತಿರುವ ಬಹು ದೊಡ್ಡ ಸಮಸ್ಯೆ ಎಂದರೆ ನಿರಾಶ್ರಿತರ ಸಮಸ್ಯೆ. ಪಶ್ಚಿಮ ಏಶಿಯಾದ ರಾಷ್ಟ್ರಗಳಲ್ಲಿನ, ಮುಖ್ಯವಾಗಿ ಇರಾಕ್, ಸಿರಿಯ ಮೊದಲಾದ ದೇಶಗಳಲ್ಲಿನ ರಾಜಕೀಯ ಅಸ್ಥಿರತೆಯಿಂದಾಗಿ ನಿರಾಶ್ರಿತರ ಸಮಸ್ಯೆ ಉಲ್ಬಣಗೊಂಡಿದೆ. ಆರ್ಥಿಕವಾಗಿ ಅದು ಈ ರಾಷ್ಟ್ರಗಳಿಗೆ ಹೊರೆಯಾಗಿದೆ. ನಿರುದ್ಯೋಗ ಮತ್ತು ಆಗಾಗ ಸಂಭವಿಸುವ ಬಂಡವಾಳಶಾಹಿ ಆರ್ಥಿಕ ಮುಗ್ಗಟ್ಟು ಈ ಒಕ್ಕೂಟದ ದೌರ್ಬಲ್ಯವನ್ನು ಹೆಚ್ಚಿಸುತ್ತಿರುತ್ತದೆ.

ಯೂರೋಪು ಖಂಡದ ಭೂಭಾಗದಿಂದ ಹೊರಗಿರುವ ಗ್ರೇಟ್‌ಬ್ರಿಟನ್ ಒಂದು ರೀತಿಯಲ್ಲಿ ಯೂರೋಪಿಯನ್ ಯೂನಿಯನ್ನಿನಿಂದ ಹೊರಗೇ ಇದೆ ಎನ್ನಬಹುದು. ಹಲವು ರಿಯಾಯಿತಿಗಳನ್ನು ಪಡೆದುಕೊಂಡು ಅದು ಈ ಒಕ್ಕೂಟದಲ್ಲಿ ಮುಂದುವರಿಯುತ್ತಿದೆ. ೧೯೮೦ರಲ್ಲಿ ಮಾರ್ಗರೇಟ್ ಥ್ಯಾಚರ್ ಬ್ರಿಟನ್ನಿನ ಪ್ರಧಾನಿಯಾಗಿದ್ದಾಗ ಸದಸ್ಯರಾಷ್ಟ್ರಗಳ ರಾಜಕೀಯದಲ್ಲಿ ಯೂರೋಪಿಯನ್ ಯೂನಿಯನ್ ಮೂಗು ತೂರಿಸುತ್ತಿದೆ ಎಂದು ಆಪಾದಿಸಿದ್ದರು. ಸದಸ್ಯರಾಷ್ಟ್ರಗಳ ಹಣಕಾಸಿನ ಹಾಗೂ ಆರ್ಥಿಕ ವ್ಯವಹಾರಗಳಲ್ಲಿ ತಲೆ ಹಾಕುತ್ತಿರುವುದನ್ನು ತೀವ್ರವಾಗಿ ವಿರೋಧಿಸಿದ್ದರು. ಹತ್ತು ವರ್ಷಗಳ ಹಿಂದೆ ಲೇಬರ್ ಪಕ್ಷದ ಟೋನಿಬ್ಲೇರ್ ಬ್ರಿಟನ್ನಿನ ಪ್ರಧಾನಿಯಾಗಿದ್ದಾಗ ಬ್ರಿಟನ್ ಯೂರೋ ಕರೆನ್ಸಿ ಅಂಗೀಕರಿಸುವ ಬಗ್ಗೆ ಸೂಚನೆ ನೀಡಿದ್ದರು. ಆದರೆ ಅಂತಿಮವಾಗಿ ಹಿಂದಿನಿಂದ ಬಂದಿರುವ ಪೌಂಟ್‌ಸ್ಟರ್ಲಿಂಗ್‌ಗೆ ಅಂಟಿಕೊಳ್ಳಲು ನಿರ್ಧರಿಸಿದರು. ಈಗ ಯೂರೋಪಿಯನ್ ಯೂನಿಯನ್ನಿನಲ್ಲಿ ಇರಬೇಕೆ ಎನ್ನುವ ಪ್ರಶ್ನೆಯ ಬಗ್ಗೆಯೂ ಬ್ರಿಟನ್ನಿನಲ್ಲಿ ಒಮ್ಮತವಿಲ್ಲ. ಪ್ರಧಾನಿ ಕಾಮೆರೂನ್ ಮುಂದುವರಿಕೆಯ ಪರವಾಗಿದ್ದರೂ, ಅವರ ಪಕ್ಷದವರೇ ಆದ ಹಲವು ಸಚಿವರುಗಳು ವಿರೋಧವಾಗಿದ್ದಾರೆ. ಕನ್ಸರ್‌ವೇಟಿವ್ ಪಕ್ಷದ ಲಂಡನ್ ಮೇಯರ್ ಕೂಡ ವಿರೋಧವಿದ್ದಾರೆ. ಲೇಬರ್ ಪಕ್ಷ, ಲಿಬರಲ್ ಡೆಮಾಕ್ರಟಿಕ್ ಪಕ್ಷ ಮತ್ತು ಸ್ಕಾಟಿಷ್ ನ್ಯಾಷನಲಿಸ್ಟ್ ಪಕ್ಷಗಳು ಯೂರೋಪಿಯನ್ ಯೂನಿಯನ್ನಿನ ಸದಸ್ಯತ್ವದ ಪರವಾಗಿದ್ದರೂ, ಈ ಪಕ್ಷಗಳಲ್ಲೂ ಒಮ್ಮತವಿಲ್ಲ. ಹಾಗಾಗಿ ಜೂನ್ ತಿಂಗಳಲ್ಲಿ ನಡೆಯುವ ಜನಮತ ಗಣನೆ ಅನಿಶ್ಚಿತತೆ ಜೊತೆಗೆ ಕುತೂಹಲವನ್ನು ಹೆಚ್ಚಿಸಿದೆ.

## ಸಿರಿಯಾ ಯುದ್ಧ – ಕೆಲವು ಅಂಕಿಅಂಶಗಳು

ಸಿರಿಯಾದ ಯುದ್ಧ ಈಗ ಆರನೇ ವರ್ಷಕ್ಕೆ ಕಾಲಿರಿಸುತ್ತಿದೆ. ಅದು ಅಂತರ್ಯುದ್ಧ, ಅಂತರರಾಷ್ಟ್ರೀಯ ಯುದ್ಧ ಎರಡೂ ಆಗಿದೆ. ಸಿರಿಯಾದ ಅಧ್ಯಕ್ಷ ಅಸ್ಸಾದ್ ಸರಕಾರವನ್ನು ಪದಚ್ಯುತಗೊಳಿಸಲು ಅಮೆರಿಕ ಎತ್ತಿ ಕಟ್ಟಿದ ಸಂಘಟನೆಗಳು ಈಗ ಅದಕ್ಕೇ ಮುಳುವಾಗಿದೆ. ಸಿರಿಯಾದ ಭೂಭಾಗದಲ್ಲಿ ಶೇ. ೪೦ರಷ್ಟನ್ನು ಆಕ್ರಮಿಸಿಕೊಂಡು 'ಇಸ್ಲಾಮಿಕ್ ರಾಜ್ಯ' ಸ್ಥಾಪಿಸಿಕೊಂಡಿರುವ ಭಯೋತ್ಪಾದಕರನ್ನು ಇರಾನ್, ಇರಾಕ್, ಲೆಬನಾನ್, ಅಫ್ಘಾನಿಸ್ತಾನಗಳಿಂದ, ಇತರ ದೇಶಗಳಿಂದ ಬರುತ್ತಿರುವ ಉಗ್ರಗಾಮಿಗಳು ಬೆಂಬಲಿಸುತ್ತಿದ್ದಾರೆ. ಪ್ರಪಂಚದ ಅತ್ಯಂತ ಪ್ರಾಚೀನ ನಾಗರಿಕತೆಗೆ ತವರು ಎನಿಸಿರುವ ಸಿರಿಯಾ ಪಶ್ಚಿಮ ಏಶಿಯದ ದೊಡ್ಡ ದೇಶಗಳಲ್ಲಿ ಒಂದು. ಸುಮಾರು ಎರಡು ಲಕ್ಷ ಚದರಕಿಲೋಮೀಟರಿನಲ್ಲಿ ಹರಡಿಕೊಂಡಿರುವ ಈ ದೇಶದ ಜನಸಂಖ್ಯೆ ಹೆಚ್ಚುಕಡಿಮೆ ಒಂದೂವರೆ ಕೋಟಿ. ಅಂತರ್ಯುದ್ಧದ ಐದು ವರ್ಷಗಳಲ್ಲಿ ೨೬೦,೦೦೦ ಮಂದಿ ಸಾವನ್ನಪ್ಪಿದ್ದಾರೆ. ೨೫೦,೦೦೦ ಮಕ್ಕಳು, ೪೮೦,೦೦೦ ಜನರು ಆಕ್ರಮಿತ ಪ್ರದೇಶದಲ್ಲಿದ್ದಾರೆ; ೪೬,೦೦,೦೦೦ ಜನ ನಿರಾಶ್ರಿತರಾಗಿದ್ದಾರೆ. ಹೆಚ್ಚಾಗಿ ಯೂರೋಪಿನ ದೇಶಗಳಿಗೆ, ನೆರೆಯ ಅರಬ್ ದೇಶಗಳಿಗೆ ವಲಸೆ ಹೋಗಿದ್ದಾರೆ. ೨೦೧೪ರಿಂದ ಅಮೆರಿಕ ಮತ್ತು ಮಿತ್ರರಾಷ್ಟ್ರಗಳು ಇಸ್ಲಾಮಿಕ್ ಉಗ್ರರ ಮೇಲೆ ವೈಮಾನಿಕ ದಾಳಿ ನಡೆಸುತ್ತಿವೆ. ಈಚೆಗೆ ರಷ್ಯ ಕೂಡ ಅಧ್ಯಕ್ಷ ಅಸ್ಸಾದ್ ಬೆಂಬಲಕ್ಕೆ ನಿಂತು ಆಕ್ರಮಿತ ಪ್ರದೇಶದ ಮೇಲೆ ಬಾಂಬು ದಾಳಿ ನಡೆಸುತ್ತಿದೆ. ಈ ಭೂಭಾಗದಲ್ಲಿ ಶಾಂತಿಸ್ಥಾಪನೆಗೆ ಪ್ರಯತ್ನಗಳೇನೋ ನಡೆಯುತ್ತಿವೆ, ಆದರೆ ಅದಾವುದೂ ಫಲಕಾರಿಯಾಗಿಲ್ಲ.

* * *

ಅಮೆರಿಕ ಪ್ರಪಂಚದ ೮೦ ದೇಶಗಳಲ್ಲಿ ತನ್ನ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ೮೦೦ ಸೇನಾ ನೆಲೆಗಳನ್ನು ಹೊಂದಿದೆ. ಯಾವುದೇ ಸಂದರ್ಭದಲ್ಲಿ ಎಲ್ಲಿಯೇ ಆಗಲಿ ವೈಮಾನಿಕ ದಾಳಿ ನಡೆಸುವ ಸಾಮರ್ಥ್ಯ ಹೊಂದಿದೆ. ರಷ್ಯ ಆಗಲಿ, ಚೀಣಾ ಆಗಲಿ, ಬೇರಾವ ದೇಶವೇ ಆಗಲಿ ಅಂಥ ಜಾಲವನ್ನು ಹೊಂದಿಲ್ಲ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ,
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫










# ಭರವಸೆಯ ಯುವ ಪ್ರತಿಭೆ

## ದೀಪಕ ಬಿ.

ಮೂಲತಃ ಬಳ್ಳಾರಿ ಜಿಲ್ಲೆಯ ಹೊಸಪೇಟೆಯವರಾದ ದೀಪಕ ಚಿತ್ರಕಲೆಯನ್ನು ಹವ್ಯಾಸವನ್ನಾಗಿ, ವೃತ್ತಿಯನ್ನಾಗಿ ಆಯ್ಕೆ ಮಾಡಿಕೊಂಡ ಪ್ರತಿಭಾವಂತ. ಪ್ರಸ್ತುತ ಧಾರವಾಡದ ಚಿತ್ತಾರ ಕಲಾ ಬಳಗದ ಪ್ರಮುಖರಲ್ಲಿ ಅವರೂ ಒಬ್ಬರು. ಧಾರವಾಡದ ಭಾರತೀಯ ಕಲಾ ಕೇಂದ್ರದಲ್ಲಿ ಚಿತ್ರಕಲೆಯಲ್ಲಿ ಡಿಪ್ಲೊಮಾ, ಸರಕಾರಿ ಚಿತ್ರಕಲಾ ಮಹಾವಿದ್ಯಾಲಯದಲ್ಲಿ ಬಿ.ಎಫ್.ಎ. ಪದವಿ ಪಡೆದಿದ್ದಾರೆ. ಇವರ ಸಂಬಂಧಿ ಮತ್ತು ಮಾರ್ಗದರ್ಶಿಯಾದ ಹಿರಿಯ ಕಲಾವಿದ ಮಾರುತಿ ಬಾಣದ ಅವರಿಂದ ಸ್ಫೂರ್ತಿ ಪಡೆದ ದೀಪಕ, ಅವರ ಜೊತೆಯಲ್ಲಿಯೇ ಚಿತ್ತಾರ ಕಲಾಬಳಗದಲ್ಲಿ ಕಲಾಕೃತಿಗಳ ರಚನೆಯೊಂದಿಗೆ ಕಂಪ್ಯೂಟರ್ ಗ್ರಾಫಿಕ್ ಕೆಲಸವನ್ನು ಮಾಡುತ್ತಿದ್ದಾರೆ.

ಬಣ್ಣದ ಸಿರಿ, ವುಮೆನ್ ವಿಥ್ ನೇಚರ್, ಉತ್ತರಾಖಂಡ್ ಜಲಪ್ರವಾಹ ಹೆಸರಿನ ಸರಣಿ ಕಲಾಕೃತಿಗಳನ್ನು ದೀಪಕ ರಚಿಸಿ, ಪ್ರದರ್ಶನ ಮಾಡಿದ್ದಾರೆ. ಮೂರ್ತ, ಅಮೂರ್ತ ಶೈಲಿ, ಜಾನಪದ ಕಲಾ ಪ್ರಕಾರಗಳಲ್ಲಿ ಆಸಕ್ತಿ ಹೊಂದಿರುವ ದೀಪಕ ಬೆಳೆಯುತ್ತಿರುವ ಭರವಸೆಯ ಕಲಾವಿದ.

– ಚಿತ್ರಲೇಖಾ













Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

